# ಯಲಬುರ್ಗ ಪಟ್ಟಣ : ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ನಿಬಂಧ)


ಸಂಶೋಧಕರು
ಗಂಗಾಧರ ಪಾಟೀಲ

ಮಾರ್ಗದರ್ಶಕರು
ಡಾ. ಎಸ್. ವೈ. ಸೋಮಶೇಖರ್
ಸಹಾಯಕ ಪ್ರಾಧ್ಯಾಪಕರು







ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ [illegible]

[illegible]

# ಯಲಬುರ್ಗ ಪಟ್ಟಣ : ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ನಿಬಂಧ)



ಸಂಶೋಧಕರು

**ಗಂಗಾಧರ ಪಾಟೀಲ**

ಮಾರ್ಗದರ್ಶಕರು

**ಡಾ. ಎಸ್. ವೈ. ಸೋಮಶೇಖರ್**

ಸಹಾಯಕ ಪ್ರಾಧ್ಯಾಪಕರು



ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬
೨೦೧೫

## ಘೋಷಣಾ ಪತ್ರ

**ಯಲಬುರ್ಗ ಪಟ್ಟಣ : ಸಾಂಸ್ಕೃತಿಕ ಅಧ್ಯಯನ** ಎಂಬ ನಿಬಂಧನವನ್ನು **ಡಾ.ಎಸ್.ವೈ.ಸೋಮಶೇಖರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ **ಎಂ.ಫಿಲ್** ಪದವಿಗಾಗಿ **ಕನ್ನಡ ವಿಶ್ವವಿದ್ಯಾಲಯಕ್ಕೆ** ಸಾದರಪಡಿಸುತ್ತಿದ್ದೇನೆ. ಈ ನಿಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಗೊಳಿಸಿಲ್ಲ. ಇದು ನನ್ನ ಸ್ವತಂತ್ರವಾದ ಸಂಶೋಧನಾ ಅಧ್ಯಯನವಾಗಿದೆ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸಂಶೋಧಕರು

**(ಗಂಗಾಧರ ಪಾಟೀಲ)**
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ದಿನಾಂಕ: 31/7/15
ಸ್ಥಳ : ವಿದ್ಯಾರಣ್ಯ

# ಮಾರ್ಗದರ್ಶಕರ ಪ್ರಮಾಣ ಪತ್ರ

**ಯಲಬುರ್ಗ ಪಟ್ಟಣ: ಸಾಂಸ್ಕೃತಿಕ ಅಧ್ಯಯನ** ಎಂಬ ನಿಬಂಧನವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ **ಗಂಗಾಧರ ಪಾಟೀಲ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

(ಡಾ.ಎಸ್.ವೈ.ಸೋಮಶೇಖರ್)
ಸಹಾಯಕ ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ದಿನಾಂಕ:
ಸ್ಥಳ : ವಿದ್ಯಾರಣ್ಯ

# ಯಲಬುರ್ಗ ಪಟ್ಟಣ : ಸಾಂಸ್ಕೃತಿಕ ಅಧ್ಯಯನ

## ಪರಿವಿಡಿ

## ಅಧ್ಯಾಯ – ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸಮೀಕ್ಷೆ, ವಿಧಾನ ಮತ್ತು ಸ್ವರೂಪ

**ಪೀಠಿಕೆ : –**

ಕರ್ನಾಟಕ ಸಂಸ್ಕೃತಿಯು ಭಾರತೀಯ ಸಂಸ್ಕೃತಿಯಲ್ಲಿ ಅಂತರ್ಗತವಾಗಿದ್ದರೂ ತನ್ನದೇ ಆದ ಉದಾತ್ತ ಗುಣಗಳಿಂದಾಗಿ ವಿಶೇಷವಾಗಿ ಮತ್ತು ಪ್ರೌಢವಾಗಿ ಗೋಚರಿಸುತ್ತದೆ. ಕರ್ನಾಟಕದ ಸಂಸ್ಕೃತಿಗೆ ಹಿರಿದಾದ ಅಂತಃಸತ್ವವಿದ್ದು. ಅನೇಕ ಶತಮಾನಗಳ ಕಾಲಾವಧಿಯಲ್ಲಿ ನಡೆದ ತನ್ನ ಕೊಡು–ಕೊಳ್ಳುವಿಕೆಗಳ ಗುಣದಿಂದಾಗಿ ಉನ್ನತ ಸ್ಥಾನದಲ್ಲಿದೆ. ಶಿಲಾಶಾಸನಗಳ ಆಗಮನ ಕಾಲದಿಂದ ಇಲ್ಲಿಯವರೆಗಿನ ಸಂಸ್ಕೃತಿಯನ್ನು ಕುರಿತು ಅಧ್ಯಯನಗಳು ವಿವಿಧ ನೆಲೆಯಲ್ಲಿ ನಡೆಯುತ್ತ ಬಂದಿವೆ ಅಶೋಕನ ಶಾಸನಗಳ ಆಸ್ತಿತ್ವದಿಂದಾಗಿ ಕರ್ನಾಟಕವು ಔತ್ತರೇಯ ಸಂಸ್ಕೃತಿಯ ಸಂಪರ್ಕವನ್ನು ಹೊಂದಿತ್ತೆಂಬ ಸಂಗತಿ ಗಮನಾರ್ಹವಾಗಿದ್ದು, ಈ ಚಾರಿತ್ರಿಕ ಪುಟಗಳಿಂದ ಕರ್ನಾಟಕ ಸಂಸ್ಕೃತಿಯು ಕಾಲಕಾಲಕ್ಕೆ ಹೊಸ ಹೊಸ ಅಂಶಗಳನ್ನು ತನ್ನದಾಗಿಸಿಕೊಂಡು ಬೆಳೆದ ಬಗೆಯನ್ನು ಮನಗಾಣತ್ತೇವೆ.

ಕರ್ನಾಟಕದಲ್ಲಿ ಗಂಗ–ಕದಂಬರ ಪೂರ್ವಕಾಲದಿಂದಲೇ ಈ ನೆಲದ ಸಂಸ್ಕೃತಿಯ ಚೌಕಟ್ಟು ರೂಪಗೊಂಡಿದ್ದು, ಇಲ್ಲಿನ ಸಮಾಜ ಮತ್ತು ಸಂಸ್ಕೃತಿಯು ಶ್ರೀಮಂತಗೊಂಡಿದೆ. ಇದರ ಜೊತೆ ಜೊತೆಯಲ್ಲಿಯೇ ಗುಡಿ–ಗೋಪುರಗಳು, ಕೆರೆ–ಕಟ್ಟೆಗಳು, ಶಾಸನಗಳು, ಕೋಟೆ ಕೊತ್ತಲಗಳು ಹಾಗೂ ಮೌಖಿಕ ಆಚರಣೆಗಳು ಯಥೇಚ್ಛವಾಗಿ ಕಂಡುಬಂದಿದ್ದು, ಸಾಂಸ್ಕೃತಿಕ ಕೇಂದ್ರಗಳಾಗಿ ರೂಪಗೊಳ್ಳಲು ಅನುವು ಮಾಡಿಕೊಟ್ಟಿದೆ.

ಕರ್ನಾಟಕದ ಉದ್ದಗಲಕ್ಕೂ ಯಾವುದೇ ಹಳ್ಳಿಗೆ ಭೇಟಿ ನೀಡಿದರೆ ಒಂದಲ್ಲಾ ಒಂದು ಸ್ಮಾರಕದ ಅವಶೇಷಗಳು ಕಂಡುಬರುತ್ತವೆ. ಇಂತಹ ಸ್ಮಾರಕ ಅವಶೇಷಗಳು ಆಧುನಿಕತೆಯ ಪ್ರಭಾವದಿಂದ ನಿರ್ಲಕ್ಷಕ್ಕೆ ಬಳಗಾಗಿದ್ದು, ಸಮಾಜದಿಂದ ಬೇರ್ಪಡೆಗೊಂಡಿರುತ್ತದೆ. ಇನ್ನೂ ಕೆಲವು ಪ್ರಾಕೃತಿಕ ವಿಕೋಪಕ್ಕೆ ಸಿಲುಕಿ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವ ಸ್ಥಿತಿಯಲ್ಲಿದ್ದು, ಅಳಿವಿನ ಅಂಚಿನಲ್ಲಿವೆ. ಪ್ರಮುಖ ಸ್ಮಾರಕ ಅವಶೇಷಗಳಾದ ದೇವಾಲಯಗಳು ಕೆರೆ–ಕಟ್ಟೆಗಳು,

ಶಾಸನಗಳು, ಹಾಗೂ ಆದಿಮಾನವನ ವಸತಿ ನೆಲೆಗಳನ್ನು ರಕ್ಷಣೆ ಮಾಡಬೇಕಾಗಿದ್ದು, ಒಂದಕ್ಕೊಂದು ಸಂಬಂಧ ಕಲ್ಪಿಸಬೇಕಾಗಿದೆ. ಅದೇ ರೀತಿ ಆರಂಭದ ಅಧ್ಯಯನಕಾರರು ಇತಿಹಾಸವನ್ನು ಕೇವಲ ಒಂದು ಪ್ರದೇಶವನ್ನಾಳಿದ ರಾಜಮನೆತನಗಳ ಜೀವನ ಸಾಧನೆಗಳನ್ನು ಮಾತ್ರ ಬಿಂಬಿಸಿದ್ದಾರೆ. ಆದರೆ ಇಲ್ಲಿ ವಾಸಿಸಿದ ಸಾಮಾನ್ಯ ಜನರ ಸಾಂಸ್ಕೃತಿಕ ಇತಿಹಾಸವನ್ನು ರಚಿಸುವ ಕಡೆಗೆ ಅಧ್ಯಯನವನ್ನು ವಿಸ್ತಾರಗೊಳಿಸಬೇಕಾಗಿರುವುದು ಈಗಿನ ಅವಶ್ಯಕವಾಗಿದೆ.

ಪ್ರಸ್ತುತ ಸಂದರ್ಭದಲ್ಲಿ ಅಧ್ಯಯನದ ನೆಲೆಗಳು ಸ್ಥಳೀಯ ಚರಿತ್ರೆಯ ಹಿನ್ನಲೆಯಲ್ಲಿ ವಿಸ್ತಾರಗೊಳ್ಳುತ್ತಿವೆ. ಈ ರೀತಿಯ ಅಧ್ಯಯನದ ನೆಲೆಗಳಿಂದ ಒಂದು ಪ್ರದೇಶದ ಸಾಂಸ್ಕೃತಿಕ ಮಹತ್ವವನ್ನು ವಿಸ್ತಾರಗೊಳಿಸುವುದರ ಜೊತೆಗೆ ಅನನ್ಯತೆಯನ್ನು ಗುರುತಿಸುವಲ್ಲಿ ಸ್ಥಳೀಯ ಚರಿತ್ರೆಯ ಅಧ್ಯಯನ ಬಹಳ ಮಹತ್ವವಾದದ್ದು. ಹಾಗಾಗಿ ಯಲಬುರ್ಗಾ ತಾಲೂಕು ಕೂಡ ಅನೇಕ ವೈಶಿಷ್ಟ್ಯಗಳಿಂದ ಕೂಡಿದ್ದು, ಯಲಬುರ್ಗಾ ಪಟ್ಟಣದ ಸ್ಥಳೀಯ ಚರಿತ್ರೆಯನ್ನು ಕಟ್ಟಿಕೊಡುವ ಸಲುವಾಗಿ "ಯಲಬುರ್ಗಾ ಪಟ್ಟಣ : ಸಾಂಸ್ಕೃತಿಕ ಅಧ್ಯಯನ" ಶೀರ್ಷಿಕೆಯ ಅಡಿಯಲ್ಲಿ ಸ್ಥಳೀಯವಾಗಿ ಲಭ್ಯವಿರುವ ಸಾಹಿತ್ಯಿಕ ಮತ್ತು ಪುರಾತತ್ವ ಆಕರಗಳು ಹಾಗೂ ಮೌಖಿಕ ಆಕರಗಳನ್ನು ಕಲೆ ಹಾಕಿ ಸಾಂಸ್ಕೃತಿಕವಾಗಿ ಸ್ಥಳೀಯ ಚರಿತ್ರೆ ಕಟ್ಟಿಕೊಡುವುದು ಅಧ್ಯಯನದ ಅವಶ್ಯಕವಾಗಿರುತ್ತದೆ.

ಯಲಬುರ್ಗಾ ಪಟ್ಟಣದ ಪ್ರಾಚೀನತೆಯು ಇತಿಹಾಸ ಪೂರ್ವಕಾಲ ಅಂದರೆ ನೂತನ ಶಿಲಾಯುಗ (ಕ್ರಿ.ಪೂ.೨೦೦೦ ರಿಂದ ಕ್ರಿ.ಪೂ.೧೦೦೦) ದಿಂದ ಪ್ರಾರಂಭವಾಗುತ್ತದೆ ಯಲಬುರ್ಗಾ ಪಟ್ಟಣದ ಸಮೀಪದಲ್ಲಿಯೇ ಕುಕನೂರು ಎಂಬಲ್ಲಿ ನೂತನ ಶಿಲಾಯುಗದ ಆದಿಮಾನವನ ನೆಲೆ ಕಂಡುಬಂದಿದ್ದು, ಈ ಪ್ರದೇಶದಲ್ಲಿ ಮಾನವನ ಚಟುವಟಿಕೆ ನಡೆದಿದೆ ಎಂದು ತಿಳಿದುಬರುತ್ತದೆ. ಈ ಪುರಾತತ್ವ ಆಧಾರದ ಮೇಲೆ ಯಲಬುರ್ಗಾ ಪಟ್ಟಣವು ಪ್ರಾಗಿತಿಹಾಸ ಕಾಲದಿಂದ ಇತಿಹಾಸ ಕಾಲದವರೆಗೂ ಒಂದು ಸಂಬಂಧ ಕೊಂಡಿಯಾಗಿ ರೂಪಗೊಂಡಿದೆ.

ಯಲಬುರ್ಗಾ ಪಟ್ಟಣದ ಚಾರಿತ್ರಿಕ ಹಿನ್ನೆಲೆಯನ್ನು ಕಂಡುಕೊಳ್ಳಲು ಅಲ್ಲಿನ ಶಾಸನ ಆಕರಗಳು ಅನುಕೂಲವಾಗಿದ್ದು, ಶಾಸನಗಳಲ್ಲಿ ಯಲಬುರ್ಗಾ ಪಟ್ಟಣದ ಸ್ಥಳ ನಾಮವು ಯರಂಬರವಿ, ಯರಂಬರಗೆ, ಯಲಬಂರ್ಗೆ, ಸಿಂದನಾಡು ಎಂಬುದಾಗಿ ಉಲ್ಲೇಖಗೊಂಡಿದೆ.

ಯಲಬುರ್ಗಾ ಪಟ್ಟಣದ ರಾಜಕೀಯ ಚರಿತ್ರೆಯು ಸಿಂದರೆಂಬ ಕಲ್ಯಾಣದ ಚಾಲುಕ್ಯರ ಸಾಮಂತರ ಕಾಲದಿಂದ ಆರಂಭಗೊಂಡಿದ್ದು, ಇಲ್ಲಿನ ಪ್ರಾಕೃತಿಕ ಸಂಪತ್ತು ಮತ್ತು ಶಿಕ್ಷಣಾತ್ಮಕ ಅನುಕೂಲದಿಂದ ಯಲಬುರ್ಗಾ ಪ್ರದೇಶವನ್ನು ಆಡಳಿತ ಕೇಂದ್ರವಾಗಿ ಮಾಡಿಕೊಂಡು (ಕಿಸುಕಾಡು-೭೦, ಬೆಳವಾಡಿ ೩೦೦, ಮತ್ತು ನೆರೆಯಂಗಲ್ಲು ೧೨) ಪಟ್ಟಣ ಅಭಿವೃದ್ಧಿ ಮಾಡಿದರೆಂದು ಹೇಳಬಹುದು.

ಯಲಬುರ್ಗಾ ಪಟ್ಟಣವು ವಿವಿಧ ಕಾಲಘಟ್ಟಗಳಲ್ಲಿ ವಿವಿಧ ರಾಜಮನೆತಗಳ ಆಳ್ವಿಕೆಗೆ ಒಳಪಟ್ಟಿದ್ದು, ತನ್ನದೇಯಾದ ಮಹತ್ವ ಕಂಡುಕೊಂಡಿದೆ. ಇವರೆಲ್ಲರ ಆಳ್ವಿಕೆಯ ಅವಧಿಯಲ್ಲಿ

ನಿರ್ಮಾಣಗೊಂಡಿರುವ ದೇವಾಲಯಗಳು, ಕೆರೆ–ಕಟ್ಟೆಗಳು, ಕೋಟೆ–ಕೊತ್ತಲಗಳು, ಶಾಸನಗಳು ಹಾಗೂ ಮೌಖಿಕ ಆಕರಗಳನ್ನು ಕಲೆ ಹಾಕುವ ಮೂಲಕ ಒಂದಕ್ಕೊಂದು ಸಂಬಂಧ ಕಲ್ಪಿಸುವ ಸಲುವಾಗಿ ಯಲಬುರ್ಗಾ ಪಟ್ಟಣದ ಸ್ಥಳೀಯ ಚರಿತ್ರೆ ಕಟ್ಟಿಕೊಡಬೇಕಾಗಿದೆ.

**ಅಧ್ಯಯನದ ಉದ್ದೇಶ**

ಪುರಾತನ ಕಾಲದ ಸ್ಮಾರಕಗಳು ಮತ್ತು ಪ್ರಾಚ್ಯಾವಶೇಷಗಳು ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿದ್ದು, ಅವುಗಳ ಅಧ್ಯಯನವು ಇತಿಹಾಸದ ಪುನಃರಚನೆಯ ಮಹತ್ವದ ಅಂಶಗಳನ್ನು ಒದಗಿಸುವ ಮೂಲ ಆಕರಗಳಾಗಿವೆ.

ಯಲಬುರ್ಗ ಪಟ್ಟಣದ ಅಧ್ಯಯನದ ವ್ಯಾಪ್ತಿಯಲ್ಲಿ ಬರುವಂತಹ ಎಲ್ಲಾ ಸ್ಥಳಗಳಿಗೂ ಪ್ರತ್ಯಕ್ಷವಾಗಿ ಬೇಟಿ ನೀಡಿ, ಅಲ್ಲಿನ ಸ್ಮಾರಕ ಅವಶೇಷಗಳನ್ನು ಪಟ್ಟಿಮಾಡಿ, ಸ್ಥೂಲ ಅಧ್ಯಯನಕ್ಕೆ ಒಳಪಡಿಸಿ ವೈಜ್ಞಾನಿಕ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಹಾಗೂ ಸ್ಥಳೀಯ ಜನರಲ್ಲಿನ ಅಭಿಪ್ರಾಯಗಳನ್ನು ಪರಿಗಣಿಸಿ, ಯಲಬುರ್ಗಾ ಪಟ್ಟಣದ ವ್ಯಾಪ್ತಿಯಲ್ಲಿ ಬರುವಂತಹ ಜನಪದ ನಂಬಿಕೆಗಳು, ಐತಿಹ್ಯಗಳು, ಸ್ಥಳಪುರಾಣಗಳ ಬಗ್ಗೆ ವಿಶ್ಲೇಷಣೆ ಮಾಡುವುದು. ಮೂಲ ಉದ್ದೇಶವಾಗಿದೆ. ಅದೇ ರೀತಿ ಇಲ್ಲಿನ ಸ್ಮಾರಕಗಳು ಇತಿಹಾಸದ ಪುನಃರಚನೆಗೆ ಸಹಾಯಕವಾಗಿರುವುದರಿಂದ ಅವುಗಳ ಮಹತ್ವವನ್ನು ಅಲ್ಲಿನ ಜನರಿಗೆ ತಿಳಿಸುವುದರ ಜೊತೆಗೆ ಅವುಗಳ ಸಂರಕ್ಷಣೆಗೆ ಜನರನ್ನು ಪ್ರೇರೇಪಿಸುವ ಪ್ರಯತ್ನದಿಂದಾಗಿ ಈ ಅಧ್ಯಯನ ಮಹತ್ವಪಡೆದುಕೊಳ್ಳುತ್ತದೆ. ಇಲ್ಲಿನ ಸಮಾಜ ಸಾಂಸ್ಕೃತಿಯ ಬಗ್ಗೆ ಸಮಗ್ರ ಅಧ್ಯಯನ ಮಾಡುವುದುರ ಮೂಲಕ ಸಾಂಸ್ಕೃತಿಕ ಚಿತ್ರಣ ಕಟ್ಟಿಕೊಡುವುದು ಅಧ್ಯಯನದ ಉದ್ದೇಶವಾಗಿದೆ.

ಒಟ್ಟಾರೆ ಕರ್ನಾಟಕದ ಇತಿಹಾಸ ಮತ್ತು ಪುರಾತತ್ವ ಅಧ್ಯಯನದ ಕ್ಷೇತ್ರಗಳಲ್ಲಿ ಉಪೇಕ್ಷಣೆಗೆ ಓಳಗಾಗಿರುವ ಯಲಬುರ್ಗಾ ಪಟ್ಟಣವನ್ನು ವಿವರಣಾತ್ಮಕ ಹಾಗೂ ವಿಶ್ಲೇಷಣಾತ್ಮಕವಾಗಿ ಅಧ್ಯಯನಕ್ಕೆ ಒಳಪಡಿಸುವ ಮೂಲಕ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವ ಹಾಗೂ ಪುರಾತತ್ವ ನೆಲೆಗಳನ್ನು ಕಂಡುಕೊಳ್ಳುವ ಚಾರಿತ್ರಿಕ ಸಂದರ್ಭದಲ್ಲಿ ನಿರ್ಮಾಣವಾದ ಎಲ್ಲಾ ಬಗೆಯ ಸ್ಮಾರಕಗಳು, ರಾಜಮನೆತನಗಳು ಮತ್ತು ಸಮಾಜ ಸಂಸ್ಕೃತಿಯನ್ನು ಕುರಿತು ಅಧ್ಯಯನ ಮಾಡುವ ಬಹುಮುಖ್ಯ ಉದ್ದೇಶದಿಂದ ಪ್ರಸ್ತುತ ಅಧ್ಯಯನ ಕೈಗೊಳ್ಳಲಾಗಿದೆ.

**ಅಧ್ಯಯನದ ವ್ಯಾಪ್ತಿ**

ಯಾವುದೇ ಒಂದು ಸಂಶೋಧನೆಗೆ ಅಧ್ಯಯನದ ವ್ಯಾಪ್ತಿ ಬಹಳ ಮುಖ್ಯವಾಗಿದ್ದು, ಪ್ರಮುಖ ಪಾತ್ರವಹಿಸುತ್ತದೆ. ಜೊತೆಗೆ ಅಧ್ಯಯನದ ಗುಣಮಟ್ಟ ಹೆಚ್ಚಿಸಲು ಸಹಕಾರಿಯಾಗುತ್ತದೆ.

ಯಲಬುರ್ಗಾ ಪಟ್ಟಣದ ಸಾಂಸ್ಕೃತಿಕ ಅಧ್ಯಯನದ "ವ್ಯಾಪ್ತಿಯನ್ನು ಪ್ರಾಚೀನ ಕಾಲದ ಅಂಕಿ–ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಪಟ್ಟಣದ ವಿಸ್ತೀರ್ಣ, ರಚನೆ, ಜನಸಂಖ್ಯೆ ಬೆಳವಣಿಗೆಯನ್ನು ಆಧರಿಸಿ ಯಲಬುರ್ಗಾ ಪಟ್ಟಣದ ವ್ಯಾಪ್ತಿಯನ್ನು ೩ ಕಿ.ಮೀ.ಗೆ ಸೀಮಿತಗೊಳಿಸಿದ್ದು, ಇದರ ಇತಿಹಾಸದ ರಚನೆಯಲ್ಲಿ ಸಾಂದರ್ಭಿಕವಾಗಿ ಅಕ್ಕಪಕ್ಕದಲ್ಲಿ

ಬರುವಂತಹ ಪ್ರದೇಶಗಳನ್ನು ಈ ವಿಷಯದ ವ್ಯಾಪ್ತಿಗೆ ಸೇರಿಸಿಕೊಳ್ಳಲಾಗಿದೆ. ಪ್ರಸ್ತುತ ಯಲಬುರ್ಗಾ ಪಟ್ಟಣವು ಒಟ್ಟು ೩ ಕಿ.ಮೀ ವ್ಯಾಪ್ತಿಯನ್ನು ಹೊಂದಿದ್ದು, ೧೧ ವಾರ್ಡಗಳನ್ನು ಮತ್ತು ೧೫ ಸಾವಿರ ಜನಸಂಖ್ಯೆಯನ್ನು (೨೦೧೨-೧೩ ರ ವಾರ್ಷಿಕ ವರದಿ ಅನ್ವಯ) ಹೊಂದಿದೆ. ಅದುದರಿಂದ ಪ್ರಾಚೀನ ಕಾಲಮಾನದಿಂದ ಹಿಡಿದು ಇತ್ತೀಚಿನ ಪುರಸಭೆಯ ಪಟ್ಟಣದ ವರೆಗಿನ ಮಾಹಿತಿಯನ್ನು ಅಧ್ಯಯನದಲ್ಲಿ ಸೇರಿಸಿಕೊಳ್ಳಲಾಗಿದೆ. ಯಲಬುರ್ಗಾ ಪಟ್ಟಣದ ವ್ಯಾಪ್ತಿಯಲ್ಲಿ ಬರುವಂತಹ ಎಲ್ಲಾ ಧಾರ್ಮಿಕ ಮಂದಿರಗಳು ಅವರ ಆಚರಣೆಗಳು, ಜೀವನ ಕ್ರಮಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.

**ಅಧ್ಯಯನದ ವಿಧಾನ**

ಸಾಂಸ್ಕೃತಿಕ ಹಿನ್ನಲೆಯನ್ನು ಇಟ್ಟುಕೊಂಡು ಕೈಗೊಂಡಿರುವ ಪ್ರಸ್ತುತ ಅಧ್ಯಯನವು ಕ್ಷೇತ್ರಕಾರ್ಯ ಆಧಾರಿತವಾಗಿದ್ದು, ಕ್ಷೇತ್ರಕಾರ್ಯದ ಮೂಲಕ ಪ್ರಾಥಮಿಕ ಹಾಗೂ ಅನುಷಂಗಿಕ ಆಕರಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಂಡು ಯಲಬುರ್ಗಾ ವ್ಯಾಪ್ತಿಗೆ ಒಳಪಡುವಂತಹ ಸ್ಥಳಗಳಿಗೆ ಬೇಟಿಕೊಟ್ಟು ಅಲ್ಲಿರುವ ಪ್ರಾಚೀನ ಅವಶೇಷಗಳಾದ ದೇವಾಲಯಗಳು, ಕೆರೆ-ಕಟ್ಟೆಗಳು, ಶಾಸನಗಳು, ಕೋಟೆ-ಕೊತ್ತಲಗಳು ಮತ್ತು ಮೂರ್ತಿಶಿಲ್ಪಗಳನ್ನು ದಾಖಲಿಸಿಕೊಂಡು ಸಮಗ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅದೇ ರೀತಿ ಮೌಖಿಕ ಆಕರಗಳಾದ ಐತಿಹ್ಯಗಳು, ಸ್ಥಳನಾಮ ಮತ್ತು ಸ್ಥಳಪುರಾಣಗಳು, ಜಾನಪದ ನಂಬಿಕೆಗಳನ್ನು ಸ್ಥಳೀಯ ಜನರಿಂದ ಸಂಗ್ರಹಿಸಿ ಅಧ್ಯಯನಕ್ಕೆ ಒಳಪಡಿಸಿ, ಸೂಕ್ತ ಚಿಂತನೆ ನಡೆಸಲಾಗಿದೆ.

ಯಲಬುರ್ಗಾ ಪಟ್ಟಣಕ್ಕೆ ಸಂಬಂಧಿಸಿದಂತೆ ಸಮಾಜ ಸಾಂಸ್ಕೃತಿಯ ಬಗ್ಗೆ ಸೂಕ್ಷ್ಮ ಅಧ್ಯಯನ ಕೈಗೊಂಡು, ಅವರ ಧಾರ್ಮಿಕ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಅಧ್ಯಯನ ಮಾಡಲಾಗಿದೆ. ಪ್ರಮುಖವಾಗಿ ಯಲಬುರ್ಗಾ ಪಟ್ಟಣದ ನಂಬಿಕೆ-ಆಚರಣೆಗಳು, ಜಾತ್ರೆ – ಉತ್ಸವಗಳು ಮತ್ತು ಹಬ್ಬ-ಹರಿದಿನಗಳು ಬಗ್ಗೆ ಸುದೀರ್ಘವಾಗಿ ಅಧ್ಯಯನ ಮಾಡಿ ಸಾಂಸ್ಕೃತಿಕ ಚಿತ್ರಣ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

**ಅಧ್ಯಯನ ಸಮೀಕ್ಷೆ**

ಪ್ರಸ್ತುತ ಅಧ್ಯಯನದ ಶೀರ್ಷಿಕೆಗೆ ಸಂಬಂಧಿಸಿದಂತೆ ಯಾವುದೇ ಅಧ್ಯಯನ ನಡೆದಿರುವುದಿಲ್ಲ. ಆದರೆ ಯಲಬುರ್ಗಾ ತಾಲೂಕಿನ ದೇವಾಲಯಗಳು, ಭೌಗೋಳಿಕ ಪರಿಸರ, ಶಾಸಗಳ ಬಗ್ಗೆ, ನೀರಾವರಿ ಬಗ್ಗೆ, ಚಾರಿತ್ರಿಕೆ ಹಿನ್ನೆಲೆಯ ಬಗ್ಗೆ ಹಾಗೂ ಪ್ರೇಕ್ಷಣಿಯ ಸ್ಥಳಗಳ ಬಗ್ಗೆ ಗ್ರಂಥಗಳು ಬಿಡಿ ಲೇಖನಗಳು ಮತ್ತು ಸ್ಮರಣ ಸಂಚಿಕೆಗಳು ಹೊರಬಂದಿದ್ದು ಅವುಗಳಲ್ಲಿ ಮುಖ್ಯವಾದವು ಈ ಕೆಳಗಿನಂತಿವೆ.

ದೇವರ ಕೊಂಡಾರಡ್ಡಿ (ಸಂ) ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ, ಈ ಗ್ರಂಥದಿಂದ ಯಲಬುರ್ಗ ಪ್ರದೇಶದ ದೇವಾಲಯಗಳಿಗೆ, ದಾನ-ದತ್ತಿ ಕೊಟ್ಟ ಬಗ್ಗೆ, ಶಾಸನೋಕ್ತ ಕೆರೆಗಳ ಬಗ್ಗೆ, ಮತ್ತು ಅಲ್ಲಿ ಆಳ್ವಿಕೆ ಮಾಡಿದ ಸಿಂದ ಮನೆತನದ ಬಗ್ಗೆ

ಮಾಹಿತಿ ಇದೆ. ಶಿರೂರ ಬಿ.ವ್ಹಿ ಯವರ ಯಲಬುರ್ಗಿ ಸಿಂದರೂ ಎಂಬ ಗ್ರಂಥದಿಂದ ಸಿಂದರ ವಂಶಾವಳಿ, ರಾಜಕೀಯ ಇತಿಹಾಸ ಮತ್ತು ಆಡಳಿತದ ಬಗ್ಗೆ ವಿವರಣೆ ನೀಡಿದ್ದಾರೆ. ಸುರೇಶ್ ಕೆ.ಎಂ.(ಸಂ), ಕರ್ನಾಟಕ ದೇವಾಲಯ ಕೋಶ ಕೊಪ್ಪಳ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಇವರು ಪ್ರಕಟಿಸಿದ ಗ್ರಂಥದಿಂದ ಯಲಬುರ್ಗ ಪ್ರದೇಶದ ಪ್ರಾಚೀನ ದೇವಾಲಯದ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ.ಸಿದ್ಧಲಿಂಗಪ್ಪ ಕೊಟ್ನೆಕಲ್ ಅವರ ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಅಧ್ಯಯನ ಈ ಗ್ರಂಥದಿಂದ ಯಲಬುರ್ಗದ ಮಹಾಮಂಡಳೇಶ್ವರರ ಬಗ್ಗೆ ವಿವರಣೆ ನೀಡಿದ್ದಾರೆ. ಗೋಪಾಲ ಆರ್, ಸಂಪಾದಕತ್ವದಲ್ಲಿ ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಗ್ರಂಥದಲ್ಲಿ ಯಲಬುರ್ಗಿ ಸಿಂದರ ಆಡಳಿತ ಮತ್ತು ಅಲ್ಲಿಯ ಜಾತ್ರೆ–ಉತ್ಸವಗಳ ಬಗ್ಗೆ ಮಾಹಿತಿ ನೀಡಿದ್ದಾರೆ. ಮುನಿಯಪ್ಪ ಹುಬ್ಬಳ್ಳಿಯವರ ಯಲಬುರ್ಗ ತಾಲೂಕ ದರ್ಶನ ಲೇಖನದಲ್ಲಿ ಯಲಬುರ್ಗ ಪ್ರದೇಶದ ಆಡಳಿತ, ಸಾಹಿತ್ಯ ಕಲೆ ಮತ್ತು ಧರ್ಮದ ಬಗ್ಗೆ ಸಂಕ್ಷಿಪ್ತ ವಿವರಣೆ ನೀಡಿದ್ದಾರೆ. ಹಿರೇಮಠ ಎಸ್.ಎಸ್ ಇವರ ಕೊಪ್ಪಳ ಜಿಲ್ಲೆಯ ಜಾತ್ರೆಗಳು ಎಂಬ ಲೇಖನದಲ್ಲಿ ಯಲಬುರ್ಗಿಯ ಜಾತ್ರೆಯ ಬಗ್ಗೆ ಮಾಹಿತಿ ನೀಡಿದ್ದಾರೆ. ಋಷಬೇಂದ್ರ ಸ್ವಾಮಿ(ಸಂ), ಗವಿದೀಪ್ತಿ ಎಂಬ ಗ್ರಂಥದಲ್ಲಿ ಯಲಬುರ್ಗದ ಮಠಗಳ ಬಗ್ಗೆ ಧರ್ಮದ ಬಗ್ಗೆ ಮಾಹಿತಿ ನೀಡಿದ್ದಾರೆ. ನಾಗರಾಜ್ ಟಿ.ವಿ. ಅವರ ಕೊಪ್ಪಳ ಜಿಲ್ಲೆಯ ಪ್ರಾಚೀನ ನೀರಾವರಿ ವ್ಯವಸ್ಥೆ ಒಂದು ಚಾರಿತ್ರಿಕ ಅವಲೋಕನ ಈ ಸಂಚಿಕೆಯಲ್ಲಿ ಯಲಬುರ್ಗದ ಪ್ರಾಚೀನ ನೀರಾವರಿ ವ್ಯವಸ್ಥೆಯ ಬಗ್ಗೆ ಮಾಹಿತಿ ನೀಡಿದ್ದಾರೆ. ಮೇಲ್ಕಾರ ಎಸ್.ಕೆ, ಅವರ ಕೊಪ್ಪಳ ಜಿಲ್ಲೆಯ ಶಾಸನಗಳ ಹಿನ್ನಲೆಯಲ್ಲಿ ರಾಜಕೀಯ ಇತಿಹಾಸ ಈ ಗ್ರಂಥದಲ್ಲಿ ಯಲಬುರ್ಗ ಪ್ರದೇಶದ ರಾಜಕೀಯದ ಬಗ್ಗೆ ತಿಳಿಸುತ್ತದೆ. ಶಾಮಾಚಾರ್ಯ ಜಿ, ಅವರ ಯಲಬುರ್ಗಿ ತಾಲೂಕ ದರ್ಶನ ಗ್ರಂಥದಿಂದ ಯಲಬುರ್ಗ ಪ್ರದೇಶದಲ್ಲಿಯ ಸಾಮಾಜಿಕ ಸ್ಥಿತಿಗತಿಯ ಬಗ್ಗೆ ತಿಳಿಸುತ್ತದೆ. ಶಿರೂರ ಬಿ.ವ್ಹಿ ಯವರ ಸಿದ್ಧಶ್ರೀ ಎಂಬ ಗ್ರಂಥದಿಂದ ನಮಗೆ ಯಲಬುರ್ಗದ ಮಠಗಳ ಮತ್ತು ಅಲ್ಲಿಯ ಆಚರಣೆಗಳ ಬಗ್ಗೆ ಮಾಹಿತಿ ಒದಗಿಸುತ್ತದೆ. Allchin F.R, Neolithic Cattle Keepers of South India ಈ ಗ್ರಂಥದಿಂದ ಈ ಪ್ರದೇಶದ ಪುರಾತತ್ವ ನೆಲೆಗಳ ಬಗ್ಗೆ ಮಾಹಿತಿ ಒದಗಿಸುತ್ತದೆ. ಕರ್ನಾಟಕ ಇತಿಹಾಸ ಅಕಾಡೆಮಿಯವರ ಇತಿಹಾಸ ದರ್ಶನ ಎಂಬ ಸಂಪುಟದಿಂದ ಯಲಬುರ್ಗ ಪ್ರದೇಶದ ಪ್ರಾಚೀನ ಕಾಲದ ಪುರಾತತ್ವ ನೆಲೆಗಳ ಬಗ್ಗೆ ಮಾಹಿತಿ ಒದಗಿಸುತ್ತದೆ. ಸುಜಾತ ಮಲ್ಲನಗೌಡ ರಾಯಚೂರು ಮತ್ತು ಕೊಪ್ಪಳ ಜಿಲ್ಲೆಯ ಕೋಟೆಗಳು: ಒಂದು ಅಧ್ಯಯನ (ಅಪ್ರಕಟಿತ) ಪಿಎಚ್.ಡಿ ಮಹಾಪ್ರಬಂಧ ಇದರಿಂದ ಸಿಂದರ ಕಾಲದ ಕೋಟೆಯ ಬಗ್ಗೆ ಮಾಹಿತಿ ಸಿಗುತ್ತದೆ. ದೀಪಕ ಆಲೂರು ಇವರ ಸಿಂದ ಮನೆತನದ ರಾಜಕೀಯ ಮತ್ತು ಸಾಂಸ್ಕೃತಿಕ ಅಧ್ಯಯನ, (ಅಪ್ರಕಟಿತ) ಪಿಎಚ್.ಡಿ ಮಹಾಪ್ರಬಂಧ ಈ ಗ್ರಂಥದಿಂದ ಸಿಂದರ ರಾಜಕೀಯ, ಸಾಂಸ್ಕೃತಿಕ ಇತಿಹಾಸದ ಬಗ್ಗೆ ಮಾಹಿತಿ ನೀಡಿದ್ದಾರೆ.

**ಅಧ್ಯಯನದ ಸ್ವರೂಪ**

"ಯಲಬುರ್ಗ ಪಟ್ಟಣ : ಸಾಂಸ್ಕೃತಿಕ ಅಧ್ಯಯನ" ಎನ್ನುವ ಈ ಪ್ರೌಢಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಆರು ಅಧ್ಯಾಯಗಳಾಗಿ ವಿಭಾಗಿಸಲಾಗಿದೆ. ಜೊತೆಗೆ ಉಪ ಅಧ್ಯಾಯಗಳನ್ನು ಸಹ ಸೇರಿಸಲಾಗಿದೆ. ಈ ಮೂಲಕ ಸಂಪ್ರಬಂಧದ ರಚನಾ ಕಾರ್ಯ ನಡೆಸಲಾಗುವುದು.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನವನ್ನು ವಿವರಿಸಿರುವುದಲ್ಲದೆ. ಇದುವರೆಗಿನ ಅಧ್ಯಯನಗಳ ಸಮೀಕ್ಷೆ ಮಾಡಲಾಗಿದೆ.

ಎರಡನೆಯ ಅಧ್ಯಾಯ ತಾಲ್ಲೂಕಿನ ಭೌಗೋಳಿಕ ಪರಿಸರವನ್ನು ಕುರಿತಿದೆ. ನೆಲ-ಜಲ, ಬೆಟ್ಟ-ಗುಡ್ಡ, ಜನಸಂಖ್ಯೆ, ಅರಣ್ಯ ಮತ್ತು ಅಲ್ಲಿನ ಜನಜೀವನದ ಬಗ್ಗೆ ವಿವರಿಸಲಾಗಿದೆ. ಇದಕ್ಕೆ ಸಂಬಂದಿಸಿದಂತೆ ಇಲಾಖೆಗಳಿಂದ ಅಂಕಿ-ಅಂಶಗಳನ್ನು ಸಂಗ್ರಹಿಸಿದ್ದೇನೆ. ಯಲಬುರ್ಗಾ ಪಟ್ಟಣದ ನಾಮ ನಿಷ್ಪತ್ತಿ, ಸ್ಥಳ ಪ್ರಾಗಿತಿಹಾಸಿಕ ನೆಲೆಗಳು ಹಾಗೂ ನೆಲಗಳಲ್ಲಿ ದೊರೆಯುವ ಉಪಕರಣಗಳ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ. ಜೊತೆಗೆ ಯಲಬುರ್ಗಾ ಪಟ್ಟಣದ ಚಾರಿತ್ರಿಕ ಹಿನ್ನಲೆ ಕಟ್ಟಿಕೊಡುವ ಸಲುವಾಗಿ ಯಲಬುರ್ಗಾ ಪ್ರದೇಶದಲ್ಲಿ ಆಡಳಿತ ಮಾಡಿದ ರಾಜಮನೆತನಗಳು ಹಾಗೂ ಅವರ ಸಂಬಂಧವನ್ನು ವಿವರಸಲಾಗಿದ್ದು, ಮೌರ್ಯರ ಕಾಲದಿಂದ ವಿಜಯನಗರೋತ್ತರ ಕಾಲದವರೆಗೂ ಈ ಮೇಲಿನ ಅಂಶಗಳನ್ನು ಇಟ್ಟುಕೊಂಡು ಯಲಬುರ್ಗಾ ಪಟ್ಟಣದ ಚಾರಿತ್ರಿಕ ಹಿನ್ನಲೆ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಯಲಬುರ್ಗಾ ಪಟ್ಟಣದಲ್ಲಿರುವ ಧಾರ್ಮಿಕ ಕೇಂದ್ರಗಳ ವಿವರಣೆ ನೀಡಲಾಗಿದೆ. ದೇವಾಲಯಗಳಿಗೆ ಸಂಬಂಧಿಸಿದಂತೆ ಶಾಸನಗಳನ್ನು ಬಳಸಿಕೊಂಡು ದೇವಾಲಯಗಳ ಉಗಮ, ವಿಕಾಸ, ರಚನೆ ಮತ್ತು ನಿರ್ಮಾಣದ ಬಗ್ಗೆ ವಿಸ್ತಾರವಾಗಿ ಚರ್ಚಿಸಲಾಗಿದೆ. ಜೊತೆಗೆ ಮೂರ್ತಿ ಶಿಲ್ಪಗಳ ಬಗ್ಗೆ ವಿವರಣೆ ನೀಡಲಾಗಿದ್ದು ಯಲಬುರ್ಗಾ ಪಟ್ಟಣದಲ್ಲಿ ದೊರೆತಿರುವ ಶಾಸನಗಳು, ವೀರಗಲ್ಲುಗಳ ಬಗ್ಗೆ ವಿಶ್ಲೇಷಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಯಲಬುರ್ಗಾ ಪಟ್ಟಣದ ಕೆರೆ, ಬಾವಿಗಳಿಗೆ ಸಂಬಂಧಿಸಿದಂತೆ ಕೆರೆಗಳ ಪ್ರಾಚೀನತೆ, ನಿರ್ಮಾಣ, ನೀರಾವರಿ, ವ್ಯವಸ್ಥೆ, ಕೆರೆ ನೀರಾವರಿ ಆಧಾರಿತ ಬೆಳೆಗಳು, ನಂಬಿಕೆ ಮತ್ತು ಆಚರಣೆಗಳನ್ನು ಕುರಿತು ಸುದೀರ್ಘವಾಗಿ ಚರ್ಚಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಯಲಬುರ್ಗಾ ಪಟ್ಟಣಕ್ಕೆ ಸಂಬಂಧಿಸಿದ ಸಮಾಜ ಮತ್ತು ಸಂಸ್ಕೃತಿಯ ಬಗ್ಗೆ ವಿವರಿಸಲಾಗಿದೆ. ಅಲ್ಲಿನ ಸಾಮಾಜಿಕ, ಧಾರ್ಮಿಕ, ಆರ್ಥಿಕ ಸ್ಥಿತಿಗತಿಗಳ ಚಿತ್ರಣ ನೀಡಲಾಗಿದೆ. ಯಲಬುರ್ಗಾ ಪಟ್ಟಣಕ್ಕೆ ಸಂಬಂಧಿಸಿದಂತೆ ನಂಬಿಕೆ ಆಚರಣೆಗಳು, ಜಾತ್ರೆ-ಉತ್ಸವಗಳು ಹಾಗೂ ಹಬ್ಬ-ಹರಿದಿನಗಳ ಬಗ್ಗೆ ಕೂಲಂಕಶವಾಗಿ ಅಧ್ಯಯನ ಮಾಡಲಾಗಿದೆ.

ಆರನೆಯ ಅಧ್ಯಾಯವು ಸಮಾರೋಪಕ್ಕೆ ಸಂಬಂಧಿಸಿದ್ದು, ಪ್ರಸ್ತುತ ಅಧ್ಯಯನದ ಫಲಿತಾಂಶಗಳ ಸಂಕ್ಷಿಪ್ತ ರೂಪವಾಗಿದೆ.

ಕೊನೆಯಲ್ಲಿ ಅಧ್ಯಯನಕ್ಕೆ ಸಂಬಂಧಿಸಿದಂತೆ ಗ್ರಂಥಸೂಚಿ, ಛಾಯಾಚಿತ್ರ, ಹಾಗೂ ನಕ್ಷೆಗಳನ್ನು ಪೂರಕವಾಗಿ ನೀಡಲಾಗಿದೆ.

## ಅಧ್ಯಾಯ – ಎರಡು

# ಭೌಗೋಳಿಕ ಹಾಗೂ ಚಾರಿತ್ರಿಕ ಹಿನ್ನೆಲೆ

### ೨.೧. ಭೌಗೋಳಿಕ ಪರಿಸರ

ಯಾವುದೇ ಪ್ರದೇಶದ ಬಗ್ಗೆ ಅಧ್ಯಯನ ಮಾಡಬೇಕಾದರೆ ಪ್ರಮುಖವಾಗಿ ಅಲ್ಲಿಯ ಭೂಗೋಳಿಕ ವೈಶಿಷ್ಟ್ಯಗಳನ್ನು ತಿಳಿದುಕೊಳ್ಳಬೇಕಾಗುತ್ತದೆ. ಭೂಗೋಳ ಸಮಾಜದ ಮೇಲೆ ತನ್ನದೇ ಆದ ಪ್ರಭಾವ ಬೀರುತ್ತದೆ. ಅದರೊಂದಿಗೆ ಚರಿತ್ರೆ ಮತ್ತು ಭೂಗೋಳ ನಿಕಟವಾದ ಸಂಬಂಧ ಹೊಂದಿದೆ. ಭೂಗೋಳದ ಅರಿವಿಲ್ಲದೆ ಚರಿತ್ರೆ ಬರೆಯುವುದು ಕಷ್ಟಸಾಧ್ಯ, ಅದೇ ರೀತಿ ಭೌಗೋಳಿಕ ಅಂಶಗಳು ಪ್ರಭಾವ ಬೀರದ ಪ್ರದೇಶವಿಲ್ಲ. ಪ್ರತಿಯೊಂದು ಚಾರಿತ್ರಿಕ ಸನ್ನಿವೇಶ, ಸ್ಮಾರಕ ಹಾಗೂ ಅವಶೇಷಗಳ ಮೇಲೆ ಪ್ರಭಾವ ಇದ್ದೇ ಇರುತ್ತದೆ.

ಪ್ರಾಚೀನ ಆದಿಮಾನವನು ಬದುಕುವುದಕ್ಕಾಗಿ ಉತ್ತಮ ಭೌಗೋಳಿಕ ಪರಿಸರವನ್ನು ಶೋಧಿಸಿ ಅಲ್ಲಿ ವಾಸಮಾಡುತ್ತಿದ್ದ. ಹೀಗಾಗಿ ಒಂದು ಪ್ರದೇಶದ ಸರ್ವತೋಮುಖ ಬೆಳವಣಿಗೆಯು ಅಲ್ಲಿಯ ಭೌಗೋಳಿಕ ಅಂಶಗಳನ್ನು ಅವಲಂಬಿಸಿರುತ್ತದೆ. ಯಾವ ಪ್ರದೇಶಕ್ಕೆ ಹೆಚ್ಚು ಪ್ರಕೃತಿಯ ಸಹಾಯವಿರುತ್ತದೆಯೋ ಅದು ಬಹುಬೇಗ ಅಭಿವೃದ್ಧಿಯನ್ನು ಸಾಧಿಸುತ್ತದೆ. ಒಂದು ದೇಶದ ಪರ್ವತ ಶ್ರೇಣಿ, ಬೆಟ್ಟಗುಡ್ಡ, ಮಳೆಯ ಪ್ರಮಾಣ, ಹವಾಗುಣ, ಉಷ್ಣಾಂಶ, ಕಾಡು ಮುಂತಾದ ಭೌಗೋಳಿಕ ಅಂಶಗಳು ಮಾನವನನ್ನು ಆ ಪ್ರದೇಶದಲ್ಲಿ ವಾಸಿಸುವಂತೆ ಅನುವು ಮಾಡಿಕೊಡುತ್ತದೆ.

ಅದೇ ರೀತಿ ಉತ್ತಮ ಭೌಗೋಳಿಕ ಪರಿಸರ ಆ ಪ್ರದೇಶದ ನೈಸರ್ಗಿಕ ಸಂಪತ್ತನ್ನು ಹೆಚ್ಚಿಸಿ ಜನ ಜೀವನ ನಾಗರೀಕತೆ, ಸಂಸ್ಕೃತಿ, ಕಲೆ, ವಾಸ್ತುಶಿಲ್ಪದ ಅಭಿವೃದ್ಧಿಗೆ ಸಹಾಯಕವಾಗುತ್ತದೆ. ಪ್ರಾಚೀನ ನಾಗರಿಕತೆಗಳಾದ, ಸಿಂಧೂ ಮತ್ತು ಈಜಿಪ್ಟ್ ಸಂಸ್ಕೃತಿಯು ಹುಟ್ಟಿ ಪ್ರಬುದ್ಧವಾಗಿ ಬೆಳೆದು ಅವನತಿಯಾದುದು ನದಿಯ ಪರಿಸರದಲ್ಲಿ ಭೌಗೋಳಿಕ ಪರಿಸರವು ಮಾನವನ ಒಂದೆಡೆ ನೆಲೆ ನಿಂತು ತನ್ನದೇ ನಾಗರೀಕತೆ ಮತ್ತು ಸಂಸ್ಕೃತಿಯನ್ನು ಕಟ್ಟಿಕೊಳ್ಳಲು ಸಹಾಯಕವಾಗಿದೆ.

## ಯಲಬುರ್ಗ ತಾಲೂಕಿನ ಭೌಗೋಳಿಕ ಪರಿಸರ

ಯಲಬುರ್ಗ ತಾಲೂಕ ರಾಜಧಾನಿ ಬೆಂಗಳೂರಿನಿಂದ ೪೫೦ ಕಿ.ಮೀಗಳ ಅಂತರವನ್ನು ಹಾಗೂ ಜಿಲ್ಲಾ ಕೇಂದ್ರ ಕೊಪ್ಪಳದಿಂದ ೪೩ ಕಿ.ಮೀಗಳ ಅಂತರವನ್ನು ಹೊಂದಿದೆ. ೧೪೮೯.೬೬ ಚದರ ಕಿ.ಮೀ ವಿಸ್ತೀರ್ಣವನ್ನು ಹೊಂದಿದೆ. ಯಲಬುರ್ಗವು ಸಮುದ್ರಮಟ್ಟದಿಂದ ೧೯೮೫ ಅಡಿ ಎತ್ತರದಲ್ಲಿದ್ದು, ಉತ್ತರ ಅಕ್ಷಾಂಶ, ೧೫°-೩೬' ಮತ್ತು ಪೂರ್ವ ರೇಖಾಂಶ ೭೬° ರಲ್ಲಿದೆ. ಆಡಳಿತದ ಅನುಕೂಲಕ್ಕಾಗಿ ೪ ಹೋಬಳಿಗಳನ್ನಾಗಿ ವಿಂಗಡಿಸಲಾಗಿದ್ದು, ಯಲಬುರ್ಗಾ, ಮಂಗಳೂರು, ಕುಕನೂರು ಮತ್ತು ಹಿರೇವಂಕಲಕುಂಟಾ ಹೋಬಳಿಗಳನ್ನು ಒಳಗೊಂಡಿದ್ದು ೧೪೪ ಕಂದಾಯ ಗ್ರಾಮಗಳನ್ನು, ೩೩ ಗ್ರಾಮ ಪಂಚಾಯ್ತಿಗಳು, ೪೧ ಗ್ರಾಮ ಲೆಕ್ಕಿಗರ ವೃತ್ತಗಳು, ೧ ಪಟ್ಟಣ ಪಂಚಾಯ್ತಿ ಹಾಗೂ ೧೧ ಪುರಸಭೆಯ ವಾರ್ಡ್‌ಗಳನ್ನು ಒಳಗೊಂಡಿರುತ್ತದೆ.[೧]

ಯಲಬುರ್ಗ ತಾಲೂಕು ಪೂರ್ವಕ್ಕೆ ಗಂಗಾವತಿ  ಪಶ್ಚಿಮಕ್ಕೆ ಗದಗ ತಾಲೂಕು, ಉತ್ತರಕ್ಕೆ ಕುಷ್ಟಗಿ ತಾಲೂಕು, ದಕ್ಷಿಣಕ್ಕೆ ಕೊಪ್ಪಳ ತಾಲೂಕು ಮತ್ತು ಜಿಲ್ಲಾ ಕೇಂದ್ರದೊಂದಿಗೆ ತನ್ನ ಗಡಿಯನ್ನು ಹಂಚಿಕೊಂಡಿದೆ. ದಕ್ಷಿಣ-ಮಧ್ಯ ರೈಲ್ವೆಯ ಗುಂತಕಲ್-ಹುಬ್ಬಳ್ಳಿ ಮಾರ್ಗವು ಈ ತಾಲೂಕಿನ ದಕ್ಷಿಣ ಭಾಗದಲ್ಲಿ ಸುಮಾರು ೩೦ ಕಿ.ಮಿಗಳ ಉದ್ದಳತೆಯ ರೈಲ್ವೆ ಮಾರ್ಗವಿದೆ ಮತ್ತು ರಾಷ್ಟ್ರೀಯ ಹೆದ್ದಾರಿ ಎನ್‌ಎಚ್-೫೦ (ಹೊಸಪೇಟೆ-ವಿಜಯಪುರ)[೨] ತಾಲೂಕಿನ ಪೂರ್ವಭಾಗದಲ್ಲಿ ಹಾದು ಹೋಗುತ್ತದೆ. ಅಲ್ಲದೆ ರಾಜ್ಯ ಹೆದ್ದಾರಿ (ಎಸ್.ಎಚ್-೧೩೦) ಯಲಬುರ್ಗ-ಮುನಿರಾಬಾದ ಮಾರ್ಗಕ್ಕೆ ಅನುವು ಮಾಡಿಕೊಟ್ಟಿದೆ.[೩] ಮತ್ತು ಯಲಬುರ್ಗಾ ಮಾರ್ಗವಾಗಿ ಎನ್.ಎಚ್-೩೬೭ ಬಾನಾಪುರ-ಬಾದಾಮಿ ಇತ್ತೀಚಿಗೆ ಮಂಜೂರಾಗಿದೆ. ಹಾಗೇಯೇ ಗದಗವಾಡಿ ರೈಲು ಮಾರ್ಗವು ಮಂಜೂರಾಗಿದೆ.

## ಜನಸಂಖ್ಯೆ ಮತ್ತು ಸಾಕ್ಷರತೆ ಪ್ರಮಾಣ

ಯಲಬುರ್ಗ ತಾಲೂಕಿನ ಜನಸಂಖ್ಯೆ ೨೦೧೧ರ ಜನಗಣತಿಯ ಪ್ರಕಾರ ೨,೬೭,೪೪೨ ಇದ್ದು. ಇದರಲ್ಲಿ ಪುರುಷರು ೧೩೫,೧೬೫ ಮತ್ತು ಮಹಿಳೆಯರು ೧,೩೨,೨೭೭ರಷ್ಟು ಇರುವರು. ಅದೇ ರೀತಿ ಯಲಬುರ್ಗ ತಾಲೂಕಿನಲ್ಲಿ ೫೦,೨೧೪ ಕುಟುಂಬಗಳಿದ್ದು ಅವುಗಳಲ್ಲಿ ಪಟ್ಟಣದಲ್ಲಿನ ಕುಟುಮಬಗಳ ಸಂಖ್ಯೆ ೨೮,೫೪ ಮತ್ತು ಗ್ರಾಮೀಣ ಕುಟುಂಬಗಳ ಸಂಖ್ಯೆ ೪೭,೩೬೦ಇದ್ದು ಗ್ರಾಮೀಣ ಭಾಗವೇ ಮೇಲುಗೈ ಸಾಧಿಸಿದೆ.[೪] ಹಾಗೂ ತಾಲೂಕಿನಲ್ಲಿ ಒಟ್ಟು ಗ್ರಾಮೀಣ ಪರಿಶಿಷ್ಟ ಜಾತಿಯ ಜನಸಂಖ್ಯೆ ೪೯,೯೮೭ ಇದ್ದು ಇವುಗಳಲ್ಲಿ ಪುರುಷರು ೨೪,೯೬೧ ಮಹಿಳೆಯರು ೨೪,೩೨೬ರಷ್ಟಿದ್ದಾರೆ.

ತಾಲೂಕಿನ ಜನಸಾಂದ್ರತೆ ಪ್ರತಿ ಚ.ಕಿ.ಮೀಟರ್‌ಗೆ ೧೮೦ ಹಾಗೂ ಲಿಂಗಾನುಪಾತ ೧೦೦೦ ಪುರುಷರಿಗೆ ೯೨೯ ಮಹಿಳೆಯರಿದ್ದಾರೆ.[೫] ತಾಲೂಕಿನ ಒಟ್ಟು ಸಾಕ್ಷರತೆಯ ಪ್ರಮಾಣ ೬೭.೩೨ ರಷ್ಟಿದ್ದು ಇವುಗಳಲ್ಲಿ ಗ್ರಾಮೀಣ ಪ್ರದೇಶದಲ್ಲಿ ೬೬.೫೮% ಮತ್ತು ಪಟ್ಟಣದಲ್ಲಿ ೭೯.೮೪%ರಷ್ಟಿದೆ.

**ವಾಯುಗುಣ ಮತ್ತು ಮಳೆ**

ಯಲಬುರ್ಗ ತಾಲೂಕಿನ ವಾಯುಗುಣವು ಉಷ್ಣವಲಯದ ಮಾನ್ಸೂನ್ ಮಾದರಿಯದ್ದಾಗಿದ್ದು. ಈ ವಾಯುಗುಣವನ್ನು ಮೂರು ಋತುಮಾನಗಳಾಗಿ ವಿಂಗಡಿಸಲಗಿದೆ.

೧. ಮಳೆಗಾಲ

೨. ಚಳಿಗಾಲ

೩. ಬೇಸಿಗೆ ಕಾಲ

ವ್ಯವಸಾಯವನ್ನು ನಂಬಿರುವ ರೈತಾಪಿ ವರ್ಗಕ್ಕೆ ಮಳೆಯು ಅವಶ್ಯಕವಾಗಿದ್ದು ಜೂನ್ ಮತ್ತು ಜುಲೈ ತಿಂಗಳ ಅವಧಿಯಲ್ಲಿ ಬೀಳುವ ಮಳೆಯನ್ನು ಮುಂಗಾರು ಮಳೆ ಎನ್ನುವರು ಮುಂಗಾರು ಮಳೆಯು ಭೂಮಿಯನ್ನು ಉಳುಮೆಮಾಡಿ ಬೀಜಗಳನ್ನು ಬಿತ್ತನೆ ಮಾಡಲು ಅವಶ್ಯಕವಾಗಿರುತ್ತದೆ. ಅಕ್ಟೋಬರ್ ಮತ್ತು ಸೆಪ್ಟೆಂಬರ್ ತಿಂಗಳ ಅವಧಿಯಲ್ಲಿ ಹಿಂಗಾರು ಮಳೆಯ ಅವಧಿ ಎನ್ನುವರು. ಅದೇ ರೀತಿ ಡಿಸೆಂಬರ್‌ನಿಂದ ಫೆಬ್ರುವರಿ ತಿಂಗಳ ಅವಧಿಯನ್ನು ಚಳಿಗಾಲ ಎನ್ನುವರು. ಈ ಅವಧಿಯಲ್ಲಿ ಮೈ ಕೊರೆಯುವ ಚಳಿ ಇದ್ದು, ಜನರು ಬೆಚ್ಚನೆಯ ವಸ್ತುಗಳು ಮತ್ತು ಶಾಖ ಆಹಾರವನ್ನು ಸೇವಿಸುತ್ತಾರೆ. ಮಾರ್ಚ್ ತಿಂಗಳಿಂದ ಮೇ ತಿಂಗಳ ಅವಧಿಯಲ್ಲಿ ಬಿಸಿಲು ಜಾಸ್ತಿ ಇದ್ದು ಉಷ್ಣಾಂಶ ೩೦°ಸಿ ನಿಂದ ೪೦°ಸಿನಷ್ಟು ಹೆಚ್ಚಾಗಿರುತ್ತದೆ. ಈ ಅವಧಿಯಲ್ಲಿ ವಿಪರೀತ ಶಕೆ ಇದ್ದು ತೆಳ್ಳನೆ ಬಟ್ಟೆ ಹಾಗೂ ತಂಪು ಪಾನೀಯಗಳನ್ನು ಅಪೇಕ್ಷಿಸುತ್ತಾರೆ.

**ಖನಿಜ ಸಂಪತ್ತು ಮತ್ತು ಪ್ರಮುಖ ಕೈಗಾರಿಕೆಗಳು**

ಯಲಬುರ್ಗ ತಾಲೂಕಿನಲ್ಲಿ ಅಷ್ಟೊಂದು ಲಾಭದಾಯಕ ಖನಿಜ ಸಂಪತ್ತು ಪತ್ತೆಯಾಗಿಲ್ಲ ಅಸ್ಪೆಸ್ಟಾಸ್, ಕೋರಂಡಮ್, ಫೆಲ್ಡ್ಸ್ಪಾರ್, ಬೆಣಚುಕಲ್ಲು, ಕರೆಕಲ್ಲು, ಸುಣ್ಣದಕಲ್ಲು ದೊರೆಯುತ್ತವೆ ಮತ್ತು ಕಲ್ಲಿನ ಕಡಿಯ ಖನಿಜಗಳು ವಜ್ರಬಂಡಿ ಮತ್ತು ಹರಿಶಂಕರ ಬಂಡಿಗಳಲ್ಲಿ ದೊರಕುತ್ತವೆ. ಇವುಗಳನ್ನು ಈಗಲೂ ರೈಲ್ವೆ ಹಳಿಗಳಿಗೆ ಹಾಕಲು ಉಪಯೋಗಿಸುತ್ತಾರೆ.[೬] ಇವಲ್ಲದೆ ಅಳಿಯಪ್ಪಮಠ ಮತ್ತು ಗೌರಿಗುಡ್ಡಗಳ ಹತ್ತಿರ ದೊರಕುವ ಸೀಳು ಮತ್ತು ಹಾಸು ಬಂಡೆಗಲ್ಲುಗಳನ್ನು ಮನ ಹಾಗೂ ದೇವಸ್ಥಾನಗಳ ನಿರ್ಮಾಣಕ್ಕಾಗಿ ಉಪಯೋಗಿಸುತ್ತಾರೆ. ಯಲಬುರ್ಗ ತಾಲೂಕಿನಲ್ಲಿ ಸ್ಥಳೀಯವಾಗಿ ದೊರೆಯುವ ಸಂಪನ್ಮೂಲಗಳನ್ನು ಬಳಸಿಕೊಂಡು ಸಣ್ಣಪುಟ್ಟ ಕೈಗಾರಿಕೆಗಳು ತಲೆ ಎತ್ತಿದ್ದು ಸಾವಿರಾರು ಜನರಿಗೆ ಉದ್ಯೋಗ ಕಲ್ಪಿಸಿವೆ ಪ್ರಮುಖವಾಗಿ ಇಟ್ಟಿಗೆ ಉದ್ಯಮ, ನೆಯ್ಗೆ ಉದ್ಯಮ ತಾಲೂಕಿನಲ್ಲಿ ವಿಫುಲವಾಗಿ ಬೆಳೆಯುವ ಜಾಲಿಮರಗಳನ್ನು ಸುಟ್ಟು ಇದ್ದಿಲನ್ನು ತಯಾರಿಸುವ ಉದ್ಯೋಗವು ಇಲ್ಲಿ ಕಂಡುಬರುತ್ತದೆ. ಉಣ್ಣೆಯ ಉತ್ಪಾದನೆಯು ಈ ತಾಲೂಕಿನಲ್ಲಿ ಹೆಚ್ಚಾಗಿದೆ. ಸೋಮಾಪುರ ಮತ್ತು ಸಂಗನಾಳಗಳಲ್ಲಿ ತಯಾರಾಗುವ ಕಂಬಳಿಗಳು ಬಹಳ ಪ್ರಸಿದ್ದಿ ಪಡೆದಿವೆ.[೭]

ಕುಕನೂರಲ್ಲಿ ಖಾದಿ ಗ್ರಾಮೋದ್ಯೋಗ ಕೇಂದ್ರವಿದೆ. ಆಡೂರು, ಬೆಣಕಲ್ಲು, ಸಂಗನಾಳು, ತಳಕಲ್ಲು, ಯಲಬುರ್ಗಿ ಮೊದಲಾದ ಸ್ಥಳಗಳಲ್ಲಿ ಖಾದಿ ಗೃಹ ಕೈಗಾರಿಕೆಯು ಹೆಚ್ಚಿದೆ.

**ಮಣ್ಣಿನ ರಚನೆ**

ತಾಲೂಕಿನಲ್ಲಿ ಮುಖ್ಯವಾಗಿ ಬೆಳೆಗಳನ್ನು ಬೆಳೆಯಲು ಉತ್ತಮವಾದ ಮಣ್ಣು ಲಭ್ಯವಿದ್ದು ಫಲವತ್ತತೆಯಿಂದ ಕೂಡಿದೆ. ಜೇಡಿಮಣ್ಣು, ಮರಳು ಮಿಶ್ರಿತ ಕೆಂಪುಮಣ್ಣು (ಕೆಬ್ಬೆಮಣ್ಣು) ಕಪ್ಪು ಮಣ್ಣು (ಎರೆಮಣ್ಣು) ಯಥೇಚ್ಚವಾಗಿ ದೊರೆಯುತ್ತದೆ.

**ಪ್ರಮುಖ ಬೆಳೆಗಳು**

ಜೋಳ, ಸಜ್ಜೆ, ಗೋಧಿ, ಕಡಲೆ, ತೊಗರಿ, ಹತ್ತಿ, ನೆಲಗಡಲೆ, ಹೆಸರು, ಸೊಪ್ಪು-ತರಕಾರಿ, ಸೂರ್ಯಕಾಂತಿ, ಮೆಕ್ಕೆಜೋಳ, ಹಣ್ಣಿನ ತೋಟಗಳು, ಹೂವಿನಗಿಡಗಳು, ಪ್ರಮುಖ ಬೆಳೆಗಳಾಗಿವೆ.

**ಜನ ಜೀವನ**

ತಾಲೂಕಿನಲ್ಲಿ ಸಾಮಾನ್ಯವಾಗಿ ಎಲ್ಲಾ ಧರ್ಮದ, ಎಲ್ಲಾ ಜಾತಿಯ ಜನಾಂಗದ ಜನರನ್ನು ಕಾಣಬಹುದಾಗಿದ್ದು, ಹಿಂದೂಗಳೂ, ಮುಸಲ್ಮಾನರು, ಜೈನರು ಮತ್ತು ಕ್ರಿಶ್ಚಿಯನ್ ಧರ್ಮದವರಿದ್ದು ಹಿಂದೂಗಳು ಬಹುಸಂಖ್ಯಾತರಾಗಿದ್ದಾರೆ. ಹಲವಾರು ಜಾತಿ ಜನಾಂಗದವರಿದ್ದು ತಮ್ಮ ತಮ್ಮ ಕುಲಕಸುಬುಗಳನ್ನು ಆಯ್ದುಕೊಂಡು ಜೀವನ ನಡೆಸಿಕೊಂಡು ಬಂದಿದ್ದಾರೆ.

ಹೆಚ್ಚಿನ ಸಂಖ್ಯೆಯಲ್ಲಿ ಲಿಂಗಾಯತರು, ಗಾಣಿಗರು (ಸಜ್ಜನರು) ಕರಿಗಾಣಿಗರು, ಬಣಚಿಗರು, ಬ್ರಾಹ್ಮಣರು, ಶೆಟ್ಟರು, ಮುಸ್ಲಿಮರು, ಕೊರವರು (ಬಜಂತ್ರಿಯರು), ಕುಂಚಿಕೊರವರು, ಒಡ್ಡರು, ಬೇಡರು, ಒಕ್ಕಲಿಗರು, ರೆಡ್ಡಿಗಳು, ಚಲವಾದಿಗಳು, ಉಪ್ಪಾರರು, ಬಾರಕೇರರು, ಹರಿಜನರು, ಗಿರಿಜನರು ಅಲ್ಲದೇ ಲಂಬಾಣಿಗರು, ಹಾವಾಡಿಗಳು, ಕರಡಿ ಆಡಿಸುವವರು, ಕವಲೆತ್ತಿನವರು, ವೇಷಗಾರರು, ಪರ್ವತಮಲ್ಲಯ್ಯನವರು ಈ ಮೊದಲಾದ ಅಲೆಮಾರಿ ಜನರನ್ನು ನಾವು ಕಾಣಬಹುದು. ಇಲ್ಲಿ ಹೆಚ್ಚಿನ ಜನರು ಕೃಷಿ ಚಟುವಟಿಕೆಯಲ್ಲಿ ತೊಡಗಿದ್ದಾರೆ. ಅಲ್ಲದೆ ಕೆಲವರು ದೊಡ್ಡ ಪಟ್ಟಣಗಳಿಗೆ ಉದ್ಯೋಗಕ್ಕಾಗಿ ವಲಸೆ ಹೋಗುತ್ತಿದ್ದಾರೆ ಮತ್ತೆ ಕೆಲವರು ಪಶುಪಾಲನೆಯನ್ನು ಸ್ವಯಂ ಉದ್ಯೋಗ ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ.

**ಜಲ ಸಂಪನ್ಮೂಲಗಳು**

ಈ ಪ್ರದೇಶವು ಬಯಲು ಸೀಮೆಯಾಗಿರುವುದರಿಂದ ನೀರಿನ ತಾಣಗಳೆಂದರೆ ಕೆರೆ ಬಾವಿಗಳು ಮತ್ತು ಕೊಳವೆ ಬಾವಿಗಳನ್ನು ಅವಲಂಬಿಸಿರುತ್ತದೆ. ತಾಲೂಕಿನಲ್ಲಿ ಯಾವ ನದಿಯು ಹರಿಯುವುದಿಲ್ಲ. ಆದರೆ ಯಲಬುರ್ಗಿ, ಮಸಾರಿ ಹಂಚನಾಳ ಮತ್ತು ಮಂಗಳೂರು ಹತ್ತಿರ ಮೂರು ದೊಡ್ಡ ಹಳ್ಳಗಳು ಇದ್ದು, ಅವೂ ಮಳೆಗಾಲದಲ್ಲಿ ಕೆಲವು ತಿಂಗಳು ಮಾತ್ರ ಹರಿಯುತ್ತವೆ. ಹಿಂದೆ ಅನೇಕ ಕೆರೆಗಳಿದ್ದವು ಆದರೆ ಇಂದು ಎಲ್ಲವೂ ಒತ್ತುವರಿಯಾಗಿ ಮಾಯವಾಗಿವೆ. ಅವುಗಳಲ್ಲಿ ಒಂದಾದ ಕೆಂಪುಕೆರೆ ಇದು ೮೫ ಎಕರೆ ಜಲಸಂಗ್ರಹಣೆ ಸಾಮರ್ಥ್ಯವನ್ನು ಹೊಂದಿದ್ದು ಸುಮಾರು ೮೫೦ ಎಕರೆ ಕೃಷಿ ಭೂಮಿಗೆ ನೀರನ್ನು ಒದಗಿಸುತ್ತದೆ ಎಂದು ಅಂದಾಜು ಮಾಡಲಾಗಿದೆ.[೮]

**ಅರಣ್ಯ ಸಂಪತ್ತು**

ಯಲಬುರ್ಗ ತಾಲೂಕಿನಲ್ಲಿ ಯಥೇಚ್ಚವಾಗಿ ದಟ್ಟವಾದ ಅರಣ್ಯ ಕಂಡುಬರುವುದಿಲ್ಲ. ಕಾರಣ ಈ ಪ್ರದೇಶವು ಬಯಲು ಸೀಮೆಯಾಗಿದ್ದು. ಅರಣ್ಯ ಪ್ರದೇಶ ಕಡಿಮೆ ಪ್ರಮಾಣದಲ್ಲಿದೆ. ತಾಲೂಕಿನಲ್ಲಿ ಒಟ್ಟು ಅರಣ್ಯ ವಿಸ್ತೀರ್ಣ ಕೇವಲ ೮೦ ಹೆಕ್ಟೇರ್‌ಗಳಷ್ಟಿದೆ. ಇಲ್ಲಿನ ಅರಣ್ಯ ಪ್ರದೇಶದಲ್ಲಿ ಪ್ರಮುಖವಾಗಿ ಬೇವು, ಜಾಲಿ, ನೀಲಗಿರಿ, ಹುಣಸೆ, ಮುಳ್ಳಿನಿಂದ ಕೂಡಿದ ಸಸ್ಯಗಳು, ಹಾಲು ತುಂಬಿದ ಕಳ್ಳಿಗಳು ಕಂಡುಬರುತ್ತವೆ. ಇವುಗಳ ಜೊತೆ ಕೃಷಿ ಭೂಮಿಯಲ್ಲಿ ಮಾವು, ತೆಗಾ, ಸಪೋಟಾ, ಮರಗಳನ್ನು ಕಾಣಬಹುದಾಗಿದೆ.

ಅದೇ ರೀತಿ ಪ್ರಮುಖ ಕಾಡು ಪ್ರಾಣಿಗಳೆಂದರೆ ಕಾಡು ಹಂದಿ, ಕರಡಿ, ತೋಳ, ನರಿ, ಮೊಲ, ನವಿಲು, ಜಿಂಕೆ, ಮುಂಗುಸಿ, ವಿಷ ಜಂತುಗಳದ ನಾಗರಹಾವು, ಚೇಳು, ಓತಿಕೇತ, ಇಲಿ, ಹೆಗ್ಗಣಗಳನ್ನು ಕಾಣಬಹುದಾಗಿದೆ.ಇಲ್ಲಿ ಹಿಂಡು ಹಿಂಡಾಗಿ ಜಿಂಕೆಗಳು ಕಂಡುಬರುತ್ತವೆ.

**೨.೨. ಸ್ಥಳ ನಾಮ ಮತ್ತು ಸ್ಥಳ ಪುರಾಣ**

ಮಾನವ ತನ್ನ ಅಲೆಮಾರಿ ಜೀವನವನ್ನು ಕೈ ಬಿಟ್ಟು ಪ್ರಕೃತಿಯಲ್ಲಿ ತನ್ನ ಜೀವನವನ್ನು ಒಗ್ಗಿಸಿಕೊಳ್ಳುವುದು ಸಾಧ್ಯ ಎಂಬುದನ್ನು ಮನಗಂಡನೋ, ಆಗ ಊರು–ಹಳ್ಳಿಗಳ ಉಗಮವಾಯಿತು. ನೆಲದೊಂದಿಗೆ ಹೋರಾಡುವ ಪ್ರಕ್ರಿಯೆಯಲ್ಲಿ ತಾನು ನೆಲೆಗೊಂಡ ಸ್ಥಳದ ಜೊತೆಗೆ ತನ್ನನ್ನು ತಾನು ತೊಡಗಿಸಿಕೊಂಡ, ಸಂಕೇತವಾಗಿ ಆ ಸ್ಥಳಕ್ಕೆ ಆತ ಒಂದು ಹೆಸರಿಟ್ಟ, ಆ ಸ್ಥಳ ಅವನ ಜೀವನದಲ್ಲಿ ಹಾದುಹೋದ ಕುರುಹಾಗಿ ಒಂದು ಹೆಸರು ತಳೆಯಿತು, ಕ್ರಮೇಣ ಅಲ್ಲಿ ಜನವಸತಿ ಇರಲಿ ಇರದಿರಲಿ ಒಂದು ಜನಾಂಗದ ಸ್ಮೃತಿಯನ್ನು ಹೊತ್ತ ಆ ಗುರುತು ಬಳಕೆಯಾಗುತ್ತಿತ್ತು. ಹಲವು ಜನಾಂಗಗಳ ಸ್ಮೃತಿಯ ಒಂದು ಕೊಂಡಿ ಎನಿಸಿತು. ಈ ಕೊಂಡಿಯೇ ಸ್ಥಳನಾಮ.

ಸ್ಥಳದ ಹೆಸರು ಸಾಮಾನ್ಯವಾಗಿ ಅಲ್ಲಿಯ ಭೌಗೋಳಿಕ ಹಾಗೂ ಸಾಂಸ್ಕೃತಿಕ ವೈಶಿಷ್ಟ್ಯತೆಯ ಲಕ್ಷಣದಿಂದ ನಿಯಂತ್ರಿತವಾಗಿರುತ್ತದೆ. ಕಾರಣ ಯಾವುದೇ ಒಂದು ನಿರ್ದಿಷ್ಟಕಾಲದಲ್ಲಿ ತಲೆಯೆತ್ತಿದ ಹೆಸರಿನಲ್ಲಿ ಆ ಪರಿಸರದ ಭೂ ವಿಶೇಷತೆ ಇರುತ್ತದೆ. ಈ ತೆರೆನಾದ ಮೂಲಭೂತ ಅಂಶವೇ ಸ್ಥಳನಾಮಗಳ ಹುಟ್ಟಿನ ಹಿಂದಿನ ರಹಸ್ಯವಾಗಿದ್ದು, ಅವು ಶಾಶ್ವತವಾಗಿ ಉಳಿಯುವ ಕ್ರಿಯಾ ಶಕ್ತಿಯಾಗಿದೆ. ಕೆಲವೊಮ್ಮೆ ಸ್ಥಳನಾಮಗಳು ಚಾರಿತ್ರಿಕ ವ್ಯಕ್ತಿ, ಅಧಿಕಾರಿ, ಕುಲದೇವತೆ ಅಥವಾ ಚಾರಿತ್ರಿಕ ಮಹತ್ವದ ಘಟನೆಗಳನ್ನು ಸ್ಮರಿಸುವ ಉದ್ದೇಶದಿಂದ ಸ್ಥಳನಾಮಗಳು ಹುಟ್ಟಿಕೊಂಡಿರುತ್ತವೆ.[೮]

**ಯಲಬುರ್ಗಾ ಸ್ಥಳದ ನಾಮನಿಷ್ಪತ್ತಿ**

ಯಲಬುರ್ಗ ಎಂಬ ಸ್ಥಳವು ಐತಿಹಾಸಿಕವಾಗಿ, ಸಾಂಸ್ಕೃತಿಕವಾಗಿ, ಮಹತ್ವ ಹೊಂದಿದ್ದು ಈ ಸ್ಥಳಕ್ಕೆ ಯಲಬುರ್ಗ ಎಂಬ ಹೆಸರು ಹೇಗೆ ಬಂದಿತು? ಇದರ ಹಿನ್ನಲೆ ಏನು? ಎಂಬುದನ್ನು ಕೂಲಂಕಶವಾಗಿ ತಿಳಿಯಬೇಕಾಗಿದೆ.

ರಾಮಪುರ ಕೆರೆ, ಕೆಂಪುಕೆರೆ, ಕರೆಕೆರೆ, ಮೊದಲಾದ ಏಳು ಕೆರೆಗಳು ಈ ಊರಿನ ಸುತ್ತಲೂ ಇದ್ದು ಇದರಿಂದಾಗಿ ಈ ಊರಿಗೆ ಏಳುಂಬರಗೆ ಎಂಬ ಹೆಸರು ಬಂದಿರಬಹುದು.[೧೦]

ಮುಸಲ್ಮಾನರ ಆಳ್ವಿಕೆಯಲ್ಲಿ ಇದನ್ನು ಯಲಬುರ್ಗಾ ಎಂದು ಕರೆಯಲಾರಂಭಿಸಿದರು. ಈಗ ಯಲಬುರ್ಗಿ ಎಂಬ ಹೆಸರೇ ಹೆಚ್ಚು ರೂಢಿಯಲ್ಲಿದೆ.[೧೧]

ಯರಂ+ಬರಗೆ=ಯರಂಬರಗೆ ಯರಂ ಅಥವಾ ಯರ್‍ರಂ ಎಂದರೆ ದ್ರಾವಿಡ ಭಾಷೆಯಲ್ಲಿ ಕೆಂಪು ಎಂದರ್ಥ ಬರಗೆ ಎಂದರೆ ಪಕ್ಕದ ಪ್ರದೇಶ ಎಂದು ಅರ್ಥ ನೀಡುತ್ತವೆ.(ಕನ್ನಡ ನಿಘಂಟು)ಯಲಬುರ್ಗದ ಸುತ್ತಮುತ್ತಲಿನ ಪ್ರದೇಶ ಕೆಂಪು ಮಣ್ಣಿನಿಂದ ಕುಡಿದ್ದು ಬಹುಶಃ ಕೆಂಪುಪ್ರದೇಶದ ಪಕ್ಕದಲ್ಲಿರುವ ಈ ಪಟ್ಟಣಕ್ಕೆ ಯರಂಬರಗೆ ಎಂಬ ಹೆಸರು ಬಂದಿರುವುದನ್ನು ತಳ್ಳಿಹಾಕುವಂತಿಲ್ಲ.

**ಕರಿಕೆರೆ**

ಈ ಕೆರೆಯು ಪಟ್ಟಣಕ್ಕೆ ಹೊಂದಿಕೊಂಡಂತೆ ಪೂರ್ವದಿಕ್ಕಿನಲ್ಲಿದೆ. ಈ ಕೆರೆಗೆ ಸಂಬಂಧಿಸಿದಂತೆ ಒಂದು ಐತಿಹ್ಯವಿದೆ. ಯರಂಬರಗೆಯ ಸಿಂದ ದೊರೆ ಆಚರಸನು ಆಳುವಾಗ ಒಮ್ಮೆ ಭೀಕರ ಬರಗಾಲ ಬಂದು ಅನೇಕ ವರ್ಷಗಳ ಕಾಲ ಮಳೆ ಬರಲಿಲ್ಲ. ಮತ್ತು ಬೆಳೆಯು ಇಲ್ಲದೆ, ಜನ ಜಾನುವಾರುಗಳು ನೀರಿಲ್ಲದೆ. ಸಾಯಲಾರಂಭಿಸಿದವಂತೆ, ಈ ಕಷ್ಟವನ್ನು ನೋಡಿದ ಆಚರಸ ಶಿವಗುರು ಆಚಾರ್ಯರ ಬಳಿ ತೆರಳಿ, ಸಂಕಷ್ಟ ಪರಿಹಾರಕ್ಕೆ ಕೋರಿದ. ಆ ಗುರುಗಳು ಗ್ರಾಮದ ಕಲ್ಲೇಶ್ವರ ಗುಡಿಯಲ್ಲಿ ಸಪ್ತಭಜನೆ ಮಾಡಬೇಕೆಂದು ಹೇಳಿ ಇದರಿಂದ ಮಳೆಬರುವುದಾಗಿ ತಿಳಿಸುತ್ತಾರೆ. ಆಗ ಅರಸನು. ಸುತ್ತ–ಮುತ್ತಲಿನ ಗ್ರಾಮದ ಜನರಿಗೆ ವಿಷಯ ಡಂಗುರ ಹೊಡೆಸಿ ತಿಳಿಸಲಾಗಿ ಜನರು ಕಲ್ಲೇಶ್ವರ ಗುಡಿಗೆ ಬಂದು ಸಪ್ತಭಜನೆ ಮಾಡಲು ಮಳೆ ಧಾರಾಕಾರವಾಗಿ ಸುರಿಯುತ್ತದೆ. ಆದರೆ ನೀರು ಎಲ್ಲಿಯೂ ಸಂಗ್ರಹವಾಗುವುದಿಲ್ಲ ಮಳೆಗೆ ಊರಕೆರೆಯು ತುಂಬುವುದಿಲ್ಲ. ಇದರಿಂದ ಚಿಂತಿತನಾದ ಅರಸ ಮತ್ತೆ ಗುರುಗಳ ಬಳಿ ಕೇಳಿಕೊಳ್ಳುತ್ತಾನೆ. ಗುರುಗಳು ಯಾರಾದರೂ ಆರು ಬೆರಳುಳ್ಳ ಗರತಿ ಕೆರೆಗೆ ಆಹಾರವಾಗಿ ನೀಡಿದರೆ ಕೆರೆ ತುಂಬುತ್ತದೆ ಎಂದು ಹೇಳಿದರಂತೆ ಈ ವಿಷಯವನ್ನು ಮತ್ತೆ ರಾಜ ಡಂಗುರ ಸಾರಿಸಿದ, ರಾಜಭಟರು ಹುಡುಕಾಟ ನಡೆಸಿದರು ದೊರೆಯಲಿಲ್ಲ ಆಗ ಬೇಲೇರಿ ಗ್ರಾಮದ ಸುಣಗಾರ ಮನೆತನದ ಕೆಂಚಮ್ಮಳಿಗೆ ಈ ವಿಷಯ ತಿಳಿಯಿತು ಆಕೆಗೆ ಆರು ಬೆರಳುಗಳಿದ್ದವಂತೆ ಆಕೆ ರಾಜ್ಯಕ್ಕೆ ಒಳ್ಳೆಯದಾಗುವುದಾದರೆ ತಾನು ಕೆರೆಗೆ ಹಾರಲು ಸಿದ್ಧ ಎಂದು ಗಂಡ, ಮಾವ, ಮಕ್ಕಳಿಗೆ ಹೇಳದೆ ರಾತ್ರೋರಾತ್ರಿ ಎದ್ದು ರಾಜನ ಆಸ್ಥಾನಕ್ಕೆ ಬಂದಳು ಆಕೆಯನ್ನು ಕೆರೆಗೆ ಹಾರವಾಗಿ ನೀಡಲಾಯಿತು. ಆಕೆಯ ನೆನಪಿಗಾಗಿ ಕೆರೆ ಕೆಂಚಮ್ಮ ಎಂಬ ಗುಡಿಯನ್ನು ಕಟ್ಟಲಾಯಿತು ಅಂದಿನಿಂದ ಇಂದಿನವರೆಗೆ ಜನರು ಕೆರೆ ತುಂಬಿದಾಗ ಪೂಜಿಸುತ್ತಾರೆ.

**ತೋಪಿನ ಹನುಮಪ್ಪನ ಐತಿಹ್ಯ**

ಕುಲಕರ್ಣಿ ವಂಶದ ಮೂಲಪುರುಷ ರಾಯಪ್ಪ ೧೨೦೦ಕ್ಕೂ ಹೆಚ್ಚು ಕೂರಿಗೆ ಭೂಮಿ ಹೊಂದಿದ್ದ. ಈತ ಕಾಲವಾದ ನಂತರ ಆತನ ಒಬ್ಬನೇ ಮಗನಾದ ತಿಮ್ಮಪ್ಪನು ವಿವಿದೆಡೆ ಹಂಚಿ

ಹೋಗಿದ್ದ ೮೫೦ ಕೂರಿಗೆ ಜಮೀನನ್ನು ಸ್ವತಃ ಸಾಗುವಳಿ ಮಾಡುತ್ತ ಬರುತ್ತಿದ್ದ ಈ ಜಮೀನಿನಲ್ಲಿ ಗಿಡಮರಗಳು ಬೆಳೆದು, ದೊಡ್ಡ ಕಾಡಿನಂತೆ ಕಾಣುತ್ತಿತ್ತಂತೆ. ಹೊಲದಲ್ಲಿ ಕೆಲಸ ಮಾಡಿ ಆಯಾಸಗೊಂಡ ತಿಮ್ಮಪ್ಪ ಆಲದ ಗಿಡದ ಕೆಳಗೆ ವಿಶ್ರಾಂತಿ ಪಡೆಯಲಿಕ್ಕೆಂದು ಮಲಗಿಕೊಂಡಿದ್ದಾಗ, ಸ್ವಪ್ನದಲ್ಲಿ "ಆಲದ ಗಿಡದ ಟೊಂಗೆಯಿಂದ ನೆಲಕ್ಕೆ ಚಾಚಿದ ಬೇರಿನ ಗುಂಟ ಬಂದ ಒಂದು ದೊಡ್ಡ ಸರ್ಪ "ತಿಮ್ಮಪ್ಪ"ನ ಕಿವಿಯೊಳಗೆ "ನಿಮ್ಮ ವಂಶದ ಶ್ರೇಯೋಭಿವೃದ್ಧಿಗಾಗಿ ದೇಗುಲವೊಂದನ್ನು ನಿರ್ಮಿಸು" ಎಂದು ಹೇಳಿತಂತೆ ತಿಮ್ಮಣ್ಣ ಕುಲಕರ್ಣಿಯವರು ನಾಗದೇವನ ಆಜ್ಞೆಯಂತೆ ದೇಗುಲ ನಿರ್ಮಿಸಿದರಂತೆ ಎಂದು ಈ ಕುಲಕರ್ಣಿ ವಂಶದ ಕೊನೆಯ ಕೊಂಡಿ ವೆಂಕಟರಾವ್ ಮುಂಡಾಸ್ ಹೇಳುತ್ತಾರೆ. ಈ ಸ್ಥಳದ ಐತಿಹ್ಯ ನೆನೆಯುತ್ತದೆ.

**೨.೩. ಪ್ರಾಗಿತಿಹಾಸ**

ಮನುಷ್ಯ ಬರವಣಿಗೆಯನ್ನು ಕಂಡುಕೊಳ್ಳುವ ಮೊದಲು ಅವನ ಜೀವನದ ರೀತಿನೀತಿಗಳು ಅಷ್ಟೇನು ಸುಧಾರಿಸದೇ ಇದ್ದ ಕಾಲಾವಧಿಯನ್ನು ಪ್ರಾಗೈತಿಹಾಸಿಕ ಕಾಲವೆಂದು ಕರೆಯಲಾಗುತ್ತದೆ. ಸೃಷ್ಟಿಯಲ್ಲಿ ಮಾನವನಿಗೆ ಒಂದು ವಿಶಿಷ್ಟ ಸ್ಥಾನವಿದೆ. ಮೂಲತಃ ಮಾನವ ಪ್ರಕೃತಿಯನ್ನು ಅವಲಂಬಿಸಿಕೊಂಡು ಜೀವಿಸಲೇಬೇಕಾದ ಪರಿಸ್ಥಿತಿ ಅವನಿಗಿತ್ತು. ಇಂದಿಗೂ ಸುಮಾರು ನಾಲ್ಕು ಮಿಲಿಯನ್ ವರ್ಷಗಳ ಹಿಂದೆ ಮನುಷ್ಯ ಶಿಲೆಯೊಡನೆ ನಿಕಟ ಸಂಬಂಧ ಹೊಂದಿದ್ದಾನೆ. ಪ್ರಕೃತಿ ಮಾನವನಿಗೆ ಮೊದಲು ನೀಡಿದ ಕೊಡುಗೆಗಳಲ್ಲಿ ಶಿಲೆಯೂ ಒಂದಾಗಿದೆ. ಆರಂಭದಲ್ಲಿ ಅಲೆಮಾರಿಯಾಗಿದ್ದ ಮಾನವನಿಗೆ ಗೆಡ್ಡೆಗೆಣಸುಗಳನ್ನು ಅಗೆದು ತೆಗೆಯಲು, ಗಿಡಗಳನ್ನು ಕಡಿಯಲು, ಬೇಟೆಯಾಡಲು, ಬೇಟೆಯಾಡಿದ ಪ್ರಾಣಿ ಮಾಂಸವನ್ನು ತುಂಡು ಮಾಡಲು, ಆಯುಧಗಳನ್ನು ತಯಾರಿಸಲು ಶಿಲೆ ಬಳಕೆಯಾಗುತ್ತಿತ್ತು. ಈ ಕಾಲಾವಧಿಯನ್ನು ಶಿಲಾಯುಗ (Stone tge) ಎಂದು ಕರೆಯುತ್ತಾರೆ. ಅತ್ಯಂತ ದೀರ್ಘವಾದ ಈ ಯುಗವನ್ನು ಕ್ರಮವಾಗಿ ೧. ಹಳೆ ಶಿಲಾಯುಗ, ೨. ಮಧ್ಯಶಿಲಾಯುಗ (ಸೂಕ್ಷ್ಮ ಶಿಲಾಯುಗ), ೩. ನವಶಿಲಾಯುಗ, ೪. ಬೃಹತ್ ಶಿಲಾಯುಗ ಎಂದು ನಾಲ್ಕು ಹಂತಗಳಾಗಿ ವಿಭಾಗಿಸಲಾಗಿದೆ.[೨]

**೧. ಹಳೆ ಶಿಲಾಯುಗ**

ಹಳೆ ಶಿಲಾಯುಗದ ಇತಿಹಾಸದ ಬಗ್ಗೆ ಕರ್ನಾಟಕದಲ್ಲಿ ವಿಸ್ತೃತವಾದ ಅಧ್ಯಯಗಳು ನಡೆದಿವೆ. ಕೃಷ್ಣ, ಕಾವೇರಿ, ತುಂಗಭದ್ರಾ ಮತ್ತೆ ಅವುಗಳ ಉಪನದಿಗಳ ಪ್ರದೇಶದಲ್ಲಿ ಹಳೆ ಶಿಲಾಯುಗದ ಮಾನವನ ಬದುಕು ರೂಪಗೊಂಡಿತ್ತು. ಸುಮರು ೭ ಲಕ್ಷದಿಂದ ೧.೨೫ ಲಕ್ಷ ವರ್ಷಗಳಷ್ಟು ಹಳೆಯದೆಂದು ಗುರುತಿಸಲಾದ ಆದಿ ಹಳೆಶಿಲಾಯುಗದ ಅವಶೇಷಗಳು,[೩] ಅನೇಕ ಸ್ಥಳಗಳಲ್ಲಿ ಕಂಡುಬಂದಿವೆ. ಕೊಪ್ಪಳ ಜಿಲ್ಲೆಯ ಈ ಪ್ರದೇಶವು ಹಳೆಯ ಶಿಲಾಯುಗದ ನೆಲೆಯಾಗಿತ್ತೇ ಎಂದು ಖಚಿತವಾಗಿ ಹೇಳಲಾಗದಿದ್ದರೂ ಆ ನಿಟ್ಟಿನಲ್ಲಿ ಊಹೆ (Hyphothesis) ಇಟ್ಟುಕೊಳ್ಳಲು ಅಡ್ಡಿಯಿಲ್ಲ ಭೂ ಉತ್ಖನನ ಸಂಶೋಧನೆಗಳಿಂದ ಜದವಾಲ, ಲಿಂಗನಬಂಡಿ.

ಕಾತರಾಳಗಳಲ್ಲಿ ಶಿಲಾಯುಗದ ಅವಶೇಷಗಳು ದ್ವರೆತಿವೆ, ಈ ಕುರಿತು ಇನ್ನೂಹೆಚ್ಚಿನ ಸಂಶೋಧನೆಗಳ ಅಗತ್ಯವಿದೆ.[೧೪]

**೨. ಸೂಕ್ಷ್ಮ ಶಿಲಾಯುಗ**

ಹಳೆಯ ಶಿಲಾಯುಗ ಮತ್ತು ನೂತನ ಶಿಲಾಯುಗದ ನಡುವಿನ ಸಾಂಸ್ಕೃತಿಕ ಹಂತವನ್ನು ಮಧ್ಯಶಿಲಾಯುಗವೆಂದು ಕರೆಯುತ್ತಾರೆ. ಕರ್ನಾಟಕದಲ್ಲಿ ಸೂಕ್ಷ್ಮಶಿಲಾಯುಗದ ನಿವೇಶನಗಳು ೧೯೩೬ರ ವೇಳೆಗೆ ಬೆಳಕಿಗೆ ಬಂದಿವೆ. ಬ್ರಹ್ಮಗಿರಿ ಉತ್ಖನನ (ವೀಲ್ಹರ್: ೧೯೪೭)ದಲ್ಲಿ ಈ ಹಂತದ ಉಪಕರಣಗಳು ಗಮನಾರ್ಹ ಪ್ರಮಾಣದಲ್ಲಿ ದೊರಕಿದ್ದರೂ ಅವುಗಳನ್ನು ನಿರ್ದಿಷ್ಟ ಹಾಗೂ ಪ್ರತ್ಯೇಕ ಸ್ತರದಲ್ಲಿದ್ದುದನ್ನು ಗುರುತಿಸಿ, ನೂತನ ಶಿಲಾಯುಗಕ್ಕೆ ಸೇರಿದವೆಂದು ಭಾವಿಸಲಾಗಿತ್ತು, ಕರ್ನಾಟಕದ ಅನೇಕ ಕಡೆಗಳಲ್ಲಿ ಈ ಹಂತದ ಉಪಕರಣಗಳು ಮತ್ತು ಗವಿವರ್ಣ ಚಿತ್ರಗಳು ಕಂಡುಬಂದಿದೆ.

ಈ ಪರಿಸರದಲ್ಲಿ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದಂತೆ ಕೊಪ್ಪಳ ಜಿಲ್ಲೆಯ ಇಂದಿರಗಿ ಗ್ರಾಮ ಹಾಗೂ ಏಳುಗುಡ್ಡದ ಪರಿಸರದಲ್ಲಿ ಕೆಲವು ನೆಲೆಗಳು ದೊರೆತಿವೆ, ಆದರು ಈ ಅವಧಿಯ ಬಗ್ಗೆ  ಸಂಶೋಧನೆಗಳು ತೃಪ್ತಿಕರವಾಗಿ ನಡೆದಿಲ್ಲದಿರುವುದು ವಾಸ್ತವ ಸಂಗತಿ.

**೩. ನೂತನ ಶಿಲಾಯುಗ (Neolithic age)**

ಕೃಷಿ ಆಧಾರಿತ ಬದುಕನ್ನು ರೂಪಿಸಿಕೊಂಡು ಹಾಗೂ ಪ್ರಾಣಿಗಳನ್ನು ಪಳಗಿಸಿಕೊಂಡು ಒಂದೆಡೆ ನೆಲೆನಿಂತ ಗ್ರಾಮೀಣ ಬದುಕನ್ನು ಕಟ್ಟಿಕೊಂಡ ಈ ಹಂತದ ಬೆಳವಣಿಗೆಯನ್ನು ಗೋರ್ಡನ್ ಚೈಲ್ಡ್ "ನೂತನ ಶಿಲಾಯುಗದ ಕ್ರಾಂತಿ" ಎಂದು ಕರೆದ, ಇಂದಿನ ಗ್ರಾಮೀಣ ಬದುಕಿಗೆ ಇದೆ ಮೂಲಕಾರಣ ಹಾಗೂ ಪ್ರೇರಣೆಯಾಗಿದೆ ಎನ್ನಬಹುದು. ಈ ಹಂತದ ಉಪಕರಣಗಳನ್ನು ಕೊಡಲಿ, ಬಾಚಿ, ಉಳಿ, ಸುತ್ತಿಗೆ, ಕೆತ್ತುಳಿ, ಅರೆಯುವ ಕಲ್ಲು, ಉಂಗುರಕಲ್ಲು, ಕವಣೆಕಲ್ಲು ಮೊದಲಾದ ಉಪಕರಣಗಳನ್ನು ಸಿದ್ಧಗೊಳಿಸಲಾಗಿತ್ತೆಂದು ತಿಳಿಯುತ್ತದೆ. ಮಣ್ಣಿನ ಮಡಿಕೆಗಳು, ಆರಂಭ ಹಂತದಲ್ಲಿ ಕೈಯಲ್ಲಿ ರೂಪಿಸಲಾಗುತ್ತಿತ್ತು. ನಂತರದಲ್ಲಿ ತಿರುಗಿಸಲ್ಪಡುವ ತಿಗರಿ (ಚಕ್ರ)ಗಳಲ್ಲಿ ತಯಾರಿಸಲಾಗುತ್ತಿತ್ತು, ಹೆಚ್ಚು ತೆಳ್ಳನೆಯ ಮೃತ್‌ಪಾತ್ರೆಯಲ್ಲಿ ಕಂಡುಬರುತ್ತವೆ. ಈ ಸಂಸ್ಕೃತಿಗೆ ಸಂಬಂಧಿಸಿದಂತೆ ಬ್ರಹ್ಮಗಿರಿ, ಮಸ್ಕಿ, ಪಿಕ್ಲಿಹಾಳ್, ತೆಕ್ಕಲಕೋಟೆ, ಕಪ್ಪಗಲ್, ಹಳ್ಳೂರು,ಆನೆಗುಂದಿ, ಟಿ.ನರಸೀಪುರ, ಕೊಡೇಕಲ್, ಹೆಮ್ಮಿಗೆ, ಬನವಳ್ಳಿ ಮುಂತಾದ ನೆಲೆಗಳಲ್ಲಿ ಕಂಡುಬಂದಿವೆ.

ಯಲಬುರ್ಗ ಪರಿಸರದಲ್ಲಿ ನೂತನ ಶಿಲಾಯುಗಕ್ಕೆ ಸಂಬಂಧಿಸಿದಂತೆ ಜರಗುಂಟೆಯಲ್ಲಿ ಈ ಹಂತದ ಬೂದಿ-ದಿಬ್ಬ ದೊರಕಿದ್ದು ಸುತ್ತಮುತ್ತ ಚರ್ಚ್‌ಶಿಲೆಯ ಚಕ್ಕೆಗಳು ಕಂಡುಬಂದಿವೆ.[೧೫] ಮತ್ತು ಕಾತರಾಳದಲ್ಲಿ ಬೂದಿ-ದಿಬ್ಬ ಕಂಡು ಬಂದಿದ್ದು,[೧೬] ಈ ಎಲ್ಲಾ ನೆಲೆಗಳಲ್ಲಿ ಸಾಮಾನ್ಯವಾಗಿ ರಾಯಚೂರು ಜಿಲ್ಲೆ ಮತ್ತು ಕೊಪ್ಪಳ ಜಿಲ್ಲೆಯಲ್ಲಿ ದೊರೆತ ನೂತನ ಶಿಲಾಯುಗ ಸಂಸ್ಕೃತಿಯ ಬೂದು ವರ್ಣ ಮಣ್ಣಿನ ಪಾತ್ರಗಳಂತಹ ಮೃತ್‌ಪಾತ್ರೆಯ ಚೂರುಗಳು ಅಪರೂಪವಾಗಿ

ಉತ್ತಮ ಜಾತಿಯ ಚಕಮಕಿ ಕಲ್ಲಿನ ಬ್ಲೇಡ್‌ನಂತಹ ಚಕ್ಕೆಗಳು ಸಣ್ಣ ಸಣ್ಣ ಆಯುಧಗಳು ತಿಕ್ಕಿ ನಯ ಮಾಡಿದ ಮೈಯುಳ್ಳ ಕಲ್ಲಿನ ಕೊಡಲಿಗಳು ಅವಶೇಷಗಳು ಪ್ರಾಣಿಗಳ ಎಲುಬುಗಳು ಬೂದಿ ಹಾಳುಮಣ್ಣಿನಲ್ಲಿವೆ.[೧೭]

**೪. ಬೃಹತ್ ಶಿಲಾಯುಗ**

ಸತ್ತವರಿಗಾಗಿ ದೊಡ್ಡ ದೊಡ್ಡ ಕಲ್ಲುಗಳನ್ನು ನಿಲ್ಲಿಸಿ ಗೋರಿಗಳ ನಿರ್ಮಾಣ ಕಾರ್ಯ ನಡೆದಿದ್ದರಿಂದ ಅದನ್ನು ಬೃಹತ್‌ಶಿಲಾಯುಗವೆಂದು ಕರೆಯಲಾಗಿದೆ. ವಿಶಿಷ್ಟ ಬಗೆಯ ಸಂಪ್ರದಾಯದಿಂದ ಕೂಡಿದ ಈ ಹಂತದಲ್ಲಿ ಮಾನವನು ಮುಖ್ಯವಾಗಿ ಕಬ್ಬಿಣದ ಬಳಕೆಯನ್ನು ರೂಢಿಸಿಕೊಂಡಿದ್ದು ಹಾಗೂ ತನ್ನದೇ ಆದ ರೀತಿಯಲ್ಲಿ ಮಡಿಕೆ ಮಾದರಿಗಳನ್ನು ರೂಪಿಸಿಕೊಂಡಿದ್ದನ್ನು (ಈ ಸಂಸ್ಕೃತಿಯ ಹಂತದಲ್ಲಿ ಒಂದು ವಾಸ್ತವ್ಯ ನೆಲೆಯಾದರೆ ಮತ್ತೊಂದು ಗೋರಿ ನೆಲೆಯಾಗಿದೆ) ಶವಸಂಸ್ಕಾರಕ್ಕಾಗಿ ವಿವಿಧ ಸ್ಥಳಗಳಲ್ಲಿ ಕಂಡುಬಂದಿರುವ ನೂರಾರು ಕಲ್ಗೋರಿಗಳು ಈ ಸಂಸ್ಕೃತಿಯ ವೈಶಿಷ್ಟ್ಯವನ್ನು ಹೆಚ್ಚಿಸಿದೆ.

ಯಲಬುರ್ಗ ಪರಿಸರದಲ್ಲಿ ಬೃಹತ್ ಶಿಲಾಯುಗಕ್ಕೆ ಸಂಬಂಧಿಸಿದಂತೆ ಜದವಾಲ್ ಮತ್ತು ತಿಪ್ಪನಾಳ ಪ್ರದೇಶಗಳಲ್ಲಿ ಸಮಾಧಿ ನೆಲೆ ಮತ್ತು ವಸತಿ ನೆಲೆಗಳು ಪತ್ತೆಯಾಗಿವೆ. ನೆಲೆಯ ಭೂಭಾಗದಲ್ಲಿ ಕಪ್ಪುಬಣ್ಣದ ಮಡಿಕೆ ಚೂರುಗಳು ಹಾಗೂ ವಿವಿಧ ನಮೂನೆಯ ಗೃಹಬಳಕೆಯ ಮಡಿಕೆ ಭಾಗಗಳು ದೊರಕಿವೆ.[೧೮] ಶಿಲೆಯ ಜೊತೆಗೆ ಕಬ್ಬಿಣವನ್ನು ಬಳಕೆ ಮಾಡಲಾಯಿತು. ಕಬ್ಬಿಣದ ಬಳಕೆಯೊಂದಿಗೆ ಬೃಹತ್ ಗಾತ್ರದ ಕಲ್ಲುಚಪ್ಪಡಿಗಳನ್ನು ಬಳಸಿ ಸಮಾಧಿಗಳನ್ನು ರೂಪಿಸಿದ ಇದನ್ನು ಕಬ್ಬಿಣ ಯುಗದ ಬೃಹತ್ ಶಿಲಾಗೋರಿ ಸಂಸ್ಕೃತಿ ಎಂದು ಕರೆಯಲಾಯಿತು. ಈ ರೀತಿಯಾಗಿ ಜನರ ಪ್ರಾರಂಭಿಕ ನಂಬಿಕೆಗಳ ತಳಹದಿಯ ಮೇಲೆ ರಚಿತವಾದ "ಬೃಹತ್ ಶಿಲಾಗೋರಿಗಳು ಕೊಪ್ಪಳ ಜಿಲ್ಲೆಯನ್ನೊಳಗೊಂಡಂತೆ ಕರ್ನಾಟಕದ ತುಂಬಾ ಹರಡಿಕೊಂಡಿವೆ. ಹೀಗೆ ಹರಡಿಕೊಂಡ ಶಿಲಾಗೋರಿಗಳ ನೆಲೆಗಳಲ್ಲಿ ಕೊಪ್ಪಳದ ಮಳೆಮಲ್ಲಪನ ಗುಡ್ಡ ಮತ್ತು ಹಿರೇಬೆಣಕಲ್ಲ ನೆಲೆಗಳಲ್ಲಿ ಈ ರೀತಿಯ ನೂರಾರು ಸಮಾಧಿಗಳು ಅತ್ಯಂತ ಸುಸ್ಥಿತಿಯಲ್ಲಿವೆ.

**೨.೪. ಇತಿಹಾಸ**

**ರಾಜಕೀಯ ಇತಿಹಾಸ**

ಒಂದು ನಾಡಿನ ಇತಿಹಸವೆಂದರೆ ಆ ನಾಡನ್ನು ಕಾಲದಿಂದ ಕಾಲಕ್ಕೆ ಆಳಿದ ರಾಜರ ಇತಿಹಸವೆಂಬ ಭಾವನೆ ಪ್ರಚಲಿತವಿದೆ. ಇತಿಹಾಸವನ್ನು ಚಿತ್ರಿಸುವ ಗ್ರಂಥಗಳಲ್ಲಿ ರಾಜಕೀಯ ಇತಿಹಾಸವೇ ಪ್ರಧಾನ, ಇತಿಹಾಸ ಕಾಲದಲ್ಲಿ ಆಳ್ವಿಕೆ ಮಾಡಿದ ಅರಸುಮನೆತನಗಳ ಇತಿಹಾಸವೇನಿದ್ದರೂ ಒಂದು ಪ್ರದೇಶದ ಇತಿಹಾಸ ರಚನೆಗೆ ಅಸ್ಥಿಪಂಜರವನ್ನು ಒದಗಿಸಬಹುದು. ಈ ಅಸ್ಥಿಪಂಜರಕ್ಕೆ ರಕ್ತಮಾಂಸಗಳನ್ನು ತುಂಬುತ್ತದೆ ಆ ಪ್ರದೇಶದ ಜನತೆಯ ಕುರಿತ ಹೋರಾಟ ಸಾಂಸ್ಕೃತಿಕ ಅಧ್ಯಯನ. ಹೀಗೆ ರಾಜಕೀಯ ಮತ್ತು ಸಾಂಸ್ಕೃತಿಕ ಅಧ್ಯಯನಗಳೆರಡೂ ಪರಸ್ಪರ ಪೂರಕ ಮತ್ತು ಪೋಷಕ.[೧೯]

"ನಿರ್ದಿಷ್ಟ ಪ್ರದೇಶದ ಚರಿತ್ರೆಯು ಬಹುವಾಗಿ ಆದರ ಭೂಗೋಲದಿಂದ ನಿರ್ಧಾರವಾಗುತ್ತದಂತೆ" ಮೊದಲೇ ಹೇಳಿದಂತೆ ಪ್ರಸ್ತುತ ಯಲಬುರ್ಗ ಪರಿಸರದಲ್ಲಿ ಆಳ್ವಿಕೆ ಮಾಡಿದ ವಿವಿಧ ಅರಸುಮನೆತನಗಳು ಹಾಗೂ ಪ್ರಾಚೀನ ಆಡಳಿತ ವಿಭಾಗಗಳನ್ನು ಕುರಿತು ಸಹ ನಿರೂಪಿಸಲಾಗಿದೆ. ಈ ಪ್ರದೇಶದಲ್ಲಿ ಆಳ್ವಿಕೆ ಕೈಗೊಂಡಿದ್ದ ಅರಸರು, ಮಾಂಡಳೇಶ್ವರರು, ಸಾಮಂತರು, ಪಾಳೆಯಗಾರರು, ಅಧಿಕಾರವಹಿಸಿಕೊಂಡು ತಮ್ಮ ಆಡಳಿತದ ಅವಧಿಯಲ್ಲಿ ಹಲವು ಜನಪ್ರಿಯ ಕಾರ್ಯಗಳನ್ನು ಕೈಗೊಂಡಿದ್ದು ಅವು ಇಂದಿನವರೆಗೂ ಪ್ರಚಲಿತದಲ್ಲಿವೆ. ಮತ್ತು ಶಾಶ್ವತವಾಗಿ ಜನಮನದಲ್ಲಿವೆ. ಇಂತಹ ವಿಚಾರಗಳನ್ನು ಸಾಂಸ್ಕೃತಿಕವಾಗಿ ಅಧ್ಯಯನ ಮಾಡಿ ಚಾರಿತ್ರಿಕ ಹಿನ್ನೆಲೆ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

**ಮೌರ್ಯರು**

ಉತ್ತರ ಭಾರತದಲ್ಲಿ ಪ್ರಪ್ರಥಮವಾಗಿ ಐತಿಹಾಸಿಕ ಸಾಮ್ರಾಜ್ಯಕ್ಕೆ ಅಡಿಗಲ್ಲು ಹಾಕಿದ ಮೌರ್ಯರು ತಮ್ಮ ಸಾಮ್ರಾಜ್ಯವನ್ನು ಕುಂತಲ ದೇಶದವರೆಗೂ ವಿಸ್ತರಿಸಿದ್ದರೆಂಬುದಕ್ಕೆ ಸಾಕಷ್ಟು ಆಧಾರಗಳಿವೆ. ಈ ಕುಂತಲ ಸೀಮೆಯು ಭೀಮಾ 'ಮತ್ತು ವೇದಾವತಿ ನದಿಗಳ ಮಧ್ಯದಲ್ಲಿದ್ದು ಪಶ್ಚಿಮ ಘಟ್ಟಗಳನ್ನು ಸರಹದ್ದನ್ನಾಗಿ ಹೊಂದಿದ್ದಿತು.[೨೦] ಇದರಲ್ಲಿ ಕೊಪ್ಪಳ ಜಿಲ್ಲೆಯು ಸೇರಿತ್ತೆಂಬುದಕ್ಕೆ ನಮಗೆ ಕೊಪ್ಪಳದಲ್ಲಿ ದೊರೆತ ಅಶೋಕನ ಶಾಸನಗಳು ಆಧಾರವಾಗಿವೆ ಕುಂತಲ ದೇಶವನ್ನು ಆಳಿದವರಲ್ಲಿ ನಂದರು ಮೊದಲಿಗರೆಂಬ ಅಭಿಪ್ರಾಯವಿದೆ.[೨೧] ಕೊಪ್ಪಳ ಅದರ ಸುತ್ತಲೂ ಇದ್ದ ಪ್ರದೇಶಗಳು ಕ್ರಿ.ಪೂ.ಆರನೇ ಶತಮಾನದಿಂದಲೂ ಔತ್ತರೇಯರ ಆಳ್ವಿಕೆಗೆ ಒಳಪಟ್ಟಿದವೆಂದು ಹೇಳಬಹುದು ನಂದರ ಉತ್ತರಾಧಿಕಾರಿಗಳಾದ ಮೌರ್ಯರು ಅನುಕ್ರಮವಾಗಿ ಈ ಭಾಗದ ಒಡೆಯರಾದರು.[೨೨] ಯಲಬುರ್ಗಿಗೆ ಹತ್ತಿರದಲ್ಲಿರುವ ಕೊಪ್ಪಳದಲ್ಲಿ ದೊರೆತಿರುವ ಅಶೋಕನ ೨ ಶಾಸನಗಳು ಮೌರ್ಯರ ಆಳ್ವಿಕೆಯನ್ನು ಅಧಿಕೃತವಾಗಿ ಸ್ಪಷ್ಟಪಡಿಸುವ ಆಧಾರಗಳಾಗಿವೆ.

ಇವುಗಳಲ್ಲಿ ಅಶೋಕನ ಗಡಿಪ್ರಾಂತ್ಯಗಳ ಮತ್ತು ಅದರಾಚೆಯ ನೆರೆ ರಾಷ್ಟ್ರಗಳ ಉಲ್ಲೇಖವಿರುವುದರಿಂದ ಅವನ ರಾಜ್ಯದ ಮೇರೆಗಳನ್ನು ಗುರುತಿಸುವುದು ಸಾಧ್ಯವಾಗಿದೆ. ಇವೆಲ್ಲವುಗಳಿಂದ ಕನ್ನಡ ನೆಲದ ಮೇಲೆ ಆಳ್ವಿಕೆಯನ್ನು ನಡೆಸಿದ ಪ್ರಥಮಪ್ರಭು ಅಶೋಕನೆಂದು ಹೇಳಬಹುದಾಗಿದೆ. ಶಾಸನಗಳಲ್ಲಿ "ಕ್ಷುದ್ರಜನರೂ ಕೂಡ ತಮ್ಮ ಪರಾಕ್ರಮದಿಂದ ವಿಫುಲವಾಗಿ ಸ್ವರ್ಗವನ್ನು ಪಡೆಯಬಹುದು" ಎಂದು ಸಾರಿವೆ. ಮತ್ತು ಸಾಮಾನ್ಯರಿಗೆ ಸಂಜೀವಿನಿಯಾಗಿವೆ. ಪತೀತರನ್ನು ಪಾವನಗೊಳಿಸುವ ಕಳಕಳಿಯನ್ನು ತೋರಿವೆ. ಹೀಗೆ ಈ ಶಾಸನಗಳು ಬೌದ್ಧಧರ್ಮದ ತಿರುಳನ್ನು ಸಾರುತ್ತಿದ್ದರು ಅವು ಒಟ್ಟು ಬದುಕಿನ ಮೌಲ್ಯವನ್ನು ನಿರಾಡಂಬರ ಶೈಲಿಯಲ್ಲಿ ಪ್ರತಿಪಾದಿಸುತ್ತಿವೆ. ಆದ್ದರಿಂದ ಇವನ್ನು ಭಾರತದ ಪ್ರಥಮ ನೀತಿಪಾಠಗಳೆಂದು ಗೌರವಿಸಲಾಗುತ್ತಿದೆ.[೨೩]

**ಶಾತವಾಹನ**

ಅಶೋಕನ ತರುವಾಯ ಕ್ರಿ.ಶ.ಸು.೬೫೦ರವರೆಗೆ ಈ ನಾಡಿನ ಚರಿತ್ರೆ ಅಂಧಕಾರದಲ್ಲಿಯೇ ಉಳಿಯುತ್ತಿದ್ದು ಸುತ್ತಮುತ್ತಲ ಪ್ರದೇಶಗಳ ಆಧಾರದಿಂದ ಅದನ್ನು ತುಂಬಿಕೊಳ್ಳಬಹುದಾಗಿದೆ.

ಮೌರ್ಯರ ತರುವಾಯ ಈ ನಾಡು ಶಾತವಾಹನರ ಆಳ್ವಿಕೆಗೆ ಒಳಪಟ್ಟಿರಬೇಕು. ಶಾತವಾಹನರು ಬಳ್ಳಾರಿ ಜಿಲ್ಲೆಯ ಉತ್ತರಭಾಗಕ್ಕೆ ಸಂಬಂಧಿಸಿದವರೆಂದು ರಾಬರ್ಟ್ ಸಿವೆಲ್ ಮುಂತಾದವರು ಅಭಿಪ್ರಾಯ ಪಟ್ಟಿದ್ದಾರೆ. ಕೊಪ್ಪಳ ತಾಲ್ಲೂಕಿನ ಚಿಕ್ಕ ಸಿಂಧೋಗಿಯಲ್ಲಿ ೫೫೩೪ ಬೆಳ್ಳಿಯ ಮುದ್ರಾಂಕಿತ ನಾಣ್ಯಗಳು ಸಿಕ್ಕಿವೆ.[೨೪] ಅಷ್ಟೇ ಅಲ್ಲದೆ ಕೊಪ್ಪಳ ಯಲಬುರ್ಗಿಗಳು ಬಳ್ಳಾರಿ ಜಿಲ್ಲೆಯ ಪಕ್ಕದಲ್ಲಿಯೇ ಇರುವುದರಿಂದ ಇವೂ ಶಾತವಾಹನರ ಆಡಳಿತಕ್ಕೆ ಒಳಪಟ್ಟಿದ್ದವೆಂದು ಖಚಿತವಾಗಿ ಹೇಳಬಹುದಾಗಿದೆ. ಇವರು ಈ ನಾಡನ್ನು ಸು.೫೫೦ ವರ್ಷಗಳವರೆಗೆ ಆಳಿದರು.

**ಕದಂಬರು**

ಶಾತವಾಹನರ ತರುವಾಯ ಕೊಪ್ಪಳ ಜಿಲ್ಲಾ ಪ್ರದೇಶವು ಬಹುಮಟ್ಟಿಗೆ ಬನವಾಸಿಯ ಕದಂಬ ರಾಜ್ಯಕ್ಕೆ ಸೇರಿರಬೇಕೆಂದು ಸುಲಭವಾಗಿ ಊಹಿಸಬಹುದು. ಇದಕ್ಕೆ ಪೂರಕವಾಗಿ ಮಯೂರವರ್ಮನ ಚಂದ್ರವಳ್ಳಿ ಶಾಸನದ[೨೫] ಕುಪಣದ ಚಾಮನ ವಿವರವಿದೆ. ಪ್ರಸ್ತುತ ಕದಂಬರ ರಾಜ್ಯದಲ್ಲಿ ಕೊಪ್ಪಳವೂ ಸೇರ್ಪಡೆಯಗಿದ್ದುದು ಈ ಶಾಸನದಿಂದ ತಿಳಿದು ಬರುತ್ತದೆ. ಕದಂಬರ ಸಾಮಂತ ಅರಸನಾಗಿದ್ದ ಬಾದಾಮಿ ಚಾಲುಕ್ಯ ವಂಶದ ಒಂದನೇ ಪುಲಕೇಶಿಯು ಪ್ರಭಲನಾಗಿ ಕದಂಬರ ಕೊನೆಯ ಅರಸು ಕೃಷ್ಣವರ್ಮನನ್ನು ಸೋಲಿಸಿ ಕ್ರಿ.ಶ.೫೪೦ರಲ್ಲಿ ಸ್ವತಂತ್ರನಾದನೆಂಬುದಾಗಿ ಸ್ಪಷ್ಟವಾಗುತ್ತದೆ.

**ಬಾದಾಮಿ ಚಾಲುಕ್ಯರು**

ಕರ್ನಾಟಕದ ಇತಿಹಾಸಕ್ಕೆ ಒಂದು ನಿರ್ದಿಷ್ಟ ರೂಪ ಕೊಟ್ಟವವರು ಬಾದಾಮಿಯ ಚಾಲುಕ್ಯರು ಬಾದಾಮಿಗೆ ಯಲಬುರ್ಗಿ ತೀರ ಹತ್ತಿರದ ಸ್ಥಳವಾದ್ದರಿಂದ ಇದು ಬಾದಾಮಿಯ ಚಾಲುಕ್ಯರ ಆಡಳಿತಕ್ಕೆ ಒಳಪಟ್ಟಿತ್ತೆಂದು ಹೇಳಬಹುದು. ಅವರಲ್ಲಿ ಪ್ರಸಿದ್ಧ ದೊರೆ ಶಕಪುರುಷ ೨ನೇಯ ಪುಲಕೇಶಿ (ಕ್ರಿ.ಶ.೬೦೯–೬೪೨) ಉತ್ತರದ ಹರ್ಷನನ್ನು ಸೋಲಿಸಿ ಸಮಗ್ರ ದಕ್ಷಿಣದ ಆದಿಪತ್ಯವನ್ನು ತನ್ನಬಾಹುಬಲದಲ್ಲಿ ಒಳಗೂ ಮಾಡಿಕೊಂಡಿದ್ದ, ಈತನ ಆಡಳಿತದಲ್ಲಿ ಚೀನಾದಿಂದ ಪ್ರವಾಸಕ್ಕೆ ಬಂದಿದ್ದ ಹ್ಯೂಯನ್‌ತ್ಸಾಂಗ್ ಕೊಪ್ಪಳವನ್ನು ಹೆಸರಿಸಿದ್ದಾನೆ. ಹೀಗಿದ್ದೂ ಪುಲಕೇಶಿಯ ಆಡಳಿತವನ್ನು ಹೇಳುವ ಒಂದು ಶಾಸನವೂ ಈ ಭಾಗದಲ್ಲಿ ದೊರೆತಿಲ್ಲ. ಆದರೆ ಕುಕನೂರಿನ ಕಲ್ಮೇಶ್ವರ ದೇವಾಲಯಕ್ಕೆ ಹೋಗುವ ದಾರಿಯಲ್ಲಿಯ ಕಲ್‌ಕೋಳಿಯೆಂಬ ಸ್ಥಳದಲ್ಲಿ ಎರಡು ಶಾಸನ ದೊರೆತಿದ್ದು[೨೬] ಅವುಗಳಲ್ಲಿ ಒಂದು ಬಾದಾಮಿ ಚಾಲುಕ್ಯರ ಮೊದಲನೇ ವಿಕ್ರಮಾದಿತ್ಯನನ್ನು ಪ್ರಸ್ತಾಪಿಸುತ್ತಿದೆ.

**ರಾಷ್ಟ್ರಕೂಟರು**

ಬಾದಾಮಿ ಚಾಲುಕ್ಯರ ತರುವಾಯ ಕರ್ನಾಟಕ ಸಾಮ್ರಾಜ್ಯದ ವೈಭವವನ್ನು ಪರಾಕಾಷ್ಠೆಗೆ ಒಯ್ದುವರು ರಾಷ್ಟ್ರಕೂಟರು ಅಮೋಘವರ್ಷ ನೃಪತುಂಗದೇವನ ಕಾಲ (ಕ್ರಿ.ಶ.೮೧೪–೮೭೭)ದಲ್ಲಿ ರಚಿಸಲ್ಪಟ್ಟ ಕವಿರಾಜಮಾರ್ಗದಲ್ಲಿ "...ಕಿಸುವೊವಿಲಾವಿದಿತ ನಾಡೆನಾಡೆ ಕನ್ನಡ ತಿರುಳ್ (೧–೩೭) ಎಂದಿದೆ. ಅಂದರೆ ಪಟ್ಟದಕಲ್ಲು (ಕಿಸುವೊಳಲ್), ಕೊಪ್ಪಳ (ಕೊಪಣನಗರ), ಲಕ್ಷ್ಮೇಶ್ವರ (ಪುಲಿಗೆರೆ) ಮತ್ತು ವಕ್ಕುಂದ (ಇಂದಿನ ಬೆಳಗಾವಿ ಜಿಲ್ಲೆಯ ವಕ್ಕುಂದ) ಇವುಗಳ

ಮಧ್ಯದ ನಾಡೇ ತಿರುಳ್ಗನ್ನಡನಾಡು ಎನ್ನಲಾಗಿದೆ. ಆದ್ದರಿಂದ ಯಲಬುರ್ಗ ತಾಲೂಕು ಈ ತಿರುಳ್ಗನ್ನಡನಾಡಿನ ಹೃದಯದಂತೆ ಇದ್ದಿತು ಎಂಬುದು ಸ್ಪಷ್ಟವಾಗುತ್ತದೆ.

ಕ್ರಿ.ಶ.೯೬೮ರ ಮುಧೋಳದ ಒಂದು ವೀರಗಲ್ಲು ರಾಷ್ಟ್ರಕೂಟ ಇಮ್ಮಡಿಕೃಷ್ಣನನ್ನು ಉಲ್ಲೇಖಿಸುತ್ತದೆ. ಇಲ್ಲಿ ಇವನನ್ನು "ಶುಭತುಂಗ" ಎಂದು ಕರೆಯಲಾಗಿದೆ. ಇವನ "ಮಹಾಶ್ರೀಮನ್ತ (?) ಬೆಳ್ವಲ ಮುನ್ನೂರನ್ನಾಳುತ್ತಿರಲು ಮುಧೋಳದ (?) ಮೇಲೆ ನಡೆದ ಆಕ್ರಮಣದಲ್ಲಿ ಸಮ್ಮಗಾರಚನ್ದನು ಹೋರಾಡಿಸತ್ತನು" ಎಂದಿದೆ. ಕ್ರಿ.ಶ.೯೪೦ರ ಅರಕೇರಿ ಶಾಸನದಲ್ಲಿ ಮುಮ್ಮಡಿ ಕೃಷ್ಣನನ್ನು "ಸ್ವಸ್ತ್ಯಕಾಲವರ್ಷದೇವ ಶ್ರೀ ಪೃಥ್ವೀವಲ್ಲಭರಾಜಾಧಿರಾಜ ಪರಮೇಶ್ವರ ಶ್ರೀ ಮತಕನ್ನರ ದೇವ"[೨೮]ಎಂದು ಬಣ್ಣಿಸಲಾಗಿದೆ.

**ಗಂಗರು**

ಗಂಗರ ಮನೆತನದ ಇಮ್ಮಡಿ ಬೂತೂಗ ರಾಷ್ಟ್ರಕೂಟರ ಸಾಮಂತ ಮತ್ತು ಭಾವಮೈದುನನಾದ ಇನಿಗೆ ರಾಷ್ಟ್ರಕೂಟರ ದೊರೆ ಮುಮ್ಮಡಿ ಕೃಷ್ಣನು ತುಂಗಭದ್ರ ನದಿಯ ಉತ್ತರ ಭಾಗಗಳಾದ ಎಡದೊರೆ–೨೦೦೦, ಬೆಳ್ವಲ–೩೦೦, ಮಾಸವಾಡಿ–೧೪೦, ಕೂಕನೂರ–೩೦ ಮೊದಲಾದ ನಾಡುಗಳನ್ನು ನೀಡಿದಂತೆ ತಿಳಿದು ಬರುತ್ತದೆ ಇಟಗಿಯ ಕ್ರಿ.ಶ.೯೩೯ ಶಾಸನದಲ್ಲಿ[೨೯] ಅಷ್ಟೇ ಅಲ್ಲದೆ ಕುಷ್ಟಗಿ ತಾಲ್ಲೂಕಿನ ಹಿರೆಗೋಣ್ಣಗರದಲ್ಲಿ ಈ ವಂಶದ ಅರಸರ ಎರಡು ಚಿನ್ನದ ನಾಣ್ಯಗಳು ದೊರೆತಿರುವುದು.[೩೦]

**ಕಲ್ಯಾಣ ಚಾಲುಕ್ಯರು**

ಕರ್ನಾಟಕದ ಅರಸಮನೆತನದ ವೈಭವವನ್ನು ಮುಂದುವರೆಸಿದವರು ಕಲ್ಯಾಣದ ಚಾಲುಕ್ಯರು ಅವರಲ್ಲಿ ಚಾಲುಕ್ಯ ವಂಶಸ್ಥಾಪಕನಾದ ತೈಲಪ ಅಹವಮಲ್ಲನನ್ನು ಕ್ರಿ.ಶ.೧೦೬೯ರ ತಳಕಲ್ಲ ಶಾಸನ ಈ ರೀತಿ ಬಣ್ಣಿಸಿದೆ. "ಸ್ವಸ್ತಿ ಸಮಸ್ತ ಭೂವನಾಶ್ರಯ ಶ್ರೀ ಪೃಥ್ವೀವಲ್ಲಭಮಹಾರಾಜಾಧಿರಾಜ ಪರಮೇಶ್ವರ ಪರಮ ಭಟ್ಟಾರಕ ಸತ್ಯಾಶ್ರಯಕುಳತಿಳಕ ಚಾಳಾಕ್ಯಾಭರಣ ಶ್ರೀ ಮಹಾಹವನಮಲ್ಲದೇವ" ಇವನ ಮಾಂಡಲಿಕ ಶೋಭನರಸು ಇವನು "ಅರಸನ ಆಜ್ಞೆಯ ಮೇರೆಗೆ ಯುದ್ಧ ಭೂಮಿಯಲ್ಲಿ ವೈರಿ ನರೇಂದ್ರರನ್ನು ಸೋಲಿಸಿ ಎರಡನೂರುವಂ ಬನವಾಸಿ ಪನ್ನಿಚ್ಛಾಸಿರಮು ಆಳುತ್ತಿರ ಅವನ ಕೆಳಗೆ ಸಾವಿಯಣ್ಣ ಎಂಬುವನು ಕುಕನೂರ ಮೂವತ್ತನ್ನಾಳುತ್ತಿದ್ದ" ಎಂದಿದೆ ಇಮ್ಮಡಿ ತೈಲಪನ ಮಗ ಸತ್ಯಾಶ್ರಯ ಇವನ ಕಾಲದಲ್ಲಿ "ಶ್ರೀಮತ್ ಪೋಸಮೆಟದ ಚೋಳಪಣ್ಣಿತರ ಶಿಷ್ಯ ರಗಸ್ತ ಜೀಮರ ಕಾಲಂಕರ್ಚಿ ಈಶ್ವರ ಶೆಟ್ಟಿ ಎರಡು ದೇಗುಲದೆ ಕಲಶಮ ನಿಡಿಸಿ ಮುಖಶಾಲೆಯಂ ಸೇವಯಿಸಿ, ದೇವರಂ ಪ್ರದಕ್ಷಿಣಂಗೆಯ್ದು ನಕರ ಸಮಾಹ ಸಾದಿಷ್ಠಿತ ಧಾರಾಪೂರ್ವಕದಿನ್ದಾಮಟದ ಪರಿಸೂತ್ರದುಪಬೋಗಕ್ಕೆ ಕೊಟ್ಟ ೧೦೦ ಗದ್ಯಾಣವನ್ನು ಕೊಕನೂರಿನ ಒಂದು ಶಾಸನ ಹೇಳುತ್ತದೆ.[೩೧]

ಮುಧೋಳ ಒಂದು ಶಾಸನ[೩೨] ಕಲ್ಯಾಣ ಚಾಲುಕ್ಯ ತ್ರೈಲೋಕ್ಯ ಮಲ್ಲದೇವನನ್ನು ಪ್ರಸ್ತಾಪಿಸುತ್ತಿದೆ. ಇವನ ಆಳ್ವಿಕೆಯಲ್ಲಿ ಮಹಾಮಂಡಳೇಶ್ವರ ಸಾಹಸೋತ್ತುಂಗ ಭುಜಬಳಭೀಮನಾದ ವೀರಚವುಂಡರಸನು ಸುಖಸಂಕಥಾ ವಿನೋದದಿಂದ ರಾಜ್ಯಗೆಯ್ಯುತ್ತಿರಲು ಅವನ ಪಾದಪದ್ಮೋ

ಜೀವಿಯಾದ "ಶ್ರೀಮನ್ಮಹಾಪ್ರಧಾನಂ ಸೇನಾಧಿಪತಿ ಮಹಾಪ್ರಚಂಡದಂಡನಾಯಕ ವೈರಿಭಯ ದಾಂಯುಕ ಪತಿಹಿತಾಚಾರ್ಯ ಆಡಳಿತಧೈರ್ಯ ಸಜ್ಜನಮನೋರಂಜನ... ಶ್ರೀಮನ್ಮಹಾಪ್ರಚಂಡದಂಡನಾಯಕ ಸೋವೆರಸನು ಮತ್ತು ಅವನ ಹೆಂಡತಿ ಬರ್ಮಲದೇವಿಯರು, ಹರಿಹರಭವನ ಮಾಡಿಸಿದುದಾಗಿ ಹೇಳಿದೆ. ಅದೇ ರೀತಿ ಮುಧೋಳದ ಮತ್ತೊಂದು ಶಾಸನ[೩೩] ತ್ರೈಲೋಕ್ಯಮಲ್ಲನನ್ನು ಹೊಗಳುತ್ತಿದೆ. ಆದರೆ ಇಲ್ಲಿ ವಿಕ್ರಮಾದಿತ್ಯನನ್ನು ಬಣ್ಣಿಸುವ ಪದ್ಯಗಳು ಸೇರಿ ಶಾಸನದ ಕಾಲವನ್ನು ಸಂದಿಗ್ದಗೊಳಿಸಿವೆ. ಇಲ್ಲಿ ತ್ರೈಲೋಕ್ಯಮಲ್ಲನ ವರ್ಣನೆಯೊಂದಿಗೆ ಅಗ್ರಹಾರ ಮುಧವೊಳಲಿನ ಮಹಾಜನರ ವರ್ಣನೆಯೂ ಬಂದಿದೆ.

ಚಾಲುಕ್ಯರ ಅತ್ಯಂತ ಪ್ರಸಿದ್ಧಿಯನ್ನು ಪಡೆದ ಅರಸು ಆರನೆ ವಿಕ್ರಮಾದಿತ್ಯ ಸಂಕನೂರಿನ ಒಂದು ಪಶಾಸನದಲ್ಲಿ[೩೪] ಅವನ ಸ್ತುತಿ ಮಾತ್ರ ಇದ್ದು ಉಳಿದ ಭಾಗ ನಾಶವಾಗಿದೆ. ಅಲ್ಲಿಯ ಇನ್ನೊಂದು ಶಾಸನದಲ್ಲಿ[೩೫] ಅವನ ಮಾಂಡಲೀಕನ ಪ್ರಸ್ತಾಪವಿದೆ. ಬಹುಶಃ ಇದು ಯಲಬುರ್ಗಿ ಸಿಂದರಗೆ ಸಂಬಂಧಿಸಿದಾಗಿರಬೇಕು. ಹಳ್ಳಿಗುಡಿಯ ಒಂದು ಶಾಸನ[೩೬] ಚಾಲುಕ್ಯರ ವಿಕ್ರಮನ ೧೯ನೇ ವರ್ಷವನ್ನು ಹೇಳುತ್ತಿದೆ. ಮತ್ತು ಕುಕ್ಕನೂರ ಅಗ್ರಹಾರದ ಸಾಸಿರರ್ವರನ್ನು ಉಲ್ಲೇಖಿಸುತ್ತಿದೆ. ಇವನ ಕಾಲದ ಕಲ್ಲೂರ ಶಾಸನ[೩೭] "ಶ್ರೀಮನ್ಮಹಾಪ್ರಧಾನಂ ದಂಡನಾಯಕಂ ಕನ್ನಡ ಸಂಧಿವಿಗ್ರಹಿ ದಂಡಾಯುಧಿಷ್ಠಾಯಕ ಮನೆವೆರ್ಗಡೆ ಮಹಾ ದೇವಯ್ಯಂಗಳ್ ಎರಡರುನೂರನ್ನು ಸುಖಸಂಕಥಾ ವಿನೋಧದಿಂದ ಆಳುತ್ತಿದ್ದನು" ಎಂದಿದೆ. ಅವನ ಪಾದಪದ್ಮೋಪಜೀವಿ ಅಗ್ರಹಾರದ ಬಾದಾಮಿಯು ಬಮ್ಮದೇವಯ್ಯ ನಾಯಕ ಹೆಜ್ಜುಂಕವನ್ನಾಳುತ್ತ ದೇವರ ಚೈತ್ರಪವಿತ್ರಕ್ಕೆಂದು ಕುಕ್ಕನೂರು ಮೂವತ್ತರೊಳಗೆಲ್ಲಿಯಾರೊಡಂ ಗುಡಿಯ ಬೀಡಿಗೆ ದಾನವಿತ್ತುದಾಗಿ ಹೇಳಿದೆ. ಕ್ರಿ.ಶ.೧೧೧೨ರಲ್ಲಿ ೬ನೇ ವಿಕ್ರಮಾದಿತ್ಯನ ಅತ್ಯಂತ ನಂಬಿಗಸ್ಥನಾದ ಮಹಾದೇವ ದಂಡನಾಯಕನು ಇಟ್ಟಿಗೆಯ ಮಹಾದೇವದೇವಾಲಯವನ್ನು ಕಟ್ಟಿಸಿದನು. ಕ್ರಿ.ಶ.೧೧೧೩ರ ಸಂಕನೂರ ಶಾಸನ[೩೮] ವಿಕ್ರಮಾದಿತ್ಯನ ೩೮ನೇ ವರ್ಷವನ್ನು ಹೇಳಿ ಅಂದಿನ ಸೋಮಗ್ರಹಣದಂದು ಶ್ರೀ ಮನ್ಮಹಾಮಂಡಳೇಶ್ವರ ಆಚರಸನು ದೇವರಾಸಿ ಪಂಡಿತರಿಗೆ ದಾನವಿತ್ತುದನ್ನು ಹೇಳಿದೆ. ಕುಕನೂರಿನ ಇನ್ನೊಂದು ಶಾಸನದಲ್ಲಿ[೩೯] ವಿಕ್ರಮನ ಕಾಲದಲ್ಲಿ ಕೊಡಲ್ಪಟ್ಟ ನಾಲ್ಕು ಬೇರೆ ಬೇರೆ ದಾನವನ್ನು ಹೇಳಲಾಗಿದೆ. ಅದರಲ್ಲಿ ಮೊದಲಾದವರು ಇತ್ತದಾನವನ್ನು ಹೇಳಿದರೆ ೩ನೇಯದು ಸಕ್ಕಸಾರರ ರುದ್ರಾದಿತ್ಯ ಮೈಸಾಸರು, ಶ್ರೀಪತಿನಾಯಕರ ಮಗ ನಾಗವರ್ಮನಾಯಕರು ಮೊದಲಾದವರು ಇತ್ತ ದಾನವನ್ನು ಹೇಳಿದೆ. ೪ನೆಯದು ಶ್ರೀ ಮೂಲಸ್ಥಾನದ ನಾಲ್ವರು ಬ್ರಾಹ್ಮಣರುಂಬುಂತಾಗಿ ಹಲಗಿಯ ಲಕ್ಕರಸ ದಾನವಿತ್ತುದನ್ನು ಹೇಳಿದೆ. ಯಲಬುರ್ಗಿ ಸಿಂದರು ಅತ್ಯಂತ ಪ್ರಸಿದ್ಧಿ ಮಾಂಡಲೀಕರಾಗಿ, ಈ ವಂಶದ ಕೀರ್ತಿಯನ್ನು ತುತ್ತ ತುದಿಯವರೆಗೆ ಮುಟ್ಟಿಸಿದುದು ಈ ಕಾಲದಲ್ಲಿಯೇ.

ಕ್ರಿ.ಶ.೧೧೧೨ ಕುಕನೂರು ಒಂದು ಶಾಸನದಲ್ಲಿ[೪೦] ಸರ್ವಜ್ಞ ಚಕ್ರವರ್ತಿ ಭೂಲೋಕಮಲ್ಲದೇವರು ರಾಜ್ಯವನ್ನಾಳುತ್ತಿರಲು ರುದ್ರಾದಿತ್ಯ ಘೈಸಾಸ ಮೊದಲಾದವರು ಶ್ರೀಮನ್ಮಹಾಗ್ರಹಾರ ಕುಕ್ಕನೂರಮಹಾಜನ ಸಾಸಿರ್ವರ್ಗೆ ಪಾದ ಪೂಜೆ ಮಾಡಿ, ಸತ್ರದ

ಮನಗಿತ್ತ ದಾನವನ್ನು ಹೇಳಿದೆ. ಕ್ರಿ.ಶ....೧೧೩೪ರ ಕಲ್ಲೂರ ಒಂದು ಶಾಸನವು ಈ ಭೋಲೋಕಮಲ್ಲನ ಕಾಲದಲ್ಲಿ ಮಹಾಮಂಡಳೇಶ್ವರ ಆಚರಸನ ಮಗ ಪೆರ್ಮಾಡಿ ದೇವನ ಪ್ರಭುತ್ವದಲ್ಲಿ ಕುಕ್ಕನೂರ ಮೂವತ್ತರೊಳಗಣ ಕಲ್ಲೂರ ಶ್ರೀಸ್ವಯಂಭೊಲಿಂಗದೇವರಿಗೆ ಶ್ರೀ ಮನ್ಮಮಹಾಪ್ರಧಾನ ಪೆರ್ಜುಂಕವಡ್ಡರಾವುಳ್ಳದಂಡನಾಯಕ ಮಹೇಶ್ವರಯ್ಯ ದಾನವನ್ನಿತ್ತಂತೆ ಹೇಳಿದೆ. ಕ್ರಿ.ಶ. ೧೧೪೯ರ ಕೂಕನೂರಿನ ಒಂದು ಶಾಸನದ[೪೧] ಪೂರ್ವಭಾಗದಲ್ಲಿ ಭೋಲೋಕಮಲ್ಲನ ಉಲ್ಲೇಖ ಬಂದಿದೆ. ಆ ಶಾಸನವು ಮುಂದುವರೆದು ಬಡವರ ಬೇಲಿಯ ಸೊಸೆ ಗಂಗಿಯಕ್ಕ ಶ್ರೀಮನ್ಮಹಾಪ್ರಧಾನದಂಡನಾಯಕ ಪನ್ನಾಯಧಿಷ್ಠಾಯಕಂ ರೇವರಸರ ಮೈದುನ ನಯ್ದಾಗರದ ಪೆರ್ಗಡೆ ಸಾರಂಗಪರ್ಾಶಿನಾಯಕ ಮೊದಲದವರು ಇತ್ತ ದಾನವನ್ನು ಹೇಳಿದೆ.

ಕುಕನೂರಿನ ಇನ್ನೊಂದು ಶಾಸನ[೪೨] ಕ್ರಿ.ಶ.೧೧೩೮, ೧೧೫೦ ಹರೀತ, ಸತ್ತಿಮ, ದೇವ, ತೈಲಪ, ಜಯಸಿಂಹ, ತ್ರೈಲೋಕಮಲ್ಲ, ಅಹವಮಲ್ಲ, ಸೋಮೇಶ್ವರ, ವಿಕ್ರಮ, ಜಗದೇಕಮಲ್ಲರವರೆಗಿನ ಚಾಲುಕ್ಯ ವಂಶಾವಳಿ ಹೇಳಿ ಜಗದೇಕಮಲ್ಲನ ಕಾಲದಲ್ಲಿ ಕುಕನೂರ ಅಗ್ರಹಾರದಲ್ಲಿದ್ದ ಮಹಾಜನರನ್ನು ವಿಬುಧಾಗ್ರಣಿಗಳೆಂದು ಬಣ್ಣಿಸಿದೆ. ಕೊನೆಯಲ್ಲಿ ಚೋಳ ಸೋಮೇಶ್ವರ ಪಂಡಿತನ ಶಿಷ್ಯ ಈಶ್ವರಶೆಟ್ಟಿ ದೇವರಂಗಭೋಗಕ್ಕೆ ನೂರುಗದ್ಯಾಣವನ್ನಿತ್ತುದಾಗಿ ಹೇಳಿದೆ. ಕೂಕನೂರಿನ ಇನ್ನೊಂದು ಶಾಸನ[೪೩] ಕ್ರಿ.ಶ.೧೧೪೩ ಶ್ರೀ ಮತ್‌ಪ್ರತಾಪ ಚಕ್ರವರ್ತಿ ಜಗದೇಕಮಲ್ಲದೇವರು ಆಳುತ್ತಿದ್ದಾಗ ತೋಟಗೇಶ್ವರ ದೇವರಿಗೆ ತೋಡಿಗೆಲಸದೊಳ ಹಾಗವ ದಾನವಿತ್ತುದಾಗಿ ಹೇಳಿದೆ. ಕೂಕನೂರ[೪೪] ಶಾಸನದ ಕೆಳಭಾಗದಲ್ಲಿ ಜಗದೇಕಮಲ್ಲ ಮಹಾಪ್ರಧಾನ ಓನೆಯು ಕೇಸಿಮುಂಯ್ಯದಂಡನಾಥನ ದೇಸಿಂಯುಂ ಮುಂಮುರಸದಂಡಾಧಿನಾಥ ಬೆಳ್ವೊಲಮನ್ನೂರನ್ನಾಳುತ್ತಿರಲು ಆ ಮಹಾನುಭಾವನ ದೆಸೆಯಿಂದ ಸುಂಕದಧಿಕಾರಿ ಮೇಧಿರಾಜದಣ್ಣನಾಯಕರು ಮಹಾಗ್ರಹಾರ ಕುಕನೂರು ಠಾಣಾಂತರದಲು ಶ್ರೀ ಮಲ್ಲಿಕಾರ್ಜುನ ದೇವರ ನಂದಾದೀವಿಗೆಗೆ ದಾನಕೊಟ್ಟದಾಗಿ ಹೇಳಿದೆ. ಅದೇ ಶಾಸನದ ಕೊನೆಭಾಗದಲ್ಲಿ ಜಗದೇಕಮಲ್ಲನ ಆಡಳಿತದಲ್ಲಿ... ಯರಬಾವಿಯಣ್ಣ ದಾನವಿತ್ತುದಾಗಿ ಹೇಳಿದೆ.

ಕ್ರಿ.ಶ.೧೧೮೫ರ ಕಲ್ಲೂರು ಶಾಸನ[೪೫] ಈ ವಂಶದ ಸೋಮೇಶ್ವರನ ಆಡಳಿತವನ್ನು ಪ್ರಸ್ತಾಪಿಸುತ್ತಿದೆ. ಇದರಿಂದ ಈತನ ಈ ಕಾಲದಲ್ಲಿ ಕಳಚುರಿಗಳನ್ನು ಹಿಂದಕ್ಕೊತ್ತಿ ೧೧೮೨-೮೩ರಿಂದ ತನ್ನ ಆಳ್ವಿಕೆಯನ್ನು ಪುನಃ ಸ್ಥಾಪಿಸಲು ಮೊದಲು ಮಾಡಿದನೆಂದು ತಿಳಿದುಬರುತ್ತದೆ. ಆದರೆ ಈ ವಂಶದ ಕೊನೆಯ ಅರಸನಾದನು. ಈ ಶಾಸನದ ಕೊನೆಯ ಭಾಗದಲ್ಲಿ ಯಲಬುರ್ಗಿಯ ಸಿಂದ ಅರಸನಾದ ಬಿಜ್ಜಳ, ಚಾವುಂಡರ, ಉಲ್ಲೇಖ ಬಂದಿದೆ. ಅಲ್ಲಿ ಅವರನ್ನು "ಮಹಾಮಂಡಳೇಶ್ವರ ಭೋಗಾವಲೇಪುರವರಾಧೀಶ್ವರಂ ಸಿಂದಾನ್ವಯ ರೆತ್ನಾಕರಂ" ಎಂದು ಮುಂತಾಗಿ ಹೇಳಲಾಗಿದೆ. ಇವರು "ಎರಂಬರವಿನೆಲೆವೀಡಿನಲು ಸುಖಸಂಕಥಾ ವಿನೋದದಿಂದ ರಾಜ್ಯಂಗೆಯ್ಯುತ್ತಿದ್ದು"ದನ್ನು ಪ್ರಸ್ತಾಪಿಸುತ್ತದೆ.

**ಕಲಚೂರಿ**

ಚಾಲುಕ್ಯವಂಶದ ಆಡಳಿತದ ಮಧ್ಯೆ ಬಿರುಗಾಳಿಯಂತೆ ತೂರಿಕೊಂಡು ಬಂದವರು ಕಲಚೂರಿಗಳು ಆ ವಂಶದ ಮಹತ್ವಾಕಾಂಕ್ಷಿ ಅರಸನಾದ ಬಿಜ್ಜಳನನ್ನು ಇಲ್ಲಿಯ ಒಂದು ಶಾಸನ[೬೬] ೧೧೬೪ಳ ಮೀರುವ ಮಂಡಲೀಕೆರ್ತ್ರಲೆದೋರುವ ಮನ್ನೆಯರಿದಿರ್ಚೆ ತನ್ನಿದಿರೊಳ್ಮೆಯ್ದೋರುವ ನೃರಪೇಂದ್ರರಿಲ್ಲೆನೆ ತೋರೆದ ನದಟಂ ಪ್ರತಾಪಿ" ಎಂದು ಬಣ್ಣಿಸಿದೆ. ಅಲ್ಲಿ ಅವನ ದಂಡನಾಯಕ ಅಮ್ಮಣನು ಬಿಜ್ಜಳನಿಗೆ ಬಿನ್ನಪಂಗೆಯ್ದು ಕುಕ್ಕನೂರ ಮೂವತ್ತರೊಳಗಣ ಧನಕನಕ ಸಂಪತ್ತಿಯಿರ್ಪಡೆಯ ಹಳ್ಳಿಯನೆಡೆ ಹಳ್ಳಿಯಂ ಸರ್ವಬಾಧಾ ಪರಿಹಾರ ಸರ್ವನಮಸ್ಯವಾಗಿ ಪಡೆದು ಅದನ್ನು ಹಂಪೆಯ ವಿರುಪಾಕ್ಷ ದೇವರ ಸನ್ನಿದಾನದೊಳು ಶ್ರೀ ಸ್ವಯಂಭೊ ಪ್ರಸನ್ನ ಮಲ್ಲಿಕಾರ್ಜುನದೇವರಿಗೆ ದಾನವಿತ್ತನು ಎಂದಿದೆ. ಅದೆ ರೀತಿ ಕ್ರಿ.ಶ.೧೧೭೦ರ ಕುಕನೂರು ಶಾಸನ[೬೭] ಕಲಚೂರಿ ವಂಶದ ರಾಯಮುರಾರಿ ಸೋಯಿದೇವನನ್ನು ಉಲ್ಲೇಖಿಸುತ್ತಿದೆ. ಇವನ ದಂಡಾದೀಶನಾದ ತೇಜಿರಾಜನು ಕುಕನೂರಿಗೆ ಬಿಜಂಗೆಯ್ದು ಅಲ್ಲಿಯ ಸ್ವಯಂಭೂ ಪ್ರಸನ್ನ ಮಲ್ಲಿಕಾರ್ಜುನ ದೇವರಿಗೆ ಪೂಜೆ ಮಾಡಿಸಿ ಸೋಯಿ ದೇವನಿಗೆ ಬಿನ್ನಪಗೆಯ್ದು ಹಾಡಲಗೇರಿಯ ಧನಧಾನ್ಯಗಳನ್ನು ದತ್ತಿಯಾಗಿ ಬಿಟ್ಟನು. ಕುಕನೂರಿನ ಇನ್ನೊಂದು ಶಾಸನ[೬೮] ಕ್ರಿ.ಶ.೧೧೭೯ ಕಳಚೂರಿ ಸಂಕಮದೇವನನ್ನು ಉಲ್ಲೇಖಿಸುತ್ತದೆ. ಅವನು ಕೊಪ್ಪಳದ ಬಳಿಯ "ಮೊದೆಗೆ ನೂರಲ್ಲಿ ಸುಖಸಂಕಥಾ ವಿನೋದದಿಂದ ರಾಜ್ಯಂಗೆಯ್ವಲ್ಲಿ ಬೆಳ್ವೊಲ ನಾಡಾಧಿಕಾರಿಯಾದ ಮಹಾಪ್ರಧಾನ ಧನುಂಗಿದಂಡಾ ನಾಯಕನು ತನ್ನ ತಾಯಿ ಅಕ್ಕಂದಿರ ಜೊತೆ ಕುಕನೂರಿಗೆ ಬಂದು ಕಾಳಿಕಾ ಜೇಷ್ಠೆಗೆ ತಕ್ಕ ವೃತ್ತಿಪರಿಕಲ್ಪನೆಯನ್ನು ಮಾಡವ ಇಚ್ಛೆಯಿಂದ ತನ್ನ ಮಾತುಳ ಶ್ರೀಮನ್ಮಹಾಪ್ರಧಾನ ಲಾಳಖಂಡೆಯಕಾರರಧಿಷ್ಠಾಯಕನಣುಗ ಸಾಹಣಾಧಿಪತಿ ಪ್ರಚಂಡದಂಡನಾಯಕ ಲಿಖ್ಮಿದೇವಯ್ಯನೊಂದಿಗೆ ಸಂಕಮದೇವನನ್ನು ಭಿನ್ನವಿಸಿ ಬೆನತೂರನ್ನು ಪಾರಮೇಶ್ವರದತ್ತಿಯಾಗಿ ಬಿಟ್ಟರು ಎಂದಿದೆ.

**ಯಾದವರು**

ದೇವಗಿಯ ಯಾದವರು ಈ ನಾಡಿನಲ್ಲಿ ಆಳಿದ ಬಗ್ಗೆ ಶಾಸನಗಳು ದೊರೆಯುತ್ತಿವೆ. ಕುಕನೂರಿನ ೪೭ನೇ ಶಾಸನದ ೫ನೆಯ ಭಾಗದಲ್ಲಿ "ಶ್ರೀಮತುಯಾದವ ನಾರಾಯಣರ ಪ್ರತಾಪಚಕ್ರವರ್ತಿ ಸಿಂಹಣದೇವರಾಜ್ಯದ ೨೩ನೆಯ ಖರಸಂವತ್ಸರದ ಭಾದ್ರಪದ ಶುಧ ೫ ಆದಿವಾರ ಶ್ರೀಮದನಾದಿಯ ಮಹಾಗ್ರಹಾರಂ ಕುಕನೂರ ಸಾಸಿರ್ವರು ಶ್ರೀ ಮೂಲಸ್ಥಾನದೇವರ್ಗೆಯಾ ದೇವರಾಚಾರ್ಯ ವಿರೂಪಾಕ್ಷ ಸ್ವಾಮಿಗಳು ಸಾಸಿರ್ವರ್ಗೆ ಪಾದಪೂಜೆಯಂ ಕೊಟ್ಟು ವಡಂಬಡಿಸಿ, ದಾನವಿತ್ತರು" ಎಂದು ಹೇಳಿದೆ. ಕ್ರಿ.ಶ.೧೨೩೮ರ ಸಾಕನೂರಿನ ಶಾಸನದಲ್ಲಿ[೬೯] ಯಾದವ ಸಿಂಪಣನ ಕಾಲದಲ್ಲಿ ಶ್ರೀಮನ್ಮಹಾಪ್ರಧಾನ ಬಾಹತ್ತರ ನಿಯೋಗಾಧಿಪತಿ ಸರ್ವಾಧಿಕಾರಿ ವಾಸುದೇವ... (ಪಸಾಯ್ತು)ರ ಶ್ರೀ ಕರಣಾಗ್ರಗ್ಯಣ... ವಾಮನ ದೇವನಾಯ್ಕರು... ಪುತ್ರೋತ್ಸಹವಾಗೆ... ಹೂರ್ತದಲು ಕಿಸುಕಾಡೆಪ್ಪತ್ತರ... ಮಣ... ಶ್ರೀ ಸಂಕನೂರ

ಸಂಕಲಾದೇವಿಗೆ... ಸರ್ವ ನಮಸ್ಯ ಮಾಡಿ ದಾನ ಬಿಟ್ಟಂತೆ ಹೇಳಿದೆ. ಅದೇ ರೀತಿ ಅಲ್ಲಿಯ ಇನ್ನೊಂದು ಶಾಸನ[೫೦] ೧೨೪೭ ಶ್ರೀ ಕನ್ನರ ದೇವನನ್ನು ಪ್ರಸ್ತಾಪಿಸುತ್ತಿದೆ. ಅವನ ಆಳ್ವಿಕೆಯಲ್ಲಿ ಅವನ ಪಾದ ಪದ್ಮೋಪಜೀವಿ ಸತ್ಯಾ... ಚಾರನಿರೂಪಿತ ಶ್ರೀಮನು ಮಹಾಪ್ರಧಾನರಾಯ ದೆಂ... ಸಾಹಸೋತ್ತುಂಗ ಭುಜಬಳಭೀಮ ಕೊಂಕಣ ಭಯಂಕರ ಮೊದಲಾದ ಬಿರುದಾವಳಿಗಳುಳ್ಳವನು ಸಂಕನೂರಿನಲ್ಲಿ ಏನೋ ಒಂದು ಮಹತ್ವದ ಕಾರ್ಯವನ್ನು ಮಾಡಿದಂತೆ ಹೇಳಿದೆ ಆದರೆ ಆ ವ್ಯಕ್ತಿ ಅವನ ಕಾರ್ಯ ಈ ಶಾಸನದಿಂದ ಸ್ಪಷ್ಟವಾಗುತ್ತಿಲ್ಲ.

**ಯಲಬುರ್ಗ ಸಿಂದರು**

ಕಲ್ಯಾಣ ಚಾಲುಕ್ಯರ ಬಲಗೈಯಂತಿದ್ದು ಅವರ ಶ್ರೇಯೋಭಿವೃದ್ಧಿಗೆ ಕಾರಣರಾದವರು, ಯಲಬುರ್ಗಿಸಿಂದರು ಶ್ರೀ ರಾಮಚಂದ್ರನ ಸೇತುಬಂದಕಾರ್ಯದಲ್ಲಿ ಅಳಿಲುಗಳೂ ಸೇವೆ ಸಲ್ಲಿಸಿದಂತೆ ನಾಡ ನಿರ್ಮಾಣ ಕಾರ್ಯದಲ್ಲಿ ಸಾಮ್ರಾಟರೊಂದಿಗೆ ಸಾಮಂತರೂ ಸೇವೆ ಸಲ್ಲಿಸಿದರು. ಆದ್ದರಿಂದ ನಾಡ ಚರಿತ್ರೆಯೊಂದಿಗೆ ನಾಡವರ ಚರಿತ್ರೆ ಸಾಮ್ರಾಟರ ಚರಿತ್ರೆಯೊಂದಿಗೆ ಸಾಮಂತ ಮಾಂಡಲೀಕರ ಚರಿತ್ರೆ ಬೆರೆತು ಬರುತ್ತಿರುವುದು ಸಹಜ, ಸ್ವಾಭಾವಿಕ, ವೃಷ್ಟಿಯಲ್ಲಿ ಅವರ ಚರಿತ್ರೆ ಬಿಡಿಬಿಡಿಯಾಗಿ ಕಾಣುತ್ತಿದ್ದರೂ ಸಮಷ್ಟಿಯಲ್ಲಿ ಅವಲ್ಲೆ ಒಂದಕ್ಕೊಂದು ಪೂರಕಗಳು ಸಾಮ್ರಾಜ್ಯವನ್ನು ಕಟ್ಟುವಾಗ ಸಾಮಂತರ ಪಾತ್ರವು ವಿಶೇಷವಾಗಿರುತ್ತಿದ್ದಿತು. ಆಳರಸರ ಏಳು ಬೀಳುಗಳಲ್ಲಿ ಸಮಭಾಗಿಗಳಾಗಿ, ನಾಡಿನ ರಕ್ಷಣೆಗೆ ಟೊಂಕಕಟ್ಟಿ ನಿಂತವರು ಅವರು ವರಿಷ್ಠರಿಗೆ ನಿಷ್ಠೆಯನ್ನು ತೋರುತ್ತ ತಮ್ಮ ನಾಡ ಸಂಸ್ಕೃತಿಯನ್ನು ಕಾಪಾಡುತ್ತ ಸಾಮ್ರಾಟರ ರಾಜಶಕ್ತಿಗೆ ಸ್ಥಿರತೆಯನ್ನೊದಗಿಸುತ್ತ ಸಾಧಿಸಿದಾಗ ಸ್ವತಂತ್ರರಾಗಲು ಪ್ರಯತ್ನಿಸುತ್ತ ಬಾಳುತ್ತಿದ್ದರು. ಅವರು ಅಂತಹ ಸಾಮಂತರಲ್ಲಿ ಯಲಬುರ್ಗಿ ಸಿಂದರು ಅಗ್ರಗಣ್ಯರು.

ದಕ್ಷಿಣ ಭಾರತದ ಮಹಾಮಂಡಳೇಶ್ವರರಲ್ಲಿಯೇ ಪ್ರಮುಖರಾದವರು ಯಲಬುರ್ಗಿಸಿಂದರು. ಇವರು ಕರ್ನಾಟಕವನ್ನು ಬೇರೆ ಬೇರೆ ಕಾಲಗಳಲ್ಲಿ ಆಳಿದ ಚಾಲುಕ್ಯ, ಕಲಚೂರಿ, ಯಾದವ ಮನೆತನಗಳಲ್ಲಿ ಗೌರವವನ್ನು ಹೊಂದಿ, ಅವರ ಪರವಾಗಿ ಇತರ ಅರಸರೊಂದಿಗೆ ಹೋರಾಡಿ, ಆ ಅರಸು ಮನೆತನಗಳ ರಕ್ಷಣೆಯ ಬೆನ್ನೆಲುಬಾಗಿ ನಿಂತವರು ಚಾಲುಕ್ಯ ಅರಸುಮನೆತನಕ್ಕಂತು ಈ ವಂಶದವರಿಂದ ಸಂದ ಸೇವೆ ಅತ್ಯಪೂರ್ವವಾದುದು. ಅಂದಿನ ಅರಸರಲ್ಲಿ ಮಹಾಮಂಡಳೇಶ್ವರರು ಇಡುತ್ತಿದ್ದ ಅಪಾರ ಭಕ್ತಿ, ಗೌರವ, ಆದರಗಳಿಗೆ; ತೋರುತ್ತಿದ್ದ ಶೌರ್ಯ ಸಾಹಸ, ಆದರ್ಶ ಆಡಳಿತಗಳಿಗೆ ಈ ವಂಶ ಒಳ್ಳೆಯ ಉದಾಹರಣೆಯಾಗಿದೆ. ಈ ಅರಸು ಮನೆತನ ಈ ನಾಡಿನಲ್ಲಿ ಆಳಿ ಹೋದುದನ್ನು ಅತ್ಯಂತ ಅಭಿಮಾನದಿಂದ ಸಾರುತ್ತ ನಿಂತಿವೆ. ಇಲ್ಲಿಯ ಹಲವು ಶಾಸನಗಳು ಈಗ ಈ ಶಾಸನಗಳಲ್ಲಿ ಹುದುಗಿರುವ ಈ ವಂಶದ ಇತಿಹಾಸ ವೈಭವವನ್ನು ಹೆಕ್ಕಿ ತೆಗೆದು ನೋಡಬಹುದು.

ಛಿಂದ ಅಥವಾ ಸಿಂದ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಈ ಮನೆತನವು ಕ್ರಿ.ಶ.೫-೬ನೆಯ ಶತಮಾನದಿಂದಲೇ[೫೧] ಕನ್ನಡನಾಡಿನ ಚರಿತ್ರೆಯಲ್ಲಿ ಕಾಲೂರಿ ನಿಂತಿರುವುದು

ಗೋಚರಿಸುತ್ತದೆ. ಕ್ರಮೇಣ ಕರ್ನಾಟಕದ ಹಲವು ಭಾಗಗಳನ್ನು ವಶಪಡಿಸಿಕೊಂಡು ಆ ಭಾಗದ ಪ್ರಾತಿನಿಧಿಕ ಹೆಸರನ್ನು ಧರಿಸಿ ಹಲವಲು ಹತ್ತು ಭಾಗಗಳಲ್ಲಿ ರಾಜ್ಯಭಾರ ಮಾಡಿತು ಈ ವಂಶ ವಿಜಾಪುರ ಜಿಲ್ಲೆಯ ಬಾಗಲಕೋಟೆಯಲ್ಲಿ ಬಾಗಡಗೆಯ ಸಿಂದರು, ಬಳ್ಳಾರಿ ಜಿಲ್ಲೆಯ ಕುರುಗೋಡು ಭಾಗದಲ್ಲಿ ಕುರುಕೋಡು ಸಿಂದರು, ಶಿವಮೊಗ್ಗ ಜಿಲ್ಲೆಯ ಹೊನ್ನಾಳಿ ತಾಲೂಕಿನ ಬೆಳಗುತ್ತಿಯ ಪರಿಸರದಲ್ಲಿ ಬೆಳಗುತ್ತಿಯ ಸಿಂದರು, ಧಾರವಾಡ ಜಿಲ್ಲೆಯ ಕರಜಿಗಿತಾಲೂಕಿನ ಗುತ್ತಲದ ಸುತ್ತು ಮುತ್ತಣ ಪ್ರದೇಶದಲ್ಲಿ ಗುತ್ತಲದ ಸಿಂದರು, ಧಾರವಾಡ ಜಿಲ್ಲೆಯ ಮುಳಗುಂದ ಭಾಗದಲ್ಲಿ ಮುಳುಗುಂದ ಸಿಂದರು, ಬೀದರ ಜಿಲ್ಲೆಯ ರಂಜೋಲ ಖೇಣಿ ಭಾಗದಲ್ಲಿ ರಂಜೋಲ ಸಿಂದರು, ಮೊದಲದವರು ಈ ವಂಶದ ಪ್ರಮುಖರು, ಅವರಲ್ಲಿ ಅತ್ಯಂತ ಪ್ರಸಿದ್ಧರಾದವರು ಮತ್ತು ಮುಖ್ಯರಾದವರು ಯಲಬುರ್ಗಿ ಸಿಂದರು.

ಈ ವಂಶದ ಮೊದಲ ಅರಸು ೧ನೇ ಆಚುಗಿಯನ್ನು "ವಿಕ್ರಮಾದಿತ್ಯನ ಕಟ್ಟಿದ ಅಲಗು" ಎಂದು ಆಚುಗಿಯ ಮಗ ಬೊಮ್ಮನು ೭ನೆಯ ವಿಕ್ರಮವರ್ಷದಲ್ಲಿ ಕಿಸುಕಾಡು ಮೊದಲಾದ ನಾಡುಗಳನ್ನಾಳುತ್ತಿದ್ದನೆಂದು (ಸವಡಿಶಾಸನ) ಹೇಳಲ್ಪಟ್ಟಿರುವುದರಿಂದ ಈ ವಂಶದ ಉಗಮವು ೬ನೇ ವಿಕ್ರಮಾದಿತ್ಯನು ಪಟ್ಟಕ್ಕೆ ಕುಳಿತ ಕಾಲದಲ್ಲಿಯೇ ೧೦೭೬ ಆಗಿರಬೇಕು,[೫೨] ಹೀಗೆ ಚಾಲುಕ್ಯ ಅರಸು ೬ನೇ ವಿಕ್ರಮಾದಿತ್ಯನ ಕಾಲದಲ್ಲಿ ಪ್ರಾಬಲ್ಯಕ್ಕೆ ಬಂದ ಇವರು ಕ್ರಮೇಣ ವಿಜಯಪುರ, ಧಾರವಾಡ, ರಾಯಚೂರು, ಜಿಲ್ಲೆಗಳ ಹಲಕೆಲವು ಭಾಗಗಳನ್ನು ಹಿಡಿದುಕೊಂಡು "ಸಿಂದನಾಡು" ಎಂಬ ಹೆಸರಿನಿಂದ ಈ ಭಾಗಗಳನ್ನು ಆಳಿದರು.

ಇದರಲ್ಲಿ ಕಿಸುಕಾಡು ೭೦ (ಇಂದಿನ ಪಟ್ಟದಕಲ್ಲು ಅಥವಾ ಬದಾಮಿ ತಾಲೂಕಿನ ಭಾಗ), ಕೆಳವಾಡಿ ೩೦೦ (ಇಂದಿನ ಬದಾಮಿಗೆ ೧೦ ಮೈಲು ದೂರದಲ್ಲಿರುವ ಕೆಳವಡಿ ಅಥವಾ ಕೆಲವಳಿ) ಮತ್ತು ನೆಯಂಗಲ್ಲ ೧೨ (ಇಂದಿನ ನರೇಗಲ್ಲ ಸುತ್ತಮುತ್ತಲ ಭಾಗಗಳಿದ್ದವು (೫.೯.೯.xv.೪೨) ಆಗಾಗ ಈ ಆಡಳಿತ ಪರಿಧಿಯಲ್ಲಿ ಕಿರಿವಿದಿ ೩೦, ಕುಂಟಿಗೆ-೭೦, ಕೋಕನೂರು-೩೦, ಮೊದಲಾದ ಭಾಗಗಳೂ ಸೇರಿದ್ದುಂಟು ಮೊದಮೊದಲು ಪಟ್ಟದಕಲ್ಲು ಈ ನಾಡಿನ ರಾಜಧಾನಿಯಾಗಿದ್ದು ತರುವಾಯ ಯಲಬುರ್ಗಿ ಆ ಸ್ಥಾನವನ್ನು ಪಡೆಯಿತು ಇಡೀ ಮನೆತನ ಯಲಬುರ್ಗಿ ಸಿಂದವಂಶ ಎಂದು ಪ್ರಸಿದ್ಧಿಪಡೆಯಿತು.

ಈ ವಂಶದ ಮೂಲ ತಿಳಿದುಬರುವುದಿಲ್ಲವಾದರೂ ಇವರು ಫಣಿರಾಜ ವಂಶದವರೆಂದು ಹೇಳಿಕೊಳ್ಳಲ್ಪದಟ್ಟಿರುವುದರಿಂದ[೫೩] ರಂಜೋಲ್: ಶಾಸನ[೫೪] ಬಾಗಡೆಗೆಯ ಸಿಂದರು ತಮ್ಮ ಧ್ವಜದಲ್ಲಿ "ನಾಗ" ಚಿಹ್ನೆಯನ್ನೊಳಗೊಂಡಿರುವುದರಿಂದ[೫೫] ನಾಗರು ದಕ್ಷಿಣ ಹಿಂದುಸ್ಥಾನದ ಮೂಲದವರಾದ ಪ್ರಬಲ ದ್ರಾವಿಡ ಜನಾಂಗವೆಂದು ಸಿದ್ದಿಸಲ್ಪಟ್ಟಿರುವುದರಿಂದ[೫೬] ಇವರು ಕರ್ನಾಟಕದ ಮೂಲದವರು.

ಸಿಂದ ವಂಶದ ಮೂಲವನ್ನು ಬೈರಮಟ್ಟಿ ಶಾಸನವು[೫೭] ಪೌರಾಣಿಕ ಹಿನ್ನೆಲೆಯೊಂದಿಗೆ ಈ ರೀತಿ ಹೇಳಿದೆ. ಒಮ್ಮೆ ನಾಗಲೋಕದ ನಾಗರಾಜನು ಭೂಲೋಕದ ಮಾನವರನ್ನು ನೋಡಲು ಪತ್ನಿ ಸಮೇತನಾಗಿ ಇಲ್ಲಿಗೆ ಬಂದನು. ಆಗ ಅವನ ಪತ್ನಿ ತುಂಬುಗರ್ಭಿಣಿ, ಆದ್ದರಿಂದ

ಅವರಿಬ್ಬರೂ ಅಹಿಚ್ಚತ್ರದಲ್ಲಿ ನಿಲ್ಲಬೇಕಾಯಿತು. ಅಲ್ಲಿ ಹುಟ್ಟಿದ ಮಗುವೇ ಸಿಂದಕುಮಾರ, ಪಾರ್ವತಿಯ ಇಚ್ಛೆಯ ಮೇರೆಗೆ ಹುಲಿಯು ಇವನಿಗೆ ಹಾಲುಣಿಸಿ ಕಲಿಯಾಗಿ ಮಾಡಿತು ಇವನು ನಾಗೇಂದ್ರನ ಕೃಪೆಯಿಂದ ದೀರ್ಘವಾದ ಬಾಹುಗಳನ್ನು ಪಡೆದನು ನಿಡದೋಳ್ ಸಿಂದ" ಎನಿಸಿಕೊಂಡನು, ಇವನೇ ಈ ವಂಶದ ಮೂಲಪುರುಷ.

ಶಿವಮೊಗ್ಗ ಜಿಲ್ಲೆಯ ಬೆಳಗುತ್ತಿಯ ಶಾಸನದಲ್ಲಿ (Jurnal of the K.U.Humanitics, x, pg-146) ಈ ಕಥೆಯು ಈ ರೀತಿ ಬಂದಿದೆ. ಶಿವ ಮತ್ತು ಸಿಂದುಗಳ ಪ್ರಿಯ ಸಂಗದಿಂದ ಒರ್ವ ಕುಮಾರ ಜನಿಸಲು ಶಿವನು ಅವನಿಗೆ ಸೈನ್ದವನೆಂದು ಅನ್ವರ್ಥ ನಾಮವನ್ನಿಟ್ಟನು." ಧಾರವಾಡ ಜಿಲ್ಲೆಯ ಹಳ್ಳೂರು (ಎ.ಆರ್ ಹರಿಹರ, of g.E, 1958-60: ಹೊನ್ನಳಿ ತಾಲೂಕಿನ ಮದನಬಾವಿ ಶಾಸನಗಳಲ್ಲಿಯೂ ಬಂದಿದೆ.) ಈ ಕುಮಾರನು ಹುಲಿಯ ಹಾಲು ಕುಡಿದು ಕಲಿಯಾಗಿ ಬೆಳೆದನು. ಹೀಗೆ ಬೆಳೆದ ಆ ಕುಮಾರನಿಗೆ ಪರಮೇಶ್ವರನು ಸಂಗ್ರಾಮದಲ್ಲಿ ಸಹಾಯೆಯಾಗೆಂದು ಶ್ರೀಮಾಳಪತಿದೇವಿಗೆ ಹೇಳಿ, ನೀಡದೋಳ ಸಿಂದನೆಂಬ ಎರಡನೆಯ ಹೆಸರನ್ನು ಕೊಟ್ಟನು ಅವನು ಮತ್ತು ಅವನ ವಂಶದವರು ಕರಹಾಡನಾಲ್ಸಾಸಿರ ಮೊದಲಾಗಿ ಅನೇಕ ದೇಶಗಳನ್ನಾಳಿದರು.

ರಂಜೋಲ ಗ್ರಾಮದ ಶಾಸನದಲ್ಲಿ ಈ ಕಥೆಯನ್ನು ಈ ರೀತಿ ಹೇಳಲಾಗಿದೆ. ದರಣೇಂದ್ರನು ಆತನ ಅಗ್ರಮಹಿಷಿ ಪದ್ಮಾವತಿ ದೇವಿಂಯೂ ಬೋಗಾವತಿಪುರದಲ್ಲಿ ಸುಖದಿಂದಿದ್ದಾಗ ಪದ್ಮಾವತಿ ದೇವಿಗೆ ಗರ್ಭಚಿಹ್ನೆ ತೋರಿದವು. ಆಗ ಆಕೆ ಸಿಂಧೂ ನದಿಯ ನೀರಿನಲ್ಲಿ ಓಕಳಿಯಾಡಬಯಸಿ ಗಂಡನೊಂದಿಗೆ ಭೂತಳಕ್ಕೆ ಬಂದು ಜಲಕ್ರೀಡೆಯಾಡಿದಳು. ಆಕೆಗೆ ಸೂರ್ಯನ ಅನುಗ್ರಹದಿಂದ ಅವನ ಸೌಂದರ್ಯ ಸಾಮರ್ಥ್ಯಗಳನ್ನು ಪಡೆದ ಒಂದು ಮಗು ಹುಟ್ಟಿತು ಅವನನ್ನು ಇಲ್ಲಿಯೇ ಆಳಲು ನೇಮಿಸಿ ಹುಲಿಯ ರಕ್ಷಣೆಯಲ್ಲಿ ಬಿಟ್ಟರು. ಇವನು ಯೌವ್ವನ ಪ್ರಾಪ್ತನಾದ ಕೂಡಲೇ ಕದಂಬ ವಂಶದ ಮಯೂರವರ್ಮನ ಸುತ ಲಕ್ಷ್ಮೀಮತಿಯನ್ನು ವಿವಾಹವಾದನು ಅವರಿಂದ ಪ್ರಭುಸೇವ್ಯ, ಸತ್ಯಸೇವ್ಯ, ಜಗಸೇವ್ಯ, ಮತ್ತು ಬುಧಸೇವ್ಯ ಎಂಬ ಮಕ್ಕಳಾದರು, ಇವರಲ್ಲಿ ಸತ್ಯಸೇವ್ಯನು ಪಳಿಯಂಡಕ್ಷಿತಿಮಂಡಲದಲ್ಲಿ ಪ್ರಭುಸೇವ್ಯನು ಬಾಗಡಗೆ ದೇಶದಲ್ಲಿ ಬುದ ಸೇವ್ಯನು ಬಳ್ಳಕಿನಾಡಿನಲ್ಲಿ ಮತ್ತು ಜಗತ್ಸೇವ್ಯನು ಅಟ್ಟಳೆನಾಡಿನಲ್ಲಿ ನಿಂತು ಆಳಹತ್ತಿದರು.

ಮೇಲಿನ ಶಾಸನಗಳಲ್ಲಿ ಯಾವುದು ನಿಜ ಯವುದು ಕಲ್ಪಿತ ಹೇಳುವುದು ಕಠಿಣ, ಆದರೆ ಈ ಎಲ್ಲಾ ಶಾಸನಗಳ ಸಾಮಾನ್ಯ ಅಭಿಪ್ರಾಯದ ಮೇರೆಗೆ ಈ ವಂಶದ ಮೂಲಪುರುಷ ನಿಡದೋಳ ಸಿಂದ ಎಂಬುದನ್ನು ಮಾತ್ರ ಒಪ್ಪಬಹುದು. ಈ ನಿಡದೋಳಸಿಂದನಿಂದ ಮುಂದೆ ಈ ವಂಶ ಕವಲೊಡೆದು ಕನ್ನಡನಾಡಿನ ಬೇರೆ ಬೇರೆ ಭಾಗಗಳಲ್ಲಿ ತಲೆ ಎತ್ತಿ ಮೆರೆಯಿತು.

ಯಲಬುರ್ಗಿ ಸಿಂದವಂಶವು ಸಪ್ತಸಹೋದರರಿಂದ ಪ್ರಾರಂಭವಾಗುತ್ತದೆ. ಈ ಸಪ್ತ ಸಹೋದರರ ತಂದೆ ಮತ್ತು ಯಲಬುಗಿಯ ಸಿಂದವಂಶದ ಸ್ಥಾಪಕ ಬಾಗಡಗೆಯ (ಇಂದಿನ ಬಾಗಲಕೋಟೆ) ಪ್ರಸಿದ್ದ ಅರಸು ಮಹಾಸಾಮಂತ ನಾಗಾದಿತ್ಯನಾಗಿರಬೇಕು. ಅವನ ಪಟ್ಟದರಸಿ

ಪೋಳಯಬ್ಬರಸಿಗೆ ಪೋಲಸಿಂದನೆಂಬ ಮಗವಿದ್ದುದಾಗಿ ಬೈರನಮಟ್ಟಿ ಶಾಸನ ಹೇಳುತ್ತಿದೆ. ಆದರೆ ಈ ಸಪ್ತ ಸಹೋದರರ ಮತ್ತು ನಾಗಾದಿತ್ಯನ ಸಂಬಂಧವನ್ನು ಉಲ್ಲೇಖಿಸುವ ಯಾವ ಶಾಸನವೂ ದೊರೆಯದೆ ಶ್ರೀ ದಿನಕರ ದೇಶಾಯಿಯವರು ನಾಗಾದಿತ್ಯನು ಬಾಗಡಗೆ ೭೦ ನ್ನಲ್ಲದೆ ಹತ್ತಿ ಮತ್ತೂರು ಮೊದಲಾದ ಭಾಗಗಳ ಒಡೆಯನಾಗಿದ್ದನ್ನನುಲಕ್ಷಿಸಿ ಪಟ್ಟದರಿಸಿಯ ಮಗನಾದ ಪೊಲಸಿಂದನಿಗೆ ಅನುವಂಶಿಕವಾಗಿ ಬಂದ ಬಾಗಡಗೆಯನ್ನು ಇನ್ನೊಬ್ಬ ಹೆಂಡತಿಯ ಮಕ್ಕಳಾಗಿರಬಹುದಾದ ಸಪ್ತಸಹೋದರರಿಗೆ ಸ್ವಸಾಮರ್ಥ್ಯದಿಂದ ಸಂಪಾದಿಸಿದ ರಾಜ್ಯಭಾಗಗಳನ್ನು ಕೊಟ್ಟಿರಬೇಕು. ಅಲ್ಲಿಂದ ಯಲಬುರ್ಗಿಯ ಮನೆತನ ಮುಮದುವರಿದಿರಬೇಕು ಎಂದು ಊಹಿಸಿದ್ದಾರೆ.[೬೦] ಇದು ಸಾಧ್ಯವಿರಬಹುದಾದರೂ ಆಧಾರಗಳ ಕೊರತೆ ಇದೆ.

**೧ನೇ ಆಚುಗಿ (೧೦೭೬)**

ಸಪ್ತ ಸಹೋದರರಲ್ಲಿ ಹಿರಿಯವನು ೧ನೇ ಆಚುಗಿ ಸಿಂದವಂಶವನ್ನು ಹೇಳುವ ಬಹಳಷ್ಟು ಶಾಸನಗಳು ಇವನಿಂದಲೇ ಮೊದಲುಗೊಳ್ಳುತ್ತಿವೆ. ಸೂಡಿ ಮತ್ತು ನಿಡಗುಂದಿ ಶಾಸನಗಳು[೬೧] ಇವನ್ನು "ಆದಿಮಂಡಳಿಕ" ಎಂದು ಬಣ್ಣಿಸಿವೆ. ಯಾದ್ದರಿಂದ ಯಲಬುರ್ಗಿ ಸಿಂದವಂಶಕ್ಕೆ ಇವನೇ ಆದಿಪುರುಷನೆಂದು ಹೇಳಬಹುದು. ಆಚುಗಿ, ಆಚುಗಿದೇವ, ಆಚರಸ ಎಂದು ಮೊದಲಾಗಿ ಕರೆದಿರುವ ಶಾಸನಗಳು ಇವನನ್ನು ಮನದುಂಬಿ ಬಣ್ಣಿಸಿವೆ. ಚಾಲುಕ್ಯ ಸಾಮ್ರಾಜ್ಯ ನಂಬಿಗಸ್ತ ಮತ್ತು ಸಮರ್ಥ ಮಾಂಡಲಿಕನಾಗಿದ್ದ ಆ ವಂಶದ ಆಧಾರಸ್ಥಂಬದಂತಿದ್ದ. ಇವನನ್ನು ಹಲವು ಶಾಸನಗಳು ಈ ರೀತಿ ಹೊಗಳಿವೆ.

"ಮೊನೆಯಳುರ್ಪಂ ತೋರುತ್ತ
ವನುವರದೊಳು ಬಲಿದೊಳು ಮರುತಂ ತ್ರಿಭುವನ ಮ
ಲ್ಲನ ಕಟ್ಟಿದಲಗಿನಂತಸೆ
ದ ಆಚರ ಸಮಂಡಳೇಶ್ವರಂ ಭೂತಳದೊಳು"

ನಿಡಗುಂದಿ[೬೨] ಕಳಕಪ್ಪನ ಗುಡ್ಡ[೬೩] ಕಣ್ಣೂರು[೬೪] ಇದರಿಂದ ಇವನು ಚಾಲುಕ್ಯವಂಶದ ಅರಸು ೬ನೇ ವಿಕ್ರಮಾದಿತ್ಯನ ಶೌರ್ಯ ಸಾಹಸಗಳ ಪ್ರತೀಕವಾಗಿದ್ದನೆಂದು ಆ ಅರಸ ಯುದ್ಧದ ಸಂಪೂರ್ಣ ಭಾರವನ್ನು ವಹಿಸಿದ್ದನೆಂದೂ ತೋರುತ್ತದೆ. ಇದರಿಂದ ಇವನ ಕಾಲವನ್ನು ಚಾಲುಕ್ಯರ ವಿಕ್ರಮನು ಪಟ್ಟಕ್ಕೆ ಕುಳಿತ ಕಾಲ (೧೦೭೬) ಎಂದು ಹೇಳಬಹುದಾಗಿದೆ.

ಇವನನ್ನು ಹಲವು ಶಾಸನಗಳು ಈ ರೀತಿ ಬಣ್ಣಿಸಿವೆ. ಸಿಂದ ಕುಲಕ್ಕೆ ತಿಲಕಪ್ರಾಯನು ಭೂಮಿಯ ಮೇಲಿನ ದುಷ್ಟ ವೈರಿಗಳನ್ನು ಗೆಲ್ಲುವ ಸಾಮರ್ಥ್ಯ ಪಡೆದವನು. ಮಂದಾರ ಪರ್ವತದ ಹಾಗೆ ಸ್ಥಿರತೆಯುಳ್ಳವನು ಉತ್ಸಾಹಿಪುರಂದರನು, ಮಹಾಶೂರನು (ಪಟ್ಟದಕಲ್ಲು ಗುಡಿಗಳು, ಪುಟ–೮೮) ಸಮರ್ಥ ಸುಮಂತನು, ಅಸಮಾನ್ಯ ಶಕ್ತಿವಂತನು, ಶೂರರಲ್ಲಿ ಪ್ರಮುಖನು, ವೈರಿ ಅರಸರ ಗರ್ವವನ್ನು ಮುರಿದವನು ಸಿಂದವಂಶದ ಮೇಲ್ಮೆಯನ್ನು ಮೆರೆದವನು, ಉದಯೋನ್ಮುಖ ಶೂರರಲ್ಲಿ ಪ್ರಮುಖನು, ನಾನಾ ಕಲಾ ಕೋವಿದನು, ಚಾಲುಕ್ಯ ನರೇಂದ್ರನ ಮುಂದೆ ಹಟ್ಟಿಗಾಳೆಗಳಲ್ಲಿ ಪೆಂಪನ್ನು ಮೆರೆದನು ಇತ್ಯಾದಿ.[೬೫]

ಇದರಿಂದ ಇವನ ಶೌರ್ಯ, ಸಾಹಸಗಳ ಮಹಿಮೆ ತಿಳಿದು ಬರುವುದಲ್ಲದೆ ಇವನು ನಾನಾ ಕಲೆಗಳಲ್ಲಿ ಕೋವಿದನಾಗಿದ್ದನೆಂಬುದೂ ಚಾಳುಕ್ಯ ನರೇಂದ್ರನ ಮುಂದೆ ಹಟ್ಟಿಗಾಳಗದಲ್ಲಿ ಪೆಂಪನ್ನು ಮೆರೆದನೆಂದೂ ಗೊತ್ತಾಗುತ್ತಿದೆ. ಆದರೆ ಇವನ ಈ ಹಟ್ಟಿಗಾಳಗದ ವಿವರ ತಿಳಿದು ಬಾರದು ಒಟ್ಟಾರೆ ಇವನು ಜನನುತನಾಗಿ[೧೬] ರಾಜ್ಯಭಾರ ಮಾಡಿದನು ಎಂಬುದು ಮಾತ್ರ ಖಚಿತ.

ಅವನ ಶೌರ್ಯ, ಸಾಹಸ ವರ್ಣನೆಯೊಂದಿಗೆ ಅವನು ಮಾಡಿದ ಹಲವು ಯುದ್ಧಗಳನ್ನು ಸೂಡಿ ಶಾಸನ[೧೭] ಪ್ರಸ್ತಾಪಿಸುತ್ತದೆ. ಆದರೆ ಶಾಸನದ ಬಹಳಷ್ಟು ಭಾಗ ಒಡೆದು ಹೋಗಿರುವುದರಿಂದ ಅವನು ಮಾಡಿದ ಯುದ್ಧಗಳ ಹೆಚ್ಚಿನ ವಿವಿರ ತಿಳಿಯದು.

ಇವನ ಮರಣದ ವೇಳೆಯಲ್ಲಿ ಇವನ ಮಗ ಬೊಮ್ಮ ಇನ್ನೂ ಚಿಕ್ಕವನಿದ್ದಿರಬಹುದಾದ್ದರಿಂದ ಇವನ ತಮ್ಮಂದಿರಾದ ಚಾವುಂಡ ಮೊದಲಾದವರೇ ಕೆಲಕಾಲ ರಾಜ್ಯಭಾರ ಮಾಡಿದಂತೆ ತಿಳಿದು ಬರುತ್ತದೆ.

**ಚಾವುಂಡ ಮತ್ತು ಅವನ ಸಹೋದರರು**

೧ನೇ ಆಚುಗಿಯ ಸಹೋದರರು ನಾಕ,ಸಿಂಘ,ದಾಸ,ದೇವ ಅಥವ ದಾಮ, ಚಾವುಂಡ ಮತ್ತು ಚಾವ, ಇವರನ್ನು "ಗಣೋತ್ತರೆಸೆದರ್" ಎಂದು[೧೮] ಅಪ್ರತಿಮ ಪ್ರತಾಪ ಭೋಪಾಚಳ ವಜ್ರದಂಡರ್" ಎಂದು[೧೯] "ಒಳ್ಳಲೆಯ ಭೂಭುಜರು" ಎಂದು[೨೦] ಬಣ್ಣಿಸಲಾಗಿದೆ. ಇವರು ಸಾಂಪ್ರದಾಯಿಕವಾಗಿ ನೃಪ, ಭೂಭುಜ, ಮಹೀಶ, ಧಾರಣೀಶ, (ಕಲ್ಲೂರು ಶಾಸನ ಪರಿಚಯ ಪಾಂಡುರಂಗರಾಯರು ದೇಶಾಯಿ) ಎಂಬ ಹೆಸರು ಧರಿಸಿರುವರಾದರೂ ಇವರಲ್ಲಿ ಯಾರೊಬ್ಬರು ಪಟ್ಟಕ್ಕೆ ಕುಳಿತು ರಾಜ್ಯಭಾರ ಮಾಡಿದವರಲ್ಲ, ತಮ್ಮ ಅಣ್ಣನ ಮಗ ಬೊಮ್ಮನನ್ನೇ ಸಿಂಹಾಸನಕ್ಕೆ ಕೂಡ್ರಿಸಿ ರಾಜ್ಯಪಾಲನೆಯನ್ನು ಮಾಡುತ್ತ ಬಂದರು.

ಇವರಲ್ಲಿ ನಾಕರಸನು ವೈರಿ ಅರಸರೆಂಬ ಪರ್ವತಗಳಿಗೆ ವಜ್ರಾಯುಧನು, ಧಾಮಮಹಿಪನು, ಉಗ್ರಾಚರಣೆಯನ್ನೊಳಗೊಂಡ ಶೌರ್ಯದ ಸಂಪತ್ತು, ಚಾವಧರಾತಳಾಧಿಪನು ಅಸಾಮಾನ್ಯದಾನ ಶೀಲತೆಯ ಚಾರುದತ್ತನು ಎಂದು ಬಣ್ಣಿಸಿಸಲ್ಪಟ್ಟಿದ್ದಾರೆ. (ಪಟ್ಟದಕಲ್ಲುಗುಡಿಗಳು) ಎ.ಎಂ.ಅಣ್ಣೀಗೇರಿ, ಪು-೮೮) ಇನ್ನೂ ಹಲವು ಶಾಸನಗಳು ಇವರ ಗುಣಾವಳಿಗಳನ್ನು ಎತ್ತಿ ಹೇಳಿವೆ ಹಿರೆಮಣ್ಣೂರು, ಕೊಣ್ಣೂರು, ಕಲ್ಲೂರು, ಶಾಸನಗಳು

ಇವರಲ್ಲಿ ನಾಲ್ಕನೆಯವನಾದರೂ ಮಹತ್ವದ ವ್ಯಕ್ತಿ ಚಾವುಂಡ ಇವನನ್ನು ಹಲವು ಶಾಸನಗಳು ಈ ರೀತಿ ಬಣ್ಣಿಸಿವೆ ಯುದ್ಧದಲ್ಲಿ ಮಹಾಸಮರ್ಥನು ಅವನ ಖಡ್ಗ ಸಾಮರ್ಥ್ಯವು ವೈರಿ ಹೃದಯಕ್ಕೆ ಭಯವನ್ನುಂಟುಮಾಡುತಿದ್ದಿತು. ಇವನು ಕೀರ್ತಿ ದೇವತೆಯ ಪ್ರತಿನಿಧಿಯಂತಿದ್ದನು. ವೈರಿ ಅರಸರ ಸಮೋಹವು ಯುದ್ಧಭೂಮಿಯಲ್ಲಿ ವಿರೋಧಿಸಿ ಎರಿಬರಲು ಒಳ್ಳೆಯ ಮಹಿಮನಾಗಿ ಅಸಮಾನ್ಯ ಕೋಪದಿಂದ ಅವರನ್ನು ಕೊಂದಿಕ್ಕಿ ಭೂಮಂಡಲದ ಮೇಲೆ ಸೂರ್ಯನ ಹಾಗೆ ಪ್ರಕಾಶವನ್ನು ಯಶಃ ಶ್ರೀಕಾಂತಿಯನ್ನು ಹೊಂದಿ ಶೋಭಿಸಿದವನು[೨೧]

ಇವನು ರಾಜಲಕ್ಷ್ಮಿಯ ವಾಸಸ್ಥಳವಾಗಿದ್ದನು ಭೀಕರ ವೈರಿ ಅರಸರಲ್ಲಿ ಪ್ರಸಿದ್ಧಿ ಪಡೆದಿದ್ದನು ಅಧಿಕ ಭುಜಬಲನಾಗಿದ್ದನು. ಜಯದ ವಾಸಸ್ಥಳನು, ಯುದ್ಧ ಭಯಂಕರನು ಆಗಿದ್ದನು.[೨೨] ಆದರೆ ಇವುಗಳ ವಿವರ ಮತ್ರ ತಿಳಿಯದು.

ಹೀಗೆ ಸೌರ್ಯ ಸಾಹಸಗಳಿಂದ ಒಳ್ಳೆಯ ಗುಣಾವಳಿಗಳಿಂದ ಪ್ರಸಿದ್ಧಿ ಪಡೆದ ಈ ಸಹೋದರರು ಬೊಮ್ಮನು ವಯಸ್ಸಿಗೆ ಬರುವವರೆಗೆ ರಾಜ್ಯಾಡಳಿತವನ್ನು ನೋಡಿಕೊಳ್ಳುತ್ತ ಇದ್ದರು.

**ಬೊಮ್ಮ ೧೦೮೩**

ಆಚುಗಿಯ ಮಗನಾಗಿರುವ ಇವನನ್ನು ಕಲ್ಲೂರ ಶಾಸನವು ಮಾತ್ರ ಉಲ್ಲೇಖಿಸುವುದಿಲ್ಲ. ಉಳಿದ ಶಾಸನಗಳು ಇವನನ್ನು ಈ ರೀತಿ ಬಣ್ಣಿಸುತ್ತಿವೆ. ಅಧಿಕ ಪ್ರತಾಪನಿಧಿಯು ಜಯಲಕ್ಷ್ಮೀ ರಮಣನು, ಕೀರ್ತಿವಿಳಾಸನು, ಸಿಂದವಂಶವನ್ನು ವರ್ಧಿಸುವ ಚಂದ್ರನು[೨೩] ಅನೇಕ ರಾಜ್ಯಗಳ ಒಡೆಯನು ಮಹಾಸಾಹಸಿಯು, ರಣದಲ್ಲಿ ಭೀಕರರಾದ ಅರಸರಲ್ಲಿ ಉತ್ಕರ್ಷನು, ಗುಣನಿಧಿಯು, ಪಂಡಿತ ಜನ ಸಮೂಹದಿಮದ ಪ್ರಶಂಸೆ ಪಡೆದವನು,[೨೪] ತನ್ನ ಆತ್ಮಶೌರ್ಯೋನ್ನತಿಗಾಗಿ ಚಕ್ರವರ್ತಿಯಿಂದ ಸಾಕಷ್ಟು ಸಿರಿ ಸಂಪತ್ತನ್ನು ಪಡೆದನು,[೨೫] ಕಳಕಪ್ಪನಗುಡ್ಡ[೨೬]

ಇವನ ಈ ಚಕ್ರವರ್ತಿ ೬ನೇ ವಿಕ್ರಮಾದಿತ್ಯನು ಇರಬೇಕು ಆದರೆ ಈ ರೀತಿ ಇವನಿಗೆ ಸಂಪತ್ತನ್ನು ಕೊಡಲು ಒದಗಿದ ಪ್ರಸಂಗವಾವುದೋ ತಿಳಿಯದು. ಸವಡಿ ಶಾಸನವು ಇವನು ಕಿಸುಕಾಡು ಮೊದಲಾದವುಗಳನ್ನು ೭ನೆಯ ವಿಕ್ರಮ ವರ್ಷದಲ್ಲಿ (೧೦೮೩) ಆಳುತ್ತಿದ್ದನು ಎಂದಿದೆ.

ಇವನು ತನ್ನ ಕೀರ್ತಿದಾಯಕವಾದ ಬಾಹುಸಾಮರ್ಥ್ಯದಿಂದ ಸ್ವರ್ಗದ ಸ್ತ್ರೀಯರಿಗೂ ಅತ್ಯಂತ ಪ್ರಿಯನಾಗಿದ್ದನಂತೆ ರಣರಂಗದಲ್ಲಿ ಇವನು ಬಲಿಷ್ಠ ಅರಸರಲ್ಲಿಯೇ ಪ್ರಮುಖನೆನ್ನಿಸಿದ್ದನಂತೆ, ಇವನು ಕೇವಲ ಶೂರನಾಗಿರಲಿಲ್ಲ, ಪಾಂಡಿತ್ಯ ಪ್ರತಿಭೆಗಳ ಆಗರವೂ ಆಗಿದ್ದನಂತೆ ಒಳ್ಳೆಯ ಗುಣಸಾಗರನೂ ಪಂಡಿತರ ಕಿವಿಯ ಆಭರಣವೂ ಆಗಿ ಮೆರೆದನು ಇವನು.

ಇವನು ಉತ್ತರಾಧಿಕಾರಿ ಇಲ್ಲದೆ ಮಡಿದಿರಬಹುದಾದ್ದರಿಂದ ಇವನ ತಮ್ಮ ೩ನೆಯ ಸಿಂಘನ ಮಗನಾದ ೨ನೆಯ ಆಚರಸಪಟ್ಟಕ್ಕೆ ಬಂದನು.

**೨ನೆಯ ಸಿಂಗ**

ಕೆಲವು ಶಾಸನಗಳು ಬೊಮ್ಮನ ತರುವಾಯ ಆಚುಗಿಯನ್ನು ಹೆಸರಿಸಿದರೆ ಇನ್ನೂ ಕೆಲವು ಶಾಸನಗಳು ಬೊಮ್ಮನ "ತಮ್ಮಂ ಸಿಂಗಮಹೀತಳಪತಿ ಸಂಭವಂ... ಆಚರಸಂ"[೨೭] ಎಂದು ಹೇಳುವ, ಇಲ್ಲಿ ಇವನನ್ನು ಆಚರಸನ ತಂದೆ ಎಂದು ಮಾತ್ರ ಉಲ್ಲೇಖಿಸಲಾಗಿದೆಯೇ ಹೊರತು ಸ್ವತಂತ್ರವಾಗಿ ಇವನನ್ನು ಹೇಳಿಲ್ಲ ಆದ್ದರಿಂದ ಇವನು ರಾಜ್ಯ ಭಾರ ಮಾಡಿರುವ ಸಂಭವವಿಲ್ಲ ಆದರೆ ಕ್ರಿಶ ೧೦೭೬ರ ಸುಮಾರಿನಲ್ಲಿ ಪಶ್ಚಿಮ ಚಾಲುಕ್ಯರ ಅರಸು ೨ನೇ

ಸೋಮೇಶ್ವರನ ಮಹಾಮಂಡಲೇಶ್ವರನಾಗಿ ಒಬ್ಬ ಸಿಂಘಣ "ಕಿಸುಕಾಡೆರ್ಪತ್ತುವಂ ದುಷ್ಟನಿಗ್ರಹ ಶಿಷ್ಟ ಪ್ರತಿಪಾಳನದಿಂದಾಳುತ್ತಿದ್ದನು"[೮೮] ಎಂದು ತಿಳಿದು ಬರುತ್ತಿದೆ. ಇವನಿಗೂ ಮೇಲಣ ಸಿಂಗಣನಿಗೂ ಏನು ಸಂಬಂಧವೋ ತಿಳಿಯದು.

ಆ "ವಿಭು ಸಿಂಹನ ಕೇತಲದೇವಿಮ್ಮಂನೆಗಳ್ದ ವಾಗ್ವಧೂ ದೇವಿಮ್ಮ"[೮೯] ಎಂಬುದರಿಂದ ಇವನ ಹೆಂಡತಿ ಕೇತಲದೇವಿಯೆಂಬುದು ಸ್ಪಷ್ಟವಾಗುತ್ತದೆ. ಆಕೆ ಪ್ರಸಿದ್ಧಿಯಲ್ಲಿ ಸರಸ್ವತಿಯಾಗಿದ್ದಳಂತೆ. ಬೊಮ್ಮನ ತರುವಾಯ ಇವನ ಮಗನಾದ ಸಿಂದವಂಶದಲ್ಲಿಯೇ ಅತ್ಯಂತ ಪ್ರಸಿದ್ಧಿ ಪಡೆದ ೨ನೆಯ ಆಚುಗಿ ಪಟ್ಟಕ್ಕೆ ಬಂದನು.

**೨ನೆಯ ಆಚುಗಿ ೧೧೧೩-೧೧೨೫**

ಯಲಬುರ್ಗಿಯ ಸಿಂದವಂಶದ ಅರಸರಲ್ಲಿಯೇ ಅತ್ಯಂತ ಪ್ರಸಿದ್ಧನಾದ ಈತನನ್ನು "ಭುವನ ಖ್ಯಾತ, ನೂತನ ಮಾಂದತ[೯೦] ಮಂಡಳಿಕ ಮದಗಜ ಮೃಗೇಂದ್ರ[೯೧] ಭುಜಬಳ, ಮಂಡಳಿಕ ಭೀಮ[೯೨] ರಾಜ್ಯಶ್ರೀ ನಾರೀ ರಮಣ, ಗುಣನಿಳಯ, ಭೂನುತಶಾಸ್ತ್ರ, ಕಳಾವಿಜ್ಞಾನ, ಮಣ್ಡಳಿಕ ತಿಳಕ[೯೩] ಎಂದು ಬಣ್ಣಿಸಲಾಗಿದೆ. ಅಲ್ಲದೆ ಇವನನ್ನು ಚಾಲುಕ್ಯ ತ್ರಿಭುವನಮಲ್ಲದೇವನ ಪಾದಾರಾಧಕನೆಂದು ಬಣ್ಣಿಸಲಾಗಿದೆ.[೯೪]

"ತ್ರಿಭುವನಮಲ್ಲ ಕೇಸರಿ" ಎಂದು ಬಿರುದು ಪಡೆದಿದ್ದ ಇವನು ೬ನೇ ವಿಕ್ರಮಾದಿತ್ಯನ ಬಲಿಷ್ಠ ಸಾಮಂತನಾಗಿದ್ದನು. ವೈರಿ ಅರಸರು ಭೀತಿ ಹೊಂದುವಷ್ಟು ಖ್ಯಾತಿಪಡೆದಿದ್ದನು.[೯೫]

ಇನ್ನೂ ಹಲವಾರು ಶಾಸನಗಳಲ್ಲಿ ಅವನ ವರ್ಣನೆ ಈ ರೀತಿ ಬಂದಿದೆ. ಅವನು ವೈರಿಗಳ ಸೈನ್ಯವೆಂಬ ಹಾವಿಗೆ ಗರುಡನಂತಿದ್ದನು. ಇವನು ಕೀರ್ತಿಯು ಮಂದಾರಪರ್ವತಕ್ಕೆ ಹೊನಲಾಗಿ ಹರಿಯಿತು, ಕಲ್ಪವೃಕ್ಷದೊಂದಿಗೆ ಒಡಹುಟ್ಟಿತು. ಇವನು ಕಾಮನಿಗಿಂತಲೂ ನೂರ್ಮಡಿ ಚೆಲುವು ಹೊಂದಿದ್ದನು.[೯೬] ಪಂಡಿತರಿಂದ ಹೊಗಳಿಸಕೊಳ್ಳಲ್ಪಟ್ಟವರಲ್ಲಿ ಇವನು ಶ್ರೇಷ್ಠನಾಗಿದ್ದನು.[೯೭]

ಧರ್ಮನಿರ್ಮಾಣದಲ್ಲಿ ತೊಡಗಿದ್ದ[೯೮] ಈ ಮಹಾಮಂಡಳೇಶ್ವರನು ತನ್ನ ಸಾಮ್ರಾಟನ ರಕ್ಷಣೆಯ ಪೂರ್ಣ ಹೊಣೆಯನ್ನು ಹೊತ್ತು ಹಲವು ಯುದ್ಧಗಳನ್ನು ಮಾಡಿದನು. ಶೌರ್ಯ ಸಾಹಸವನ್ನು ತೋರಿದನ್ನು ೬ನೆಯ ವಿಕ್ರಮಾದಿತ್ಯನ ಕಾದಲ್ಲಿ ದಕ್ಷಿಣದಿಮದ ಹೊಯ್ಸಳರು, ಪಶ್ಚಿಮದಿಂದ ಗೋವೆಯ ಕದಂಬರು, ಉತ್ತರದಿಂದ ಕರಹಾಡದ ಶಿಲಾಹಾರರು, ಮತ್ತು ಪೂರ್ವದಿಂದ ಉಚ್ಚಂಗಿಯ ಪಾಂಡ್ಯರು ಚಾಲುಕ್ಯ ಸಾಮ್ರಾಜ್ಯದ ಮೇಲೇರಿ ಬರಲು ಪ್ರಯತ್ನಿಸಿದರು. ಅದಕ್ಕೆ ಪ್ರತಿಯಗಿ ಇವನು ಅವರ ಹಲವು ಕೋಟೆಗಳನ್ನು ಹಿಡಿದುಕೊಂಡು. ಅಹಂಕಾರಿಗಳಾದ ನೃಪರನ್ನು ಓಡಿಸಿ ಗರ್ವಿಗಳನ್ನು ಬೆನ್ನಟ್ಟಿ, ವೈರಿ ಅರಸರ ದೇಶದಗಳನ್ನೆಲ್ಲ ತೆಗೆದುಕೊಂಡನು ಪುಣ್ಯಕಾರ್ಯಗಳನ್ನೆಸಗಲು ಮನಸ್ಸು ಹೊಂದಿ ಲಕ್ಷ್ಮಿಯ ಕಾಂತನಾಗಿ ಅಖಿಲ ಸೌಖ್ಯವನ್ನುಂಟು ಮಾಡಿ ಖ್ಯಾತಿಯನ್ನು ಹೊಂದಿದನು. ಇವನು ಮಾಡಿದ ಯುದ್ಧವನ್ನು ತೋರಿದ ಶೌರ್ಯ ಸಾಹಸವನ್ನು ಶಾಸನಗಳು ಈ ರೀತಿ ಉಲ್ಲೇಖಿಸಿವೆ. ವಿಕ್ರಮ ಚಕ್ರವರ್ತಿಯ

ಅಪ್ಪಣೆಯ ಮೇರೆಗೆ ಸಂಗ್ರಾಮ ಕಂಠೀರವನಾದ ಇವನು ಒಳ್ಳೆಯ ತೇಜಸ್ಸನ್ನು ಹೊಂದಿ, ಲಕ್ಷ್ಮಣನನ್ನು ಯುದ್ಧದಲ್ಲಿ ಕೊಂದು, ಶೌರ್ಯೋನ್ನತಿಯಿಂದ ಪಾಂಡ್ಯನನ್ನು ಬೆನ್ನಟ್ಟಿ ಮಲೆಪರನ್ನೂ, ಕೊಂಕಣರನ್ನು ಸೋಲಿಸಿದನು.[೯] ಸಾಹಸ ಸಮುದ್ರನಾದ ಇವನು ಜಗ್ಗುವಿನ ವಂಶವೆಂಬ ಗೋಧಿಯನ್ನು ಬೀಸುವ ಕಲ್ಲಿನಂತಿದ್ದನು. ಕೀಳುಮಾತಿನ, ಮೋಸವಂಚನೆಯ ಸಿಂಗನ ದಶಾಪಟ್ಟದಂತಿದ್ದನು[೧೦] ಸಮುದ್ರವು ಭೋರೆಂದು ಉಕ್ಕೇರಿ ಒಮ್ಮೆಲೆ ಉಪ್ಪಿನಕಟ್ಟೆಯನ್ನು ಕರಗಿಸುವಂತೆ ಇವನು ಉಪ್ಪಿನ ಕಟ್ಟೆಯನ್ನು ಮುತ್ತಿದನು. ಇವನ ದಾಳಿಯಿಂದ ಅದು ಯಮನ ಮಹಾಘೋಷಣೆಗೆ ಸಿಲುಕಿದಂತೆ ಸಿಲುಕಿತು[೧೧]

ಉನ್ಮಾದದಿಂದ ಗೋವೆಯನ್ನು ಪ್ರತಾಪದಿಂದ ಉಪ್ಪಿನ ಕಟ್ಟೆಯನ್ನು ಉರಿಸಿ, ಕಳಿಂಗ, ವಂಗ, ಮೇರುಪರ್ವದಂತಿರುವ ಗೂರ್ಜರು, ಮಾಳವ, ಚೇರ, ಚೋಳ, ಭೂಪರನ್ನೆಲ್ಲ ತನ್ನ ಚಕ್ರವರ್ತಿಗೆ ಬಿಟ್ಟ ಕೆಲಸದ ಒಕ್ಕಲನ್ನಾಗಿ ಮಾಡಿದನು[೧೨,೧೩] ಇವನು ಮಲೆನಾಡನ್ನು ಹಿಡಿದುಕೊಂಡು ಡಾಹಳದ ಅಧಿಪತಿಯನ್ನು ಬೆನ್ನತ್ತಿ ಅತಿಯಾದ ಶಕ್ತಿಸಾಮರ್ಥ್ಯದಿಂದ ಉಪ್ಪಿನ ಕಟ್ಟೆಯನ್ನು ಮುತ್ತಿ, ಒಳ್ಳೆಯ ಶೂರನಾಗಿದ್ದ ಕಡಾರಂಗನನ್ನು ಅತಿಶಯವೆನ್ನುವಂತೆ ಕೊಂದು, ಭೂಮಂಡಲದ ಮೇಲೆ ಶೋಭಿಸಿದನು [೧೪]

ಅಲ್ಲದೇ ಬೆಂದವವೊಂದರ, ಚಾಡವಲ್ಲಿ, ಕಳಿಂಗವಂಗ ವಿಷಯುಗಳನ್ನು ಭೋಜನಪ್ರದೇಶವನ್ನೂ, ಸೈಂಧವ ಸಮನ್ವಿತವನ್ನೂ ನುಂಗಿ ರಕ್ಕಸನಂತೆ ತೇಗಿದನು[೧೫]

ಭೂಮಂಡಲದ ಮೇಲೆ ಸೂರ್ಯನಂತಿರುವ ಮಹಾಶೂರನಾದ ಇವನ ಹೆಸರೇ ಹೆಸರಾಯಿತು. ಸಾಹಸದಿಂದ ನಡುನಡುಗುತ್ತ, ಯುದ್ಧವೇ ವ್ಯಸನವ್ಯಾಗಿ ಸಿಡಿಲನ್ನು ತುಂಡರಿಸುವವನ ಹಾಗೇ ಆತ್ಯಾಶ್ಚರ್ಯದಾಯಕವಾಗಿ ವರ್ತಿಸಿದನು. ಮಾಳವ, ಚೋಳ, ಜಾಹುತಿ, ಹೂಣ, ಭೊಟ್ಟ ಭೂಪಾಳ ಮೊದಲಾದ ಮಂಡಳೇಶ್ವರರನ್ನು ಯುದ್ಧದಲ್ಲಿ ಸೋಲಿಸಿದನು. ಇವನ ಹರಿತವಾದ ಖಡ್ಗದ ಬೆಳಗಿನಲ್ಲಿ ವೈರಿಗಳು ತಮ್ಮ ತಮ್ಮ ಅರಸಿಯರ ಅಲರ್ಗಣ್ಣ ಬೆಳಗನ್ನು ಕಂಡರು[೧೬]

ಇವೆಲ್ಲವುಗಳಿಂದ ಇವನು ಹೊಯ್ಸಳ, ಕದಂಬ, ಪಾಂಡಮಾಳವ, ಕೊಂಕಣ, ಹೂಣ, ಹಳ್ಳಕವಡಿಕೆ, ಚೋಳ, ಕಳಿಂಗ, ವಂಗ, ಗೂರ್ಜರ, ಮಲೆಯ, ಡಾಹಳ, ಜಾಹುತಿ, ಮೊದಲಾದನಾಡುಗಳನ್ನು ಲಕ್ಷ್ಮಣ ಜಗ್ಗು, ಸಿಂಗ, ಕಡಾರಗಂಗ, ಭೊಟ್ಟ, ಭೊಪಾಳ, ಭೋಜ, ಮೊದಲಾದ ಅರಸನ್ನು ಸೋಲಿಸಿದಂತೆ ತಿಳಿದುಬರುತ್ತದೆ. ಇದರಲ್ಲಿಯ ಹೊಯ್ಸಳ ಅರಸು ಕ್ರಿ.ಶ.೧೧೧೦೭ ರಿಂದ ೧೧೩೭ರವರೆಗೆ ಆಳಿದ ವಿಷ್ಣುವರ್ಧನನೆ ಎಂಬುದು ಸ್ಪಷ್ಟ ಇವನು ಉಚ್ಚಂಗಿಯನ್ನು ವಶಪಡಿಸಿಕೊಂಡು ಉತ್ತರದ ಕೃಷ್ಣವೇಣಾದವರೆಗೆ ಏರಿ ಬಂದನೆಂದು ಗದಗಿನ ಒಂದು ಶಾಸನ (G.A. ii, page.302) ಹೇಳಿರುವುದಾದರೂ ಹೊಯ್ಸಳರ ಶಾಸನಗಳು ಹೇಳಿಕೊಳ್ಳುವಷ್ಟರ ಮಟ್ಟಿಗೆ ವಿಷ್ಣುವರ್ಧನನ್ನು ಯಶಸ್ಸು ಪಡೆದಿರಲಿಕ್ಕಿಲ್ಲವೆಂದು ಮೇಲಿನ ಆಧಾರಗಳಿಂದ ಹೇಳಬಹುದಾಗಿದೆ.

ಹೊಯ್ಸಳರ ಈ ದಾಳಿಯು ಇಲ್ಲಿಯ ಅನೇಕ ಮಹಾಮಂಡಳೇಶ್ವರರು ಸ್ವತಂತ್ರರಾಗಲು ಪ್ರೇರೇಪಿಸಿತು. ಅವರಲ್ಲಿ ಗೋವೆಯ ಕದಂಬ ಅರಸು ೨ನೆಯ ಜಯಕೇಶಿಯು ಸ್ವತಂತ್ರನಾದುದರ ಸಂಕೇತವಾಗಿ "ಕೊಂಕಣ ಚಕ್ರವರ್ತಿ" ಎಂಬ ಬಿರುದು ಧರಿಸಿದನು. ಆದರೆ ಅವನ ಆ ಸ್ವಾತಂತ್ರ್ಯ ಬಹಳದಿನ ಉಳಿಯದಂತೆ ತೋರುವುದಿಲ್ಲ. ಹೊಯ್ಸಳರನ್ನು ಸೋಲಿಸಿದ ಮೇಲೆ ಆಚುಗಿ ಗೋವೆಯನ್ನು ಹಿಡಿದುಕೊಂಡು ಉಪ್ಪಿನ ಕಟ್ಟೆಯನ್ನು ಧ್ವಂಸಗೊಳಿಸಿ, ಕೊಂಕಣವನ್ನು ಮುತ್ತಿದನು ೨ನೇ ಜಯಕೇಶಿಯ ಅಧಿಪತ್ಯದಲ್ಲಿಯೇ ಇದ್ದಿರಬಹುದಾದ ಹಲ್ಲಕವಡಿಕೆ (ಕಾವಡೀದ್ವೀಪ)ವನ್ನು ವಶಪಡಿಸಿಕೊಂಡನು.

ಆಚುಗಿಯಿಂದ ಸೋಲಿಸಲ್ಪಟ್ಟ ಪಾಂಡ್ಯ ಅರಸು ಉಚ್ಚಂಗಿಯ ಮಹಾಮಂಡಲೇಶ್ವರ ತ್ರಿಭುವನ ಮಲ್ಲ, ಇವನು ವಿಕ್ರಮಾದಿತ್ಯನ ಆದಿಪತ್ಯದಲ್ಲಿ ನೊಳಂಬವಾಡಿಯನ್ನು ಕ್ರಿ.ಶ.೧೧೯೦ರಿಂದ ೧೧೨೪ರವರೆಗೆ ಆಳಿದನು. ಇವನ ಈ ಮಧ್ಯದಲ್ಲಿ ಹೊಯ್ಸಳರ ದಾಳಿಯ ಸಮಯ ಸಾಧಿಸಿ ಸ್ವತಂತ್ರನಾಗಲು ಪ್ರಯತ್ನಿಸಿರಬೇಕು ಅದುದರಿಂದ ಆಚುಗಿಯು ಆ ನಾಡಿನ ಮೇಲೆ ದಾಳಿಮಾಡಿ ಮತ್ತೆ ಆ ಭಾಗವನ್ನು ವಿಕ್ರಮಾದಿತ್ಯನ ಆಡಳಿತಕ್ಕೆ ಒಳಪಡಿಸಿರಬೇಕು ಇವನು ಸೋಲಿಸಿದ ಭೋಜ ಅರಸು ಕರಹಾಡದ ಶಿಲಾಹಾರ ವಂಶದ ೧ನೆಯ ಭೋಜನೇ ಇರಬೇಕು, ಆದರೆ ಆಚುಗಿಯಿಂದ ಸೋಲಿಸಲ್ಪಟ್ಟ ಜಗ್ಗು, ಲಕ್ಷ್ಮಣ, ಸಿಂಗ ಮೊದಲದವರು ವಿವರ ತಿಳಿಯುವುದಿಲ್ಲ ಆಚುಗಿಗೆ ಮಾಳವರ ಮಾರಿ" ಎಂಬ ಬಿರುದು ಇದ್ದಿತು. ಇದರಿಂದ ಇವನು ಮಾಳವರ ರಾಜ್ಯದಲ್ಲಿಯು ತನ್ನ ಪ್ರಭಾವ ತೋರಿರಬೇಕು ಎಂಬುದು ಸ್ಪಷ್ಟವಾಗುತ್ತದೆ.

ಇವನು ಚೇರ, ಚೋಳ, ವಾಗ, ಕಳಿಂಗ ಮೊದಲಾದವರನ್ನು ಸೋಲಿಸಿದನೆಂಬುದು ಸಾಂಪ್ರದಾಯಿಕ ವರ್ಣನೆಯಾಗಿರಬೇಕು ವಿಕ್ರಮಾದಿತ್ಯನು ನರ್ಮದಾನದಿಯನ್ನು ದಾಟಿ, ನದಿಯ ಆಚೆಯವರೆಗೂ ದಿಗ್ವಿಜಯ ಸಾಧಿಸಿ ಬರುವಲ್ಲಿ ಇವನೂ ಪ್ರಮುಖ ಪಾತ್ರವಹಿಸಿರಬೇಕು ಆ ಸ್ಮರಣಾರ್ಥವಾಗಿ ಇವನೂ ಆ ಎಲ್ಲಾ ಬಿರುದುಗಳನ್ನು ಧರಿಸಿರಬೇಕು.

ಇವನು ಈ ವರೆಗೆ ಸಿಂದರು ವಂಶಪಾರಂಪರ್ಯವಾಗಿ ಆಳುತ್ತ ಬಂದ ಕಿಸುಕಾಡು ೭೦ನ್ನಲ್ಲದೆ ನರೆಂಗಲ್ಲು ೧೨, ಕೆಳವಾಡಿ ೩೦೦ ಮತ್ತು ಬಾಗಡೆಗೆ ೭೦ನ್ನು ತನ್ನ ಆಡಳಿತಕ್ಕೆ ಒಳಪಡಿಸಿಕೊಂಡನು. ಮಹಾಮಂಡಳೇಶ್ವರನೆಂಬ ಬಿರುದು ಹೊಂದಿ ಅಂದಿನ ಮಹಾಮಂಡಳೇಶ್ವರರಲ್ಲಿಯೇ ಪ್ರಮುಖ ಪ್ರಾಮುಖ್ಯತೆಯನ್ನು ಪಡೆದನು.

ಇವನನ್ನು ಶಾಸನಗಳು ನೀತಿಶಾಸ್ತ್ರ ಮಣಿಖಚಿತ ಕನ್ನಡಿಯು ಒಳ್ಳೆಯ ಜನ ಸಮೂಹವನ್ನು ತೃಪ್ತಿಪಡಿಸುವಲ್ಲಿ ಅವರನ್ನು ಕರುಣೆಯಿಂದ ಅಪ್ಪಿಕೊಳ್ಳುವಲ್ಲಿ ಜೀಮೂತವಾಹನನು ಎಲ್ಲಕಲೆಗಳ ಸಮೂಹಗಳಿಗೆ ಆಗರನು ವಿದ್ಯಾಗುಣ, ಪಾಂಡಿತ್ಯ ಪ್ರಿಯತೆ ಎದ್ದು ತೋರುತ್ತದೆ. ಜೊತೆಗೆ ಮಹಾದಾನಿಯು ಆಗಿದ್ದನು. ಮೇಲಿನ ಶಾಸನಗಳಲ್ಲಿ ಹಲವು ಆತನ ದಾನಗುಣವನ್ನು ಎತ್ತಿ ಹೇಳಿವೆ "ಶ್ರೀಮನ್ಮಹಾಮಂಡಳೇಶ್ವರಂ ಆಚರಸಂ ಮುನ್ನ ನಡೆವಕೆಯ್ಯ... ದೇವರಾಸಿ ಪಂಡಿತರಿಗೆ ಧಾರಾಪೂರ್ವಕಂಬಿಟ್ಟನ್[೭] ಇಲ್ಲಿ ಈ ಧರ್ಮವೃತ್ತಿಗೆ ಕೇಡನ್ನು ಬಗೆವ್ವೋವಗೆ ಚಕ್ರವರ್ತಿಯ

ಆಣೆಯನ್ನು ಇಡಲಾಗಿದೆ. ಪನ್ನಸು ಕೀರುವಿಟ್ಟು ಅರುವತ್ತೊಕ್ಕಲು ಮೊದಲಾದವರೆಲ್ಲ ಬಂದು ಈ ಧರ್ಮಮಂ ಸ್ವಧರ್ಮ ಸ್ಥಿತಿಯಂ ಪುನರ್ಬರಣನಂ ಮಾಡಿ ಪ್ರತಿಪಾಳಿಸಿ ನೀವು ನಡೆಯಿಸಿಲ್ಕೆವೇಳ್ಕುಮೆನ್ದು ಆಚರಸನಲ್ಲಿ ಭಿನ್ನಪ ಮಾಡಿಕೊಳ್ಳಲು ಆ ಕೆರಿಗೆ... ಧಾರಾಪೂರ್ವಕ ಮಾಡಿ ದಾನವಿತ್ತನ್ರ್[೯೮] ಇಲ್ಲಿ ಈ ಶಾಸನವನ್ನು "ವಿಶದ ಯಶಶ್ರೀ ಶಾಸನ" ಎಂದು ಕರೆಯಲಾಗಿದೆ. ಇವನು ಅರವತ್ತೊಕ್ಕುಲುಗಳ ಭಿನ್ನಪದ ಮೇರೆಗೆ ಪುಣ್ಯತಿಥಿಯಲ್ಲಿ ವಬ್ಬಯ್ಗೆರೆಯ ಸೋಮೇಶ್ವರನ ದೇವರಿಗಾಗಿ ಮಲ್ಲಿಕಾರ್ಜುನ ಪಂಡಿತ ದೇವಗೆ ದಾನವಿತ್ತನ್ರ್[೯೯]

ಒಂದೆಡೆಗೆ ಕುಶವ ವಂಶದ ಆಚರಸ ಮತ್ತು ಅವನ ಹಿರಿಯ ಮಗ ಹೆಮ್ಮಾಡಿದೇವರ ಪ್ರಸ್ತಾಪ ಬರುತ್ತದೆ.[೧೦೦] ಇದರಿಂದ ಸಿಂದವಂಶದ ಅರಸರಿಗೆ ಕುಶವವಂಶ ಎಂಬ ಇನ್ನೊಂದು ಹೆಸರು ಇದ್ದುದಾಗಿ ತಿಳಿಯುತ್ತದೆ. ಇಲ್ಲಿ ಆಚರಸನು ಹಿರಿಯ ನರೇಗಲ್ಲಿನ ಸೋಬನೇಶ್ವರ ದೇವರಿಗೆ ಸಂಬಂಧಿಸಿದ ಕಿರಿಯ ನರೇಗಲ್ಲಿನ ಮಲ್ಲೇಶ್ವರದೇವರೆಗೆ ೧೨ ಮತ್ತರ ಭೂಮಿ ದಾನವಿತ್ತುದಾಗಿ ಹೇಳಲಾಗಿದೆ.

ಇವನ ಹೆಂಡತಿ ಮಹಾದೇವಿ ಈಕೆಯು ದಯಾವಂತಳು ಭಾಗ್ಯವಂತಳು, ಪ್ರಸನ್ನಚಿತ್ತಳು, ನಯವಂತಳು, ಕುಲವಂತಳು, ಆಗಿದ್ದಳು[೧೦೧] ಈಕೆಯನ್ನು ಆಚರಸನ ಮಹಾಸತಿ, ಶ್ರೇಷ್ಠಪತಿವ್ರತೆ, ನಿರ್ಮಳಚರಿತ್ರೆ, ಮಹಾಪುಣ್ಯವತಿ, ಜಗತ್ತಿನ ಮೇಲಿನ ಮಹಾಮಂಡಳೇಶ್ವರರ ರಾಣಿಯರ ಆಭರಣವೆನ್ನುವ ಹಾಗೆ ಕೀರ್ತಿಯನ್ನು ಪಡೆದವಳು[೧೦೨] ಎಂದು ಬಣ್ಣಿಸಲಾಗಿದೆ.

೨ನೇ ಆಚರಸನಿಗೆ ಮಹಾದೇವಿಯಿಂದ ಪೆರ್ಮನೆಂಬ ಮಗನೂ, ಚಂದಲದೇವಿಯೆಂಬ ಇನ್ನೊಬ್ಬ ಹೆಂಡತಿಯಿಂದ ಚಾವುಂಡನೆಂಬ ಮಗನೂ ಹುಟ್ಟಿದರು.[೧೦೩] ಆದರೆ ಇವರಲ್ಲಿ ಚಾವುಂಡನ ವಿವರ ಮಾತ್ರ ತಿಳಿದು ಬಾರದು.

ಇವನ ಸಾಮಂತ ಜೋಗಗಾವುಂಡನು ರಾಜೂರಗವುರೇಶ್ವರನಿಗೆ ದಾನವಿತ್ತುದಾಗಿ ತಿಳಿದುಬರುತ್ತದೆ[೧೦೪] ಈ ಜೋಗಗಾವುಂಡನು ಕಿಸುಕಾಡು ಎಪ್ಪತ್ತರಲ್ಲಿಯ ಅತಿಶಯವೆನಿಸಿದಾಗರ ರಾಜೂರಲ್ಲಿ ಸುಖಸಂಕಥಾ ವಿನೋದದಿಂದ ಆಳುತ್ತಿದ್ದನು. ಅವನು ಜೋಗೇಶ್ವರದೇವರ ಸುಪ್ರತಿಷ್ಠೆಯನ್ನು ಮಾಡಿಸಿದನು. ಆ ಮನೋಹರ ಮೂರ್ತಿಗೆ ಶ್ರೀ ಗವಿರೇಶ್ವರ ದೇವರೆಂದು ಹೆಸರಿತ್ತನು. ಇಲ್ಲಿ ಇವನನ್ನು ವಂದಿಜನ ತ್ಯಾಗದಕಣಿ ಅನಂತಕಲಿ ಮುಂತಾಗಿ ವರ್ಣಿಸಲಾಗಿದೆ.

ಇದೇ ಕಾಲಕ್ಕೆ ಸಂಬಂಧಿಸಿದ ಕ್ರಿ.ಶ.ಸು. ೧೧೦೦ ನರೇಗಲ್ಲಿನ ಹಿರೇಬಾವಿಯ ಶಾಸನ ಸಿಂದರನ್ನು ಹೆಸರಿಸದೆ. ಚಾಳುಕ್ಯ ತ್ರಿಭುವನಮಲ್ಲ ದೇವರನ್ನು ಮಾತ್ರ ಹೆಸರಿಸಿದೆ. ಅವನ ಮಹಾಸಾಮಂತಾಧಿಪತಿ ಮಹಾಪ್ರಚಂಡನಾಯಕ, ಶ್ರೀ ಮನ್ಮಹಾಪ್ರಧಾನಂ ಬಾಣಸವೆರ್ಗಡೆ ದಂಡನಾಯಕರು ಬೆಳ್ವೊಲ-೩೦೦, ಪುರಿಗೆರೆ-೩೦೦ನ್ನಾಳುತ್ತಿದ್ದರು ಎಂದು ಹೇಳಿದೆ. ನರೇಗಲ್ಲಿನ ಮಾಸಗಾವುಂಡನು ಬಾವಿಯ ಮಠದ ಶ್ರೀಕಲಿ ದೇವಸ್ವಾಮಿದೇವರ ಅಂಗಭೋಗಕ್ಕೆ ದಾನವಿತ್ತುದಾಗಿ ಹೇಳಿದೆ. ಈ ಬಾಣಸವೆಗ್ಗಡೆ ಸಿಂದ ಅರಸ ಆಡಳಿತಕ್ಕೆ ಸಂಬಂಧಿಸಿದೆ ಚಾಲುಕ್ಯ ಚಕ್ರವರ್ತಿಯ ಸ್ವತಂತ್ರ ಮಾಂಡಲಿಕನಾಗಿದ್ದಿರಬಹುದು. ಆದರೂ ಸಿಂಧರಿಗೆ ಸಂಬಂಧಿಸಿದ ನಾಡಿನಲ್ಲಿ ಅವರನ್ನು ಹೆಸರಿಸದೆ ಬಾಣಸವೆಗ್ಗಡೆಯನ್ನು ಮಾತ್ರ ಹೇಳಿರುವುದರ ಔಚಿತ್ಯವೇನೋ ತಿಳಿಯದು.

ಇವನ ಕಾಲದಲ್ಲಿ ಬಮ್ಮನೆಂಬ ಒಬ್ಬ ಅಧಿಕಾರಿಯನ್ನು ಕೋಟೆಕೊಪ್ಪದ ಒಂದು ಶಾಸನ ಉಲ್ಲೇಖಿಸುತ್ತದೆ. ಉದಾರಿಯಾದ ಬಮ್ಮನ ಸಂಪತ್ತಿಗೆ ಅವನ ದಾನಗುಣ ಅಲಂಕಾರ ಪ್ರಾಯವಾಗಿತ್ತಂತೆ ಅವನ ಧಾರ್ಮಿಕ ಚಟುವಟಿಕೆಗಳು ಅವನು ದೇವಾಲಯಗಳಿಗೆ ಇತ್ತ ಸ್ಥಿರದಾನಗಳಿಂದ ವ್ಯಕ್ತವಾಗುತ್ತದೆ. ದಿನದಿಂದ ದಿನಕ್ಕೆ ಪ್ರಸಿದ್ಧನಗುತ್ತ ನಡೆದ ಇವನು ಮಲ್ಲೇಶ್ವರ ದೇವರ ಒಳ್ಳೆಯ ಭಕ್ತನಾಗಿದ್ದ ಇವನು ಆಚುಗಿಗೆ ಒಳ್ಳೆಯ ನಂಬಿಗಸ್ಥ ನಾಗಿದ್ದನು. ಆಚುಗಿಯು ಇವನ ಮೇಲಿನ ಪ್ರೀತಿಯಿಂದ ಮತ್ತು ಇವನು ಗೈದಕಾರ್ಯವನ್ನು ಸ್ಥಿರಗೊಳಿಸುವ ದೃಷ್ಠಿಯಿಂದ ಇವನು ಬೇಡಿದುದನ್ನಿತ್ತನು.

ಇದರಿಂದ ಆಚುಗಿಯು ಒಳ್ಳೆಯ ನಂಬಿಗಸ್ಥರಾದ ಮತ್ತು ವಿಶ್ವಾಸಾರ್ಹರಾದ ಹಲವು ಅಧಿಕಾರಿಗಳನ್ನೊಳಗೊಂಡಿದ್ದನೆಂಬುದು ಸ್ಪಷ್ಟವಾಗುತ್ತದೆ.

ಹೀಗೆ ಇವನು ಸಿಂದವಂಶದ ಅರಸರಲ್ಲಿಯೇ ಅತ್ಯಂತ ಪ್ರಸಿದ್ಧಿ ಪಡೆದು ಕ್ರಿ.ಶ.೧೧೨೪ರ ಸುಮಾರಿನಲ್ಲಿ ಮರಣವಪ್ಪಲು (ಆ ತರುವಾಯ ಇವನ ಶಾಸನ ದೊರೆಯದೆ ಇರುವುದರಿಂದ) ಇವನ ಮಗ ಪೆರ್ಮಾಡಿದೇವ ಪಟ್ಟಕ್ಕೆ ಬಂದನು ಎಂದು ಹೇಳಬಹುದು.

**೧ನೆಯ ಪೆರ್ಮಾಡಿದೇವ ೧೧೨೫-೧೧೪೪**

ಆಚರಸ ಮತ್ತು ಮಹಾದೇವಿಯರಿಗೆ "ಸಕಲ ಜಗಚ್ಚಿನ ಹರ್ಷಂ ಜನಿಸುವಂತ" ೧ನೆ ಪೆರ್ಮಾಡಿದೇವನು ಜನಿಸಿದನಂತೆ[೧೦೫] ಇವನ ಶೌರ್ಯಸಾಹಸ, ಗಣೋನ್ನತಿ, ಯುದ್ಧಸನ್ನಿವೇಶಗಳನ್ನು ಶಾಸನಗಳು ಈ ರೀತಿ ಉಲ್ಲೇಖಿಸಿವೆ.

ಇವನು ಅತ್ಯಂತ ವಿಕ್ರಮನು, ಖೇಚರ ಚಕ್ರವರ್ತಿಯು ಶೂರನು, ಮನೋಹರ ಆಚರಣೆಯುಳ್ಳವನು, ರಣದಿಂದ ಉದ್ರೇಕಗೊಂಡ ಭೀಕರ ಅರಸರ ಸಮೂಹಕ್ಕೆ ಶಿವನಿಂದಲೂ ಅಗ್ಗಳನು, ರಣರಂಗದಲ್ಲಿ ಮಹಾಶೌರ್ಯವನ್ನು ತೋರುವವನು[೧೦೬] ಇವನ ಪ್ರಸಿದ್ಧಿಯೆಂಬ ಬೆಳದಿಂಗಳು ಭೂಮಂಡಲವಲು ಹೊಗಳುವ ಹಾಗೆ ಪಸರಿಸಿತು.[೧೦೭] ಇವನು ತನ್ನ ಭುಜಸಾಮರ್ಥ್ಯದಿಂದ ನಾನಾ ಮಂಡಲಗಳನ್ನು ಪಡೆದುಕೊಂಡನು ನಿಂದಿಸುವ ಅರಸರಲ್ಲಿ ತೀಕ್ಷ್ಣವಾದ ಪ್ರತಾಪವನ್ನು ತೋರಿದನು ಲೋಕದಲ್ಲಿ ಊರ್ಜಿತ ಚಾರಿತ್ರ್ಯವನ್ನು ಹೊಂದಿದನು. ಸಿಂದಕುಳ ಕಮಲ ಮಾರ್ತಾಂಡನಾಗಿ ಮೆರೆದನು ಅವನ ತೀವ್ರ ಪ್ರತಾಪವು ಆಕಾಶದ ಮರೆಯಲ್ಲೆಲ್ಲ ಪಸರಿಸಿತು.[೧೦೮] ಇದು ಪೆರ್ಮಾಡಿದೇವನ ಶೌರ್ಯಗುಣದ ಇಡಿಯಾದ ವರ್ಣನೆ, ಇವುಗಳ ವಿವರ ಇತರ ಶಾಸನಗಳಲ್ಲಿ ಬಂದಿದೆ. ಅವನ್ನು ಹೀಗೆ ಸಂಗ್ರಹಿಸಬಹುದು.

ಇವನು ಕುಲಶೇಖರಾಂಕನ ತಲೆಯನ್ನು ತೆಗೆದುಕೊಂಡನು ಅರ್ಭಟೆಯಿಂದ ಚಟ್ಟಿನನ್ನು ಮುತ್ತಿ ಬಾಳ್ದಲೆಯನ್ನು ಕೊಂಡನು ಜಯಕೇಶಿಯನ್ನು ಬೆದರಿಸಿ ಬೆನ್ನಟ್ಟಿದನು ಪ್ರಚಂಡ ಅರಸರಲ್ಲಿ ಅಗ್ರಗಣ್ಯನೆನಿಸಿದ ಹೊಯ್ಸಳನ ರಾಜ್ಯಪ್ರಿಯನ್ನು ಸೆಳೆದುಕೊಂಡನು[೧೦೯] ಬೆಟ್ಟಿಗನಿದ್ದ ತೊಳ್ಳಿಗನ ಪಟ್ಟಕ್ಕೆ ದಾಯಿಟ್ಟು ದ್ವಾರಸಮುದ್ರಕ್ಕೆ ಏರಿ ಹೋಗಿ, ಬೇಲುಹುರವನ್ನು ಕೊಂಡು, ಹಾವಾಡಿಯ ಘಟ್ಟವನ್ನು ಹಿಡಿದುಕೊಂಡು ಜಗದ್ವಿಖ್ಯಾತಿಯನ್ನು ಪಡೆದನು. ಈ ಬಟ್ಟಿಗನೃಪಾಳನ

ಜೊತೆಗೆ ವಿಟ್ಟಿಗೆ ಬಂದ ಅರಸರನ್ನು ಯುದ್ಧದಲ್ಲಿ ಬೆನ್ನತ್ತಿ ಆನೆಗಳನ್ನು ಹಿಡಿದುಕೊಂಡನು[೧೧೦] ಹಂಚಿನಾಳ ಶಾಸನವು[೧೧೧] ಈ ಯುದ್ಧವರ್ಣನೆಯನ್ನು ಮುಂದುವರೆಸಿ ಪೆರ್ಮಾಡಿಯು ಮಾಡಿದ ಇನ್ನೂ ಹಲವು ಯುದ್ಧಗಳನ್ನು ಉಲ್ಲೇಖಿಸುತ್ತದೆ. ಆದರೆ ಅವುಗಳ ವಿವರ ಮಾತ್ರ ತಿಳಿಯುವುದಿಲ್ಲ.

ಒಟ್ಟಾರೆ ೨ನೆಯ ಆಚುಗೆಯ ಕಾಲದ ಸನ್ನಿವೇಶವೇ ಇವನ ಕಾಲದಲ್ಲಿಯೂ ಮುಂದುವರೆದಿತ್ತೆಂದು ತೋರುವುದು. ಈ ಹಿಂದೆ ಆಚುಗಿಯು ಗೋವೆಯ ಅರಸು ಜಯಕೇಶಿಯನ್ನು ಸೋಲಿಸಿದುದನ್ನು ನೋಡಲಾಗಿದೆ. ಇದಾದ ಸ್ವಲ್ಪಕಾಲದಲ್ಲಿಯೇ ಚಾಲುಕ್ಯ ವಿಕ್ರಮ ಮತ್ತು ಸಿಂದ ಆಚುಗೆಯರು ಮರಣವನ್ನಪ್ಪಿದರು ಇದರಿಂದ ಜಯಕೇಶಿಯ ಮತ್ತು ಒಮ್ಮೆ ಸ್ವತಂತ್ರನಾಗಲು ಪ್ರಯತ್ನಿಸಿದಂತೆ ತೋರುತ್ತದೆ. ಚಾಲುಕ್ಯ ಅರಸು ೩ನೇ ಸೋಮೇಶ್ವರನು ತನ್ನ ಸಾಮಂತನಾದ ೧ನೇ ಪೆರ್ಮಾಡಿಯನ್ನು ಅವನ ಮೇಲೆ ಕಳಿಸಿ ಅವನನ್ನು ಬಗ್ಗು ಬಡಿಯುವಂತೆ ಮಾಡಿದನು ಪೆರ್ಮಾಡಿಯು ಸಾಧಿಸಿದ ವಿಜಯದಲ್ಲಿ ಪ್ರಸಿದ್ಧವಾದುದು ಕರ್ನಾಟಕದ ಅರಸರಲ್ಲಿ ಔನತ್ಯವನ್ನು ಪಡೆದ ವಿಷ್ಣವರ್ಧನನನ್ನು ಸೋಲಿಸಿದುದು. ಇವನು ಹೊಯ್ಸಳ ಅರಸು ವಿಷ್ಣುವರ್ಧನ ನನ್ನು ತುಂಗಭದ್ರೆಯ ಆಚೆಗೆ ದೂಡಿದುದು ಮಾತ್ರವಲ್ಲ ಅವನ ರಾಜಧಾನಿಯಾದ ದ್ವಾರಸಮುದ್ರದವರೆಗೂ ಏರಿ ಹೋಗಿ ಬೇಳಾಪುರವನ್ನು ಹಿಡಿದುಕೊಂಡನು. ಒಬ್ಬ ಸಾಮಂತನು ತನ್ನ ಸಾಮ್ರಾಟನ ರಕ್ಷಣೆಗಾಗಿ ಮತ್ತೊಬ್ಬ ಸಾಮ್ರಾಟನ ಮೇಲೆ ಏರಿ ಹೋಗಿ ಸಾಧಿಸಿರುವ ವಿಜಯವು ಮೈನವಿರೇಳಿಸುವಂತದ್ದು, ಇಲ್ಲಿ ಇವನ ಆಚುಗಿಗಿಂತ ಒಂದು ಹೆಜ್ಜೆ ಮುಂದೆ ಹೋಗಿರುವುದನ್ನು ಕಾಬಹುದಾಗಿದೆ. ಇದರಿಂದ ಚಾಲುಕ್ಯ ಸಾಮ್ರಾಜ್ಯದ ರಕ್ಷಣೆಯ ಸಂಪೂರ್ಣ ಭಾರ ಇವನ ಮೇಲಿದ್ದಿತು ಎಂಬುದು ಸ್ಪಷ್ಟವಾಗುತ್ತದೆ.

ಇವನು ಸೋಲಿಸಿದ ಕುಲಶೇಖರಾಂಕ, ಚಟ್ಟಿ ಮೊದಲಾದವರ ವಿವರ ಮಾತ್ರ ತಿಳಿಯುವುದಿಲ್ಲ.

ಇವುಗಳಿಂದ ಇವನು "ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮ...ಮಂಡಳೇಶ್ವರಂ ಉದಾರವೀರ ಲಕ್ಷ್ಮೀಶ್ವರ ಸಿರಿದ ಕೂಳ ಕಮಳ ಮಾರ್ತಾಂಡ ಮಂಡಳಿಕ ಕುಸುಮ ಕೋದಂಡಕಳ ಹಯಾರೂಢ ಪ್ರೌಢಶಿಕ್ಷಾವಿಚುಕ್ಷಣ ಪರಿಪೂರ್ಣ ಶುಭಲಕ್ಷಣ ಕವಿಗಮರೆವಾದಿ ವಾಗ್ಮಿಜ ಸಂಸ್ತೂಯಮಾನ ಗುಣಗಣ ವಿಧಾನ ಶಿವ... ಸಮ ಕರ್ಣನ ಕರ್ಣಪೂರ ಸಕಳ ವಿದ್ವಜ್ಜನಾಧಾರ ಅಪಾರ ಪರಿಹಿತಾಚಾರ್ಯ ಅಸಾಯ ಶೌರ್ಯ ನಾನಾ ನಯೋಪಾಯ ನಿಪುಣ ಚಾಣಕ್ಯ ಅಚಳಿತವಾಕ್ಯ ಶಸ್ತ್ರ ಶಾಸ್ತ್ರಾದಿ ಸತುಕಳೌಪು, ಪ್ರವೀಣ, ರಣಾಂಗಣ ಧುರೀಣ, ಭೋಗೋಪಭೋಗ ಸಂಕ್ರಂದನ, ಅನೂನದಾನ ರವಿನಂದನ ಅನೇಕ ವಿಧ ದುರ್ಗತ್ರಣೇತ್ರಿ, ಅಧಿರಾಜ ಚರಿತ್ರೆ, ಶರಣಾಗತ ವಜ್ರಪಂಜರ, ಮಣ್ಡಳಿಕ ದಿಕ್ಕುಂಜರ, ಕಾವ್ಯಗೀತರಸಾನುಭವ ವಿನೋಧ, ಶ್ರೀ ಶಂಕರದೇವಲಬ್ಧ ವರಪ್ರಸಾದ," ಎಂಬ ಬಿರುದು ಧರಿಸಿ ಮೆರೆದನು. ಇದರಿಂದ ಇವನ ವ್ಯಕ್ತಿತ್ವದ ವಿವಿಧ ಮುಖಗಳ ದರ್ಶನವಾಗುತ್ತದೆ.

ಇವನು ಕಿಸುಕಾಡೆಪ್ಪತ್ತನ್ನೂ, ಕೆಳವಾಡಿಮುನ್ನೂರನ್ನೂ ಬಾಗಡಗೆ ಎಪ್ಪತ್ತನ್ನೂ, ನರೆಯಂಗಲ್ಲು ಪನ್ನೆರಡನ್ನೂ "ದುಷ್ಟನಿಗ್ರಹ ವಿಶಿಷ್ಟ ಪ್ರತಿಪಾಳನೆಯಿಂದರಂಬರಿಗೆಯ ನೆಲೆವಿಡಿನೊಳ ಸುಖಸಂಕಥಾ ವಿನೋದದಿಂದ ರಾಜ್ಯಂಗೆಯ್ಯುತ್ತಿದ್ದ" ನೆಂದಿದೆ ಇದರಿಂದ ಇವನ ಕಾಲದಲ್ಲಿ ರಾಜಧಾನಿಯಾಗಿದ್ದ ಪಟ್ಟದಕಲ್ಲು ಎಲಂಬರ್ಗೆಗೆ ಸ್ಥಳಾಂತರಿಸಲ್ಪದಟ್ಟಿತು.[೧೧೨] ತೋರುತ್ತದೆ. ಕೂಕನೂರು ಮೂವತ್ತು ಇವನ ಆಡಳಿತದಲ್ಲಿ ಇದ್ದುದಾಗಿ ಕಲ್ಲೂರ ಶಾಸನ ಹೇಳಿದೆ[೧೧೩]

ಇವನ ಆಳ್ವಿಕೆಯು ಆಂತರಿಕ ಶಾಂತಿ ಮತ್ತು ಸಂತೋಷಗಳ ನೆಲೆವೀಡಾಗಿದ್ದಿತು. ಇವನ ಕಾಲದಲ್ಲಿ ಒಕ್ಕಲುತನ ಸಾಕಷ್ಟು ಅಭಿವೃದ್ಧಿ ಹೊಂದಿತು, ನರೇಗಲ್ಲು ಹಣ್ಣುಗಳ ಬೆಳೆಗೆ ಪ್ರಸಿದ್ಧವಾಗಿದ್ದಿತು ಅಲ್ಲಿ ಹೂದೋಟ, ತಂಪಾದ ಕೊಳ, ಬತ್ತದ ಗದ್ದೆ ಮೊದಲಾದವು ಶೋಭೆ ಪಡೆದಿದ್ದವು. ಇವನ ಕಾಲದಲ್ಲಿ ಹಸ್ತಕೌಶಲ ಮತ್ತು ವ್ಯಾಪಾರಿ ಜನ ಸಮೂಹವು ಕಿರುನರೆಯಂಗಲ್ಲಿನಂಥ ಸಣ್ಣ ಹಳ್ಳಿಗಳಲ್ಲಿಯೂ ನೆಲೆವಡೆದಿದ್ದವು.

ಇವನು ತನ್ನ ವಂಶಕ್ಕೆ ತಿಲಕಪ್ರಾಯನಂತಿದ್ದ ಲಕ್ಷ್ಮಿಯ ನಿವಾಸನು ವಿದ್ಯಾನಿಧಿಯು, ಭೂಲೋಕಮಲ್ಲನು ಆಗಿದ್ದನು.[೧೧೪] ಅಲ್ಲದೆ ಇವನು ಪಂಡಿತನು ವಿದ್ವಾಂಸರ ಆಧಾರನು ಒಳ್ಳೆಯ ಶೌರ್ಯದಿಂದ ಬಲಿಷ್ಠನಾದ ರಾಜ್ಯವನ್ನು ಹೊಂದಿದವನು ಒಳ್ಳೆಯ ಕೀರ್ತಿಯನ್ನು ಪಡೆದವನು ಪ್ರತಾಪಗುಣದಿಂದ ಕೂಡಿದ ಚರಿತ್ರೆಯನ್ನು ಚಿತ್ತವನ್ನು ಒಳಗೊಂಡವನು ಉತ್ತಮ ರೂಪವನ್ನು ಆಗಿದ್ದನು.[೧೧೫] ಇವನು ಸಜ್ಜನರಿಂದ ನುತಿಸಲ್ಪಟ್ಟವನಾಗಿ ಅಭಿನವ ಬೋಜನೆನ್ನಿಸಿದ್ದನು, ಸುಂದರ ಕಾಮನೆನ್ನಿಸಿದ್ದನು (ಪಟ್ಟದಕಲ್ಲು ಗುಡಿಗಳು, ಎ.ಎಂ.ಅಣ್ಣಿಗೇರಿ, ಪುಟ-೮೯) ಇವನಿಗೆ ಕಾವ್ಯ ಮತ್ತು ಸಂಗೀತಗಳನ್ನು ಕೇಳುವಲ್ಲಿ ಒಳ್ಳೆಯ ಅಭಿರುಚಿ ಇದ್ದಿತು. ಅದಕ್ಕಾಗಿ ಅವನು ಹಲವು ಸಭೆಗಳನ್ನು ನೆರೆವೇರಿಸುತ್ತಿದ್ದನು. ಆದರಿಂದ ಹಲವಾರು ಹೊಸಕಾವ್ಯಗಳು ರಾಜಸಭೆಯಲ್ಲಿ ಬೆಳಕು ಕಾಣುವ ಅವಕಾಶ ಪಡೆಯುತ್ತಿದ್ದವು. ಇವನು ಆನಂದವನ್ನು ಪಡೆವಲ್ಲಿ ಶಂಕರನಂದನನ್ನು ಸ್ವಾತಂತ್ರ್ಯವನ್ನು ಬೋಗಿಸುವಲ್ಲಿ ರವಿನಂದನನ್ನು ಆಗಿದ್ದನು ಇವನು ತನ್ನ ಪಾಂಡಿತ್ಯ ಪ್ರೀತಿಗಾಗಿ ೨ನೆಯ ಭೋಜ ಎಂಬ ಅಭಿದೇಯವನ್ನು ಧರಿಸಿದ್ದನು.[೧೧೬] ಇವನ ಕಾಲ ಧಾರ್ಮಿಕ ಚಟುವಟಿಕೆಗಳ ಆಗರವು ಆಗಿದೆ. ಇವನ ಗೋಣಾವಳಿಗಳನ್ನು ದಾನಧರ್ಮಗಳನ್ನು ಶಾಸನಗಳು ಹಲವಂದದಿಂದ ಬಣ್ಣಿಸಿವೆ. ಅವುಗಳಲ್ಲಿ ಕೆಲವನ್ನು ಈ ರೀತಿ ಸಂಗ್ರಹಿಸಬಹುದು. ಇವನು ಒಳ್ಳೆಯ ಗುಣ ನಿಧಿಯಾಗಿದ್ದನು. ಶೈವ ಸಂಪ್ರದಾಯ ಹೊಗಳಿಕೆಯನ್ನು ಕಿವಿಗೆ ಆಭರಣವನ್ನಾಗಿ ಮಾಡಿಕೊಂಡಿದ್ದನು ಪಂಡಿತರಿಗೆ ಮತ್ತು ಧಾರ್ಮಿಕ ವಿದಿ ನೇರವೇರಿಸುವವರಿಗೆ ಸಹಾಯ ಮಾಡುತ್ತಿದ್ದನು.

ಅಲ್ಲದೆ ತಾನು ಶುಚಿತ್ವಕ್ಕೆ ಹತ್ತಿರವಾದ ಸ್ನಾನ, ದೇವಾರ್ಚನೆ, ಹೋಮ, ಮಹಾದಾನೆ, ಬ್ರತಸಮೂಹ, ಗುರುಮುನಿ ಪೂಜಾದಿ, ಪುಣ್ಯಕ್ರಿಯಾ ಸಮೂಹದಿಂದ ಧರ್ಮ ಅರ್ಥಶಾಸ್ತ್ರ ಶೃತಿಯಿಂದ ಅಖಿಳ ದಿವ್ಯಾನ್ನ ದಾನಗಳಿಂದ ಸಫಳವೆನ್ನುವಹಾಗೆ ದಿನಗಳನ್ನು ಕಳೆಯುತ್ತಿದ್ದನು ಒಳ್ಳೆಯ ಆನಂದದಿಂದ ರಾಜಶ್ರೀ ಲಲನೆಯರನ್ನೂಡಗುಡಿ ಸುಖದಿಂದ ನಲಿಯುತ್ತ ಇದ್ದನು.[೧೧೭]

ಇವನು ನರೇಗಲ್ಲಿನ ದಕ್ಷಿಣ ಭಾಗಕ್ಕೆ ಒಂದು ದೇವಾಲಯವನ್ನು ಕಟ್ಟಿಸಿದನು. ಪುರಾತನ ಧರ್ಮವನ್ನು ಪ್ರತಿಪಾದಿಸಲು ದಾನವನ್ನಿತ್ತನು[೧೧೮] ನರೇಗಲ್ಲ ಮೂಲ ಸ್ಥಾನದೇವರಿಗೆ ದೇಗುಲವನ್ನು ಮಾಡಿಸಿ ದೇವರ ರಂಗಭೋಗಕ್ಕೆ ದತ್ತಿ ಬಿಟ್ಟುದಾಗಿ ತಿಳಿಯುತ್ತದೆ.[೧೧೯]

ಇವನ ಈ ಧಾರ್ಮಿಕ ಚಟುವಟಿಕೆಗಳಿಗೆ ಪೋಷಕರಾಗಿ ನಿಂತವರು ಗುರುಗಳಾದ ಕಳೇಶ್ವರ ಸೈದ್ಧಾಂತಿಕ ರಾಜಗುರುಗಳು ಅವರನ್ನು "ಸಿಂದುನ್ವಯದ ಶಿಕ್ಷಾಧೀಕ್ಷಾಚಾರ್ಯಂ" ಎಂದು ಕರೆಯಲಾಗಿದೆ. [೧೨೦] ಇವನ ಕಾಲದಲ್ಲಿ ಹಲವು ಅಧಿಕಾರಿಗಳು ದೇವಾಲಯಗಳನ್ನು ಕಟ್ಟಿಸಿರುವುದರೊಂದಿಗೆ ದಾನ ದತ್ತಿಗಳನ್ನು ಇತ್ತಿದ್ದಾರೆ ಅವರಲ್ಲಿ ಮಹಾಮಂಡಳೇಶ್ವರ ಬಮ್ಮರಸ ನರೇಗಲ್ಲನಲ್ಲಿ ಶ್ರೀಬ್ರಹ್ಮೇಶ್ವರನನ್ನು ಮಾಡಿಸಿ ದೇವರಂಗ ಭೋಗಕ್ಕೆ ವಿಗ್ರೇಶ್ವರ ಪಂಡಿತರಿಗೆ ಧಾರಾಪೂರ್ವಕ ಭೂಮಿ ಬಿಟ್ಟುದಾಗಿ ತಿಳಿಯುತ್ತಿದೆ.[೧೨೧] ಹನ್ನಸಿನ ಒಳದೊಳಗೆ ತ್ರಿಲೋಚನ ಪಂಡಿತದೇವರಿಗೆ ದಾನವಿತ್ತುದಾಗಿ ಹೇಳಲಾಗಿದೆ .[೧೨೨]

ಹೀಗೆ ಈ ಕಾಲ ಶಾಂತಿಸಮೃದ್ಧಿಯಿಂದ ಕೂಡಿತ್ತು ಎಂಬುದಕ್ಕೆ ಸಂಕೇತವಾಗಿ ಹಲವು ಹತ್ತು ಧಾರ್ಮಿಕ ಚಟುವಟಿಕೆಗಳು ಕಂಡುಬರುತ್ತಿವೆ.

ಕ್ರಿ.ಶ.೧೧೪೪ರ ತರುವಾಯ ಇವನ ಶಾಪನಗಳು ದೊರೆಯುವದಿಲ್ಲವಾದ್ದರಿಂದ ಇವನು ಕ್ರಿ.ಶ.೧೧೪೪ರ ಸುಮಾರಿನಲ್ಲಿ ಮರಣವನ್ನಪಿರಬೇಕು ಇವನ ತರುವಾಯ. ಇವನಿಗೆ ಮಕ್ಕಳಿಲ್ಲವಾದ್ದರಿಂದ ಇವನ ತಮ್ಮ ಚಾವುಂಡ ಪಟ್ಟಕ್ಕೆ ಬಂದನು.

**೨ನೇ ಚಾವುಂಡ ೧೧೪೪-೧೧೬೯**

ಆಚರಸ ಮತ್ತು ಚಂದಲ ದೇವಿಯರ ಮಗ ೨ನೆಯ ಚಾವುಂಡ ದೊರೆತಿರುವ ಇವನ ಶಾಸನಗಳಲ್ಲಿ ಮೊದಲನೆಯದು ಕ್ರಿ.ಶ.೧೧೫೧ರಲ್ಲಿ ದೊರೆತಿರುವ ಇವನ ಶಾಸನಗಳಲ್ಲಿ ಮೊದಲನೆಯದು. ಕ್ರಿ.ಶ.೧೧೫೧ರ ಕಾಲದ್ದು[೧೨೩] ಆದ್ದರಿಂದ ಇವನು ಕ್ರಿ.ಶ.೧೧೪೪ರಿಮದ ೧೧೫೧ರ ಮಧ್ಯದಲ್ಲಿ ಪಟ್ಟಕ್ಕೆ ಬಂದಿರಬೇಕು.

ಉದಾರನಾದ, ಗುಣಾದಾರನಾಥ ವೀರ ಚಾವುಂಡನೃಪನು, ನೃಪರ ಪಾವನ ಗುಣಗಳಾದ ಶೌರ್ಯ ಮತ್ತು ತ್ಯಾಗಗಳೆರಡರಿಂದ ಅರಸರ ತಿಲಕನೆನ್ನಿಸಿದ್ದನಂತೆ[೧೨೪] ಇವನಿಂದ ಪೆರ್ಮಾಡಿ ದೇವನ ನಿರ್ಮಲವಾದ ಕೀರ್ತಿಯು ಎಂಟೂ ದಿಕ್ಕುಗಳಲ್ಲಿಯೂ ಪ್ರಕಾಶಿಸುವಂತಾಯಿತು. ಇವನು ಧರ್ಮವಂತನು ಭೀಕರಯುದ್ಧಗಳಲ್ಲಿ ನಿಪುಣನು ಆನಂದ ಮೂರ್ತಿಯು ಆಗಿದ್ದನು[೧೨೫] ಒಳ್ಳೆಯ ಶೌರ್ಯ ಸಾಹಸಗಳಿಂದ ಮಂಡಳಿಕ ಮಂಡನನನ್ನಿಸಿದ್ದನು.[೧೨೬] ಇವನು ಸಿಂದಕುಲಕ್ಕೆ ಸೂರ್ಯನೆನಿಸಿ ಲಾವಣ್ಯಯುತ ಸ್ತ್ರೀಯರಿಗೆ ಕಾಮನೆನಿಸಿ, ಭೀಕರ ಶತ್ರುಗಳೆಂಬ ಸೊಕ್ಕೇರಿದ ಆನೆಗಳಿಗೆ ಸಿಂಹನೆನಿಸಿ ರಾಣೀಮುಖ ಮಣ್ಡಳಿಕ ಚೂಡಾಮಣಿ ಎನಿಸಿ ಪ್ರಸಿದ್ಧಿ ಪಡೆದನು.[೧೨೭]

ಇವನು ನೂರ್ಮಡಿ ತೈಲಪನ ಪಾದಪದ್ಮ ಸೇವಾ ತತ್ಪರ ಭೃಂಗ ಎಂದು ಶಾಸನ[೧೨೭] ತೈಲಪನ ಮಹಾಮಂಡಳೇಶ್ವರನಾಗಿದ್ದನೆಂಬುದನು ಸ್ಪಷ್ಟ.

ಇವನ ಗುಣಾವಳಿಗಳನ್ನು ಶೌರ್ಯಸಾಹಸವನ್ನು ಕುರಿತು ಶಾಸನಗಳು ಈ ರೀತಿ ಬಣ್ಣಿಸಿವೆ. ಇವನು ಭೀಕರ ವೈರಿಗಳೆಂಬ ಪರ್ವತಗಳಿಗೆ ವಜ್ರಾಯುಧದಂತಿದ್ದನು. ಸಿಂದ

ಕುಲವೆಂಬ ಮಂಗಲಯುಕ್ತ ರಾಜಮನೆತನಕ್ಕೆ ಅರ್ಜುನ ನೆನ್ನಿಸಿದ್ದನು[೨೯] ಅರಸನ ಭುಜಬಳ ಭೀಮನಂತಿದ್ದ ಇವನು ಅತ್ಯಂತ ಉಗ್ರನೂ ಬಲದ ವಾಸಸ್ಥಳನೂ ಪಾಂಡಿತ್ಯದ ನೆಲೆಯೂ, ಮಾಂಡಲಿಕ ಅಗ್ರಗಣಿಯೂ, ಉದಾತ್ತತೆಯ ವಾಸಸ್ಥಳನೂ, ಮಂಡಳಿಕ ಮುಖದರ್ಪಣನೂ ಆಗಿದ್ದನು.[೩೦]

ಇವನು ಗೂರ್ಜರ, ಆಂಧ್ರ, ತಮಿಳು, ಮಗದ, ನೇಪಾಳ, ಭೂಪಾಳ ಅರಸರಿಂದ ಹೊಗಳಿಸಿಕೊಳ್ಳಲ್ಪಟ್ಟಿದ್ದನು. ಒಳ್ಳೆಯ ತೇಜಸ್ವಿಯೂ ಬಲಯುತನೂ, ಜಯಲಕ್ಷ್ಮಿಯ ನರ್ತನದ ನಾಟ್ಯರಂಗನೂ ಯುದ್ಧಭೂಮಿಯಲ್ಲಿ ಜಯಪರನೂ, ವೈರಿಗಳ ಗರ್ವವನ್ನು ಭಗ್ನಗೊಳಿಸಿದವನು ಆಗಿದ್ದನು. ಆನಂತರ ವೈರಿ ಅರಸರನ್ನು ಬೆದರಿಸಿ ಬೆನ್ನಟ್ಟಿ ಅವರ ಸಂಪತ್ತನ್ನೂ ವಸ್ತು ವಾಹನಗಳನ್ನು ಸ್ತ್ರೀ ಸಮೂಹವನ್ನು ಗುಡಿಗುಂಡಾರಗಳನ್ನು ನಾಡನ್ನು ತನ್ನ ಅಂಕಿತದಲ್ಲಿಟ್ಟುಕೊಂಡಿದ್ದನು.[೩೧]

ಬ್ರಹ್ಮನು ಇವನನ್ನು ನೋಡಿ ಅತಿಭಕ್ತನಾದಂತೆ ಕಾಮನು ಯುದ್ಧಕ್ಕೆ ನಿಂತು ಸೋತುಹೋದಂತೆ ಕುಬೇರನು ಪ್ರೀತಿಯಿಂದ ಇವನಿಗೆ ಸಂಪತ್ತನ್ನು ದಾರೆ ಎರೆದುಕೊಟ್ಟನಂತೆ ಹೀಗೆ ಚಾವುಂಡ ನೃಪೇಶ್ವರನು ಭೂಮಂಡಲಕ್ಕೆ ದೇವನೆನಿಸಿದ್ದನಂತೆ[೩೨] ವೈರಿಭೂಪಾಲರು ಇವನನ್ನು ತಡವಿದರೆ ಇವನ ಔದಾರ್ಯದ ಜಾಲದ ತೊಡರಿನಲ್ಲಾದರು ಬೀಳಬೇಕು. ಇಲ್ಲವೆ ಸುರಯುವತೀ ಜನದ ತೋಳ್ಗಳ ತೊಡರಿನೆಲ್ಲಾದರು ಬೀಳಬೇಕಾದಿದ್ದಿತಂತೆ 'ಇವನ ಕೋಪಾಗ್ನಿಯಿಂದ ರೊಚ್ಚಿಗೆದ್ದು ವಿಗ್ರಹ ದೇಶವು ಬೇಗುವಂತೆ ವೈರಿ ಅರಸರನ್ನು ನಾಶಗೊಳಿಸುವನು ಎಂದು ಅಲ್ಲಿ ಹೇಳಲಾಗಿದೆ.[೩೩]

ಮುಂದುವರೆದು ಇವನನ್ನು ಇನ್ನೂ ಈ ರೀತಿ ಬಣ್ಣಿಸಲಾಗಿದೆ. ಸಿಂದಕುಳ ಶ್ರೇಷ್ಠನಾದ ಇವನು ರೂಪದಲ್ಲಿ ಕಾಮನು ಸುಂದರ ಗುಣ ಸಮೂಹವನ್ನು ವೈರಿ ಅರಸರಿಂದ ಹೊಗಳಿಸಿಕೊಳ್ಳಲ್ಪಟ್ಟವನು ಕಂದುಕ ಮೊದಲಾದ ಆಟಗಳಲ್ಲಿ ಪರಿಗಣಿತನು ಚಂದಲ ದೇವಿಯ ಪ್ರೀತಿಯ ಮಗನಿಗಿಂತ ಉಜ್ವಲ ಕೀರ್ತಿವಂತನು ಅಂಜುಬುರಕರನ್ನೂ, ಶರಣುಬಂದವರನ್ನೂ, ಭಯ ಹೊಂದಿದವರನ್ನೂ, ಭೂಮಂಡಲದಲ್ಲಿ ಮೇಲಿಂದ ಮೇಲೆ ಜನ್ಮವೆತ್ತಿ ಬರುವವರನ್ನು ಬೆನ್ನಟ್ಟಿ ಕೊಲ್ಲಲು ಹೇಸಿ, ಒಳ್ಳೆಯ ವೀರರನ್ನು ಕೊಂದು, ಮೀಸೆಗಳನ್ನು ಹುರಿಗೊಳಿಸಿದನು. ಗಂಡರ ಪೆಂಡೆಯವನ್ನು ಧರಿಸಿದನು.[೩೪] ಇದರಿಂದ ಇವನು ಚಾಲುಕ್ಯ ಅರಸನ ರಕ್ಷಣೆಯ ಪೂರ್ಣಭಾರ ಹೊತ್ತಿದ್ದುದು ವ್ಯಕ್ತವಾಗುತ್ತಿದೆ.

ಇವನು ಮಾಡಿದ ಯುದ್ಧಗಳನ್ನು ಈ ರೀತಿ ವಿವರಿಸಲಾಗಿದೆ. ಯುದ್ಧಾಕಾಂಕ್ಷಿಯಾದ ಹೊಯ್ಸಳ ಅರಸನು ಸೈನ್ಯ ಸಮೂಹವನ್ನೊಳಗೊಂಡು ವಿಕ್ರಮದಿಂದ ತಾಗಲು ಪರಾಕ್ರಮಿಯಾದ ಸಿಂದಕುಲ ಸಮುದ್ರಕ್ಕೆ ಚಂದನಂತಿರುವ ಚಾವುಂಡನು ಏರಿ ಹೋಗಿ ಅವನನ್ನು ಎದುರಿಸಿದನು. ಉಗ್ರ ಆನೆಗಳ ಸಮೂಹವನ್ನೊಳಗೊಂಡು ಪ್ರತಾಪವ್ರತವನ್ನು ಹಿಡಿದ ಚತುರ್ಬಲವನ್ನೂ ಹೊಂದಿ ತನ್ನ ಭುಜಬಲದ ಅತಿಶಯತೆಯಿಂದ ಪಾಂಡ್ಯ ಅರಸನು ಯುದೊಥ

ವಿಜಯಾಕಾಂಕ್ಷಿಯಾಗಿ ಬಂದು ಆರ್ಭಟೆಯಿಂದ ತಂಗಲು ಚಾವುಂಡಭೂಪಾಲನು ಏಕಾಂಗವೆ ಆ ಸೈನ್ಯವನ್ನು ಎದುರಿಸಿ ಗೆದ್ದನು, ಅದನ್ನು ನೋಡಿ ಸೋತ ಕಾಮನ್ರಿಪಾಳನು ಉಟ್ಟುದನ್ನು ಬಿಟ್ಟು ಬೆಂಗೊಟ್ಟು ಕಳ್ಳಮಾರ್ಗದಿಂದ ಒಡಿದನು.[೧೩೫]

ಇದರಿಂದ ಇವನ ಕಾಲದಲ್ಲಿಯೂ ಹೊಯ್ಸಳರ ಪಾಂಡ್ಯರ ದಾಳಿ ಮುಂದುವರಿದಿದ್ದಂತೆ ತೋರುತ್ತದೆ. ೨ನೇ ಆಚುಗಿ ೧ನೆಯ ಪೆರ್ಮಾಡಿಯರು ಹೊಯ್ಸಳ ಚಾಲುಕ್ಯರ ನಡುವಿನ ಹೋರಾಟದಲ್ಲಿ ವಿಶೇಷ ಪಾತ್ರವಹಿಸಿರುವುದನ್ನು ಈಗಾಗಲೇ ನೋಡಲಾಗಿದೆ. ಬಹುಶಃ ಹೊಯ್ಸಳರ ಸಾಮ್ರಾಜ್ಯ ವಿಸ್ತಾರದ ಇನ್ನೂ ನಿಂತಿದ್ದಂತೆ, ತೋರುವುದಿಲ್ಲ. ವಿಷ್ಣುವರ್ಧನನ ಸೋಲಿನ ಸೇಡನ್ನು ತೀರಿಸಿಕೊಳ್ಳಲು ಅವನ ಮಗ ೧ನೆಯ ನರಸಿಂಹ ಪ್ರಯತ್ನಿಸಿರಬೇಕು. ಆದರೆ ಈ ಹಿಂದೆ ೨ನೆಯ ಆಚುಗಿ ೨ನೆಯ ಚಾವುಂಡರಾಯರು ಆ ಪ್ರಯತ್ನಕ್ಕೆ ಆತಂಕ ಒಡ್ಡಿದಂತೆ ೨ನೆಯ ಚಾವುಂಡನೂ ಸಮರ್ಥ ರೀತಿಯಿಂದ ಆ ದಾಳಿಯನ್ನು ಹತ್ತಿಕ್ಕಿದನು.

ಅದೇ ರೀತಿ ಪಾಂಡ್ವ ಅರಸು ಕಾಮನ್ರಿಪಾಳನು ೨ನೆಯ ಚಾವುಂಡನೃಪಾಳನ ಶೌರ್ಯ ಸಾಹಸಕ್ಕೆ ತುತ್ತಾಗಿರಬೇಕು. ಆದರೆ ಇವನು ಇತರ ಅರಸರೊಂದಿಗೆ ಹೋರಾಡಿದ ಬಗೆಗೆ ಆಧಾರಗಳು ದೊರೆಯುವುದಿಲ್ಲ. ಒಟ್ಟಾರೆ ೨ನೆಯ ಆಚುಗಿ ೧ನೆಯ ಪೆರ್ಮಾಡಿಯರ ಕಾಲದ ತುರುಸು ಇವನ ಕಾಲದಲ್ಲಿ ಇದ್ದಂತೆ ತೋರುವುದಿಲ್ಲ.

ಆದರೂ ಕೂಡ ೬ನೇ ವಿಕ್ರಮಾದಿತ್ಯನ ತರುವಾಯ ಚಾಲುಕ್ಯ ವಂಶದ ಅವನತಿ ಮೊದಲುಗೊಂಡಿತು. ಮುಮ್ಮಡಿ ತೈಲಪನ ಕಾಲದಲ್ಲಿ ಕಳಚುರಿ ಅರಸು ಬಿಜ್ಜಳನು ಪ್ರಾಬಲ್ಯಕ್ಕೆ ಒಂದು ಅರಸೂತ್ತಿಗೆಯನ್ನು ಹಿಡಿದುಕೊಂಡನು (೧೧೬೨) ಈ ಪೂರ್ವದಲ್ಲಿ ಸಿಂದ ಅರಸು ೨ನೆಯ ಚಾವುಂಡನಿಗೆ ಬಿಜ್ಜಳನ ತಂಗಿಯರಾದ ಸಿರಿಯಾದೇವಿ, ಲಕ್ಷ್ಮಿದೇವಿಯರನ್ನು ಕೊಡಲಾಗಿತ್ತು. ಮೇಲಿನ ಕ್ರಾಂತಿಯ ಸಮಯದಲ್ಲಿ ಚಾವುಂಡನು ಅನ್ನ ಸಂಬಂಧ ಮತ್ತೆ ರಕ್ತ ಸಂಬಂಧಗಳ ಸತ್ವ ಪರೀಕ್ಷೆಯಲ್ಲಿ ಸಿಕ್ಕಿ ಅನ್ನ ಸಂಬಂಧಕ್ಕೆ ಹೆಚ್ಚು ಪ್ರಾಶಸ್ತ್ಯವಿತ್ತಂತೆ ತೋರುತ್ತಿದೆ. ಇದಕ್ಕೆ ಆಧಾರವಾಗಿ ಕ್ರಿ.ಶ.೧೧೬೩ರ ಪಟ್ಟದ ಕಲ್ಲಿನ ಒಂದು ಶಾಸನ ೨ನೆಯ ಚಾವುಂಡನನ್ನು ೩ನೆಯ ತೈಲಪನ ಸಾಮಂತ ಎಂದು ಹೊಗಳಿದೆ. ಇದರಿಂದ ಇವನು ಬಿಜ್ಜಳನ ಕ್ರಾಂತಿಯ ಸಮಯದಲ್ಲಿ ತನ್ನ ಸಮ್ರಾಟರಾದ ಚಾಲುಕ್ಯರ ಪಕ್ಷವಹಿಸಿ ಹೋರಾಡಿದ ಎಂಬುದು ಮುಂದು ಅವರಲ್ಲಿ ಭಕ್ತಿಗೌರವ ಇಟ್ಟಿದ್ದನೆಂಬುದು ವ್ಯಕ್ತವಾಗುತ್ತದೆ.

ಆದರೆ ಚಾಲುಕ್ಯ ಸಾಮ್ರಾಜ್ಯದ ಉಳಿಗಾಲದ ಆಶೆ ಸಂಪೂರ್ಣ ಕೈಬಿಟ್ಟ ಮೇಲೆ ೨ನೇ ಚಾವುಂಡ ಸ್ವತಂತ್ರತೆಯನ್ನು ಸಾರಿರಬೇಕು. ಇದಕ್ಕೆ ಆಧಾರವಾಗಿ ಕ್ರಿ.ಶ.೧೧೬೮ರ ಹರೇಮಣ್ಣೂರ ಶಾಸನದಲ್ಲಿ ಹೇಳಲ್ಪಟ್ಟಿರುವ ಇವನ ಬಿರುದಾವಳಿಗಳನ್ನು ನೋಡಬಹುದು. ಆದರೆ ಸಿಂದರ ಈ ಸ್ವತಂತ್ರ್ಯ ಬಹುದಿನ ಉಳಿದಂತೆ ತೋರುವುದಿಲ್ಲ. ಏಕೆಂದರೆ ೨ನೆಯ ಚಾವುಂಡನು ಮರಣವಪ್ಪುತ್ತಲೇ ಅವನ ಮಕ್ಕಳೆಲ್ಲ ರಾಜ್ಯ ಕಲಹವೇರ್ಪಟ್ಟಿತು. ಅದಕ್ಕಾಗಿ ಅವರು ಇನ್ನೊಬ್ಬರನ್ನು ಆಶ್ರಯಿಸುವುದು ಅನಿವಾರ್ಯವಾಯಿತು.

೨ನೆಯ ಚಾವುಂಡನು ವಂಶಪಾರಂಪರ್ಯವಾಗಿ ಬಂದಿದ್ದ ಕಿಸುಕಾಡು ೭೦, ಬಾಗಡಗೆ ೭೦, ನರೆಯಂಗಲ್ಲು ೧೨, ಕೆಳವಾಡಿ ೩೦೦, ಅಲ್ಲದೆ ಸ್ವಸಾಮರ್ಥ್ಯದಿಂದ ಗಳಿಸಿದ ಮತ್ತಿತರ ಪ್ರಾಂತಿಗಳನ್ನು (ಇವುಗಳ ವಿವರ ಮಾತ್ರ ಇಲ್ಲಿ ಇಲ್ಲ) ತ್ರಿಭೋಗಾಭ್ಯಂತರ ಸಿದ್ಧಿಯಂ ದುಷ್ಟ ನಿಗ್ರಹ ವಿಶಿಷ್ಟ ಪ್ರತಿನಿಯಿಂದಾಳೆರ ಸುಗೆಯ್ಯುತ್ತಿದ್ದನು[೧೩೬] ಇವನ ಆಡಳಿತದಲ್ಲಿ ಕುಂತಿಗೆ ೭೦, ಇದ್ದಿತು (ಎಂಚಗೇರಿ ಶಾಸನ), ಇವೆಲ್ಲವನ್ನೂ ಇವನು "ಪರಮ ತಪೋಧನರೆ ವಿಪ್ರರ ದೊಪ್ಪೆ ಶಿವಪ್ರಸಿದ್ಧ ಶಾಸನಮ ಸುಸ್ಥಿರಮಾಗಿರೆ" ಪಾಳಿ ಸಿದನಂತೆ[೧೩೭] ಇವನ ಕಾಲದಲ್ಲಿ ಯಲಬುರ್ಗಿಯೂ ಇಂದ್ರನಿಂದ ಅಮರಾವತಿಯೂ ರಾಘುವನಿಂದ ಅಯೋದ್ಯೆಯಾ, ಗೋವಿಂದನಿಂದ ಮಧುರೆಯೂ ಶೋಭವಡೆದಂತೆ ಶೋಭಿಸಿತು ಎಂದು ಹೇಳಲಾಗಿದೆ.[೧೩೮]

ಇವನು ದಾನದಿಂದ ಈಶ್ವರ ಪೂಜೆಯಿಂದ ಭೂಮಂಡಲದಲ್ಲಿ ಶೋಭವಡೆದು ಸಿಂದವಂಶದ ಚೊಡಾಮಣಿ ಎನಿಸಿ ಪಂಡಿತರಿಗೆ ಚಿಂತಾಮಣಿ ಎನಿಸಿ ಬಾಳಿದನು[೧೩೯] ದಾನದಲ್ಲಿ ಉನ್ನತ ಗುಣವನ್ನು ಹೊಂದಿ ವಿವಿಧ ಪಂಡಿತರ ಸಾಗುವನ್ನು ಪಡೆದಿದ್ದನು. ಮಾತ್ರವಲ್ಲ ಪಂಡಿತರಿಗೆ ಕವಿಗಳಿಗೆ, ಸಜ್ಜನರಿಗೆ ಸುವರ್ಣವನ್ನು ಪಡೆದು ಹಂಚುತ್ತಿದ್ದನು. ಇದರಿಂದ ಇವನ ಪಾಂಡಿತ್ಯ ಪ್ರೀತಿ, ಔದರ್ಯ ಗುಣಗಳು ವೇದ್ಯವಾಗುತ್ತಿವೆ.

ಇವನು ಜನಶಾಲೆಯ ಅಧಿಷ್ಠಾಯಕ ದಾಸ ಬೋವನ ಬಿನ್ನಹದ ಮೇರೆಗೆ ಭೂಮಿ ದಾನವಿತ್ತುದಾಗಿ ಹಿರೇಮಣ್ಣೂರು ಶಾಸನ ಹೇಳಿದೆ.[೧೪೦] ಉಂಚಗೇರಿಯ ಶಾಸನವು ಚಾವುಂಡನ ಆಜ್ಞೆಯ ಮೇರೆಗೆ ಹೆಗ್ಗಡೆ ಈಶ್ವರಯ್ಯನು ಹೆಚ್ಚುಂಕ ಮತ್ತು ಬೀರವಣಗಳನ್ನು ದಾನವಿತ್ತುದಾಗಿ ಹೇಳಿದೆ.

ಇವನ ಪಟ್ಟದ ರಾಣಿ ದೇಮಲದೇವಿ ಚಾವುಂಡರಸನ ಅರ್ಧಾಂಗಲಕ್ಷ್ಮಿಯಾದ ಈಕೆಯ ಕೀರ್ತಿಯು ಹತ್ತು ದಿಕ್ಕುಗಳಲ್ಲಿ ಹಬ್ಬಿತ್ತು ಈಕೆ ಸೇವಕರಿಗೆ ಬೇಡಿದುದನ್ನೀವ ಸುರಧೇನುವಿನಂತಿದ್ದಳು. ಬೇಳ್ವಲ ತವರ್ಮನೆಯಾಗಿದ್ದಳು. ಈಕೆಯನ್ನು ಶಾಸನಕಾರ ಚಾವುಂಡನ ಮನ ಕಮಲ ಮಧ್ಯದಲ್ಲಿ ಅಡ್ಡಾಡುವ ರಾಜಹಂಸ, ಪಾರ್ವತಿಯ ಪಾದ ಕಮಲಗಳನ್ನು ಧರಿಸಿದವಳು. ಪತಿಭಕ್ತಿಯಲ್ಲಿ ಆರುಂಧತಿ, ಬುದ್ದಿಯಲ್ಲಿ ಸರಸ್ವತಿ, ಭಾಗ್ಯದಲ್ಲಿ ರತಿ ಎಂದು ಬಣ್ಣಿಸಿದ್ದಾನೆ.[೧೪೧]

ಈಕೆ ಮತ್ತು ಈಕೆಯ ಮಗ ಆಚರಸರು ಕುಮಾರ ವೃತ್ತಿಯಾಳ್ವಿಕೆಯ ಪಟ್ಟಣ ಪಟ್ಟದಕಿಸುವೊಳಲನ್ನಾಳುತ್ತಿದ್ದಾಗ, ಕಿಸುವೊಳಲು ಶ್ರೀಮದ್ ವಿಜಯೇಶ್ವರದೇವರ್ಗೆ ಆಚಾರ್ಯರಿಗೆ ದಾನವಿತ್ತುದಾಗಿ ತಿಳಿದು ಬರುತ್ತಿದೆ.[೧೪೨,೧೪೩] ಈಕೆಯನ್ನು "ತದೆರ್ದ್ಧಾಂಗ ರಾಜ್ಯ...ಭ್ಯುದಯ ಸಹಸ್ರ ಫಳ ಭೋಗ ಭಾಗಿನಿ" ಎಂದು ಕರೆಯಲಾಗಿದೆ. ಇದರಿಂದ ಈಕೆ ರಾಜ್ಯಭಾರದಲ್ಲಿ (ಪತ್ಯಕ್ಷ ಭಾಗವಹಿಸಿದುದು ತಿಳಿದು ಬರುತ್ತಿದೆ. ಈಕೆ ಶ್ರೀಮಚ್ಚಾವುಂಡರಸರಿಗೆ ಭಿನ್ನಪಂಗೆಯ್ದು ನೇಮಿಚಂದ್ರ ದೇವರಿಗೆ ಎರಂಬರಿಗೆ ಪಟ್ಟಣದೋಳು ದಾನವಿತ್ತುದಾಗಿ ತಿಳಿಯುತ್ತದೆ. ಈ ರೀತಿ ಜಿನಶಾಲೆಗೆ ಜೈನ ಗುರುಗಳಿಗೆ ಒಬ್ಬ ಶೈವ ಅರಸು ದಾನವಿತ್ತಿರುವುದು ಕರ್ನಾಟಕದ ಅರಸು ಮನೆತನಗಳ ಧರ್ಮಸಹಿಷ್ಣುತೆಯ ದ್ಯೋತಕ ಈಕೆ ಪಂಡಿತೆಯೂ ಆಗಿದ್ದಳು, ಮಾತ್ರವಲ್ಲ, ತನ್ನ ಗಂಡನೊಂದಿಗೆ ಹಲವು ಜನ ಶಿಕ್ಷಕರಿಗೆ ದಾನವನ್ನು ಇತ್ತಳು.[೧೪೪]

ಚಾವುಂಡನಿಗೆ ದೇಮಲದೇವಿಯಲ್ಲದೆ. ಸಿರಿಯಾದೇವಿ ಲಕ್ಷ್ಮೀದೇವಿಯೆಂಬ ಪೆಂಡಂದಿರೂ ಇದ್ದರೂ ಇವರು ಕಳಚೂರಿ ಅರಸು ಬಿಜ್ಜಳ ಭೂಪಾಲನ ತಂಗಿಯರು ಇದನ್ನು ಶಾಸನ ಈ ರೀತಿ ಹೇಳಿದೆ ಶ್ರೀ ವೀರಮೂರ್ತಿಯಾದ ಬಿಜ್ಜಳದೇವನು ತನ್ನ ತಂಗಿಯರಾದ ಗುಣಲಂಕಾದೇವಿಯನ್ನು ಹಿರಿಯಳಾದ ಸಿರಿಯಾ ದೇವಿಯನ್ನು ಪ್ರೀತಿಯಿಂದ ಈಯಲು ಚಾವುಂಡ ಭೂಪತಿ ವಿವಾಹವಾದನು[೧೪೫] ಲಂಕಾದೇವಿಯನ್ನು ಕಟಗೇರಿ ಶಾಸನ[೧೪೬] ಲಕ್ಷ್ಮಿದೇವಿಯೆಂದು ಕರೆದಿದೆ.

ಇವರಲ್ಲಿ ಸಿರಿಯಾದೇವಿಯನ್ನು ಪತಿಭಕ್ತಿಯಲ್ಲಿ ಆರಂಧತಿ ಬುದ್ಧಿಶಕ್ತಿಯಲ್ಲಿ ಭಾರತಿ, ಒಳ್ಳೆಯ ಬೋಗ ಭಾಗ್ಯದಲ್ಲಿ ರತಿಯೆಂದು ಬಣ್ಣಿಸಿದೆ. ಅವಳ ಮಕ್ಕಳಾದ ವೀರಬಿಜ್ಜಳ ಮತ್ತು ವಿಕ್ರಮದೇವರು "ಶ್ರೀಮತು ಕಿಸುಕಾಡೆಪ್ಪತ್ತುಂ ಬಾಗಡೆಗೆಯೆಪ್ಪತ್ತುಂ ಕೆಳವಾಡಿ ಮೂನೂರುಮಂ ಸುಖಸಂಕಥಾವಿನೊದದಿಂದಾಮ್ದಿ ರಾಜ್ಯಂಗೆಯ್ಯುತ್ತಿದ್ದರು.

ಬಾದಾಮಿ ಚಾಲುಕ್ಯರ ಹೊಸರು ಶಾಸನವು[೧೪೭] ಚಾವುಂಡನ ಇನ್ನೊಬ್ಬ ಹೆಂಡತಿ ಲಕ್ಷ್ಮೀದೇವಿಯು "ಸೊಂಡಿಹೊಸವೊರಾಕರ ಕೆರೆಮಂಡಲದೊಳ್ನೆಗಳ್ದ... ಪತಿವೂರ ಚಾವುಂಡಂ ಕುಡೆ ಪರಮ ಸುಖದಿ" ಆಳುತ್ತಿದ್ದಳು ಎಂದಿದೆ. ಇಲ್ಲಿ ಆಕೆಯನ್ನು "ಸ್ವಸ್ತ್ಯನವರತ ಪರಮಕಲ್ಯಾಣಾಭ್ಯುದಯ ಸಹಸ್ರಫಳ ಭೋಗಭಾಗಿನಿ ದ್ವಿತೀಯಲಕ್ಷ್ಮಿ ಸಮಾನೆ ಕಳ ಹಂಸಯಾನೆ, ದಾನಚಿಂತಾಮಣಿ... ಜನಚೂಡಾಮಣಿಯನ್ತರ್ರ್ಪು... ರಾಗ್ರೇಸರಿಸೆವತಿಗಜಕೇಸರಿ. ಯಾಚುಕಜನ ದಾರಿದ್ರ ಸಂಹರಣೆ ಗುಣಗಣಾಭರಣೆ, ಸಹಜಮ್ರಿಗಮದಾಮೋದಬುದ ಜನಾಹ್ಲಾದ ಸಾಹಸೋತ್ತುಂಗ, ವಿಜಯವೈಜಯನ್ತಿ, ನೂತನ್ ದಮಯಂತಿ ಸಿಂದಮುಕುಂದ ಚಾವುಂಡದೇವ ವಕ್ಷಸ್ಥಳ ನಿವಾಸ ಲಕ್ಷ್ಮೀದೇವಿ" ಎಂದು ಬಣ್ಣಿಸಲಾಗಿದೆ. ಈಕೆಗೆ ಬಿನ್ನಪಂಗೆಯ್ದು ಪೆರ್ಗಡೆ ಸೋಮನಾಥನಾಯಕರು ಮೊದಲಾದವರು ಶ್ರೀಮತು ಕಪಿಲಾಶ್ರಮದೊರುವ ತೀರದ ಶ್ರೀಮತು ಮಲ್ಲಿಕಾರ್ಜುನ ದೇವರಿಗೆ ಗದ್ದೆಯನ್ನು ಬಿಟ್ಟುದಾಗಿ ಹೇಳಲಾಗಿದೆ.

ಇದರಿಂದ ಚಾವುಂಡನು ಆಡಳಿತ ಅನುಕೂಲಕ್ಕಾಗಿ ಮತ್ತು ಕಲಚೂರಿ ಅರಸರಿಂದ ತನ್ನ ರಾಜ್ಯವನ್ನು ರಕ್ಷಿಸುವುದಕ್ಕಾಗಿ ಬೇರೆ ಬೇರೆ ಭಾಗಗಳಾಗಿ ಮಾಡಿ ಅವುಗಳ ಆಡಳಿತದ ಭಾರವನ್ನು ತನ್ನ ಹೆಂಡಂದಿರು ಮತ್ತು ಮಕ್ಕಳಲ್ಲಿ ಹಂಚಿದ್ದನು ಎಂಬುದು ಸ್ಪಷ್ಟವಾಗುತ್ತದೆ. ದೇಮಲದೇವಿ, ಲಕ್ಷ್ಮೀದೇವಿಯವರು ಒಂದೊಂದು ನಾಡನ್ನು ಆಳುತ್ತಿದ್ದರು. ಆದರೆ ಸಿರಿಯಾ ದೇವಿ ಮಾತ್ರ ಪ್ರತ್ಯಕ್ಷವಾಗಿ ಆಡಳಿತ ವ್ಯವಸ್ಥೆಯಲ್ಲಿ ಭಾಗವಹಿಸಿದ್ದಂತೆ ತೋರುವುದಿಲ್ಲ. ಶ್ರೀ ದಿನಕರ ದೇಸಾಯಿಯವರು ಊಹಿಸುವ ಹಾಗೆ[೧೪೮] ಬಿಜ್ಜಳನ ತಂಗಿಯೆಂಬ ದೃಷ್ಟಿಯಿಂದ ಆಕೆಗೆ ಅಧಿಕಾರ ಕೊಟ್ಟಿರಲಿಕ್ಕಿಲ್ಲ ಎಂಬ ಮಾತಿಗೆ ಅರ್ಥವಿಲ್ಲ. ಏಕೆಂದರೆ ಬಿಜ್ಜಳನ ಇನ್ನೊಬ್ಬ ತಂಗಿ ಲಕ್ಷ್ಮೀದೇವಿ ಸೊಂಡಿ ಹೊಸೂರ ಮೊದಲಾದ ಭಾಗಗಳನ್ನು ಆಳುತ್ತಿದ್ದಳೆಂಬುದನ್ನು ಈಗಾಗಲೇ ನೋಡಿದೆ.

ವೀರ ಚಾವುಂಡರಸನು ಸ್ಥಿರದಿಂದ ರಾಜ್ಯಂಗೆಯ್ಯುತ್ತಿರಲಾಗಿ ಅವನ ಪಾದ ಪದ್ಮೋಪಜೀವಿ ಚಮಾಪಾಭರಣ ಶ್ರೀ ಸುಂಕದ ಬೀಜರಸ ವಿಭುದೈಕೆಮಂಡನ. ಆತನ ಪೆರ್ಗಡೆ ವಿಖ್ಯಾತ

ಯಶೋನ್ನತ ನಿಪುಣ, ಅಚಳಿತವಾಕ್ಯ, ಭೂಮಂಡಲ ಪ್ರಸಿದ್ಧ ನಾಗದೇವ ಕೇಶವ ದೇವರು ತಮಗೆ ನಡೆವ ಹೆಜ್ಜುಂಕ ಮತ್ತು ಬೀರವಣವನ್ನು ಶ್ರೀ ಮೂಲ ಸ್ಥಾನ ದೇವರಿಗೆ ಬಿಟ್ಟಂತೆ ತಿಳಿಯುತ್ತದೆ.[೧೯]

ಇವನ ಇನ್ನೊಬ್ಬ ಪಾದಪದ್ಮೋಪಜೀವಿಯಾದ ಶ್ರೀಮನ್ಮಹಾಮಂಡಲನ ಸೇನಾಧಿಪತಿ ಮಹಾಪ್ರಚಂಡ ದಂಡನಾಯಕ ವೈರಿ ಭಯದಾಯಕ, ಪತಿಹಿತಾಚಾರ್ಯ, ಆಡಳಿತಧೈರ್ಯ, ಸ್ವಜನ ಮನೋರಂಜನ, ವೈರಿಮದ ಭಂಜನ, ಭಯಲೋಭವರ್ಜಿತ, ವಿಕ್ರಮೋಪಾರ್ಜಿತ, ಶ್ರೀಮನ್ಮಹಾಪ್ರಚಂಡ ದಂಡನಾಯಕ ಸೋಮರಸನ ಪ್ರಸ್ತಾಪ ಮುಧೋಳದ ಒಂದು ಶಾಸನದಲ್ಲಿ ಬಂದಿದೆ.

ಹೀಗೆ ಹಲವು ಜನ ಅಧಿಕಾರಿಗಳು ತಮ್ಮ ಶೌರ್ಯ ಸಾಹಸಗಳಿಗಾಗಿ ಚಾವುಂಡನ ಕಾಲದಲ್ಲಿ ಪ್ರಸಿದ್ಧಿ ಪಡೆದಿದ್ದರು.

ಈ ರೀತಿ ಚಾವುಂಡನು ಸುಮಾರು ೨೫ ವರ್ಷಗಳವರೆಗೆ ರಾಜ್ಯಭಾರವನ್ನು ಮಾಡಿ ಕ್ರಿ.ಶ.೧೧೬೯ರ ಸುಮಾರಿನಲ್ಲಿ ಮರಣವಪ್ಪಿರಬೇಕು. ಏಕೆಂದರೆ ಕ್ರಿ.ಶ.೧೧೬೯-೭೦ರಲ್ಲಿ ವೀರಬಿಜ್ಜಳ ಮತ್ತು ವಿಕ್ರಮರು ಸಿಂದನಾಡನ್ನು ಆಳುತ್ತಿದ್ದರು ಎಂದು ಶಾಸನಗಳು ಹೇಳುತ್ತಿರುವುದು ಈ ಊಹೆಗೆ ಕಾರಣ. ಇವನ ತರುವಾಯ ಇವನ ಮಕ್ಕಳಾದ ಬಿಜ್ಜಳ ಮತ್ತು ವಿಕ್ರಮರು ೩ನೆಯ ಆಚುಗೆ ಮತ್ತು ಎರಡನೆ ಪೆರ್ಮಾಡಿಯರು ಪರಸ್ಪರ ಹೋರಾಟದೊಂದಿಗೆ ರಾಜ್ಯಭಾರವನ್ನು ಮುಂದುವರಿಸಿದರು.

**ಬಿಜ್ಜಲ ಮತ್ತು ವಿಕ್ರಮರು ೧೧೬೯-೧೨೨೦**

ಇವರು ಚಾವುಂಡನಿಗೆ ರಾಮಲಕ್ಷ್ಮಣರ ಹಾಗೆ ಹುಟ್ಟಿದರಂತೆ[೩೦] ಇನ್ನೊಂದು ಶಾಸನವು ಇವರ ಹುಟ್ಟನ್ನು ಈ ರೀತಿ ಬಣ್ಣಿಸುತ್ತವೆ. ಭೂಮಿಯನ್ನು ಪಾಲಿಸಲೆಂದು ಧರ್ಮರಿಗೆ (ಪಾರ್ವತಿಗೆ) ಗಣಪತಿ ಷಣ್ಮುಖರು, ಸೀತೆಗೆ ಉನ್ನತ ತೇತಸ್ಸುಳ್ಳ ಲವಭೂಭುಜ ಕುಶನೃಪರು ಶ್ರೀ ದೇವಕೀದೇವಿಗೆ ಆದರದಿಂದ ಕೃಷ್ಣ ಬಲರಾಮರು ಉದಯಿಸಿದ ಹಾಗೆ ಸಿರಿಯಾದೇವಿಗೆ ವೀರಬಿಜ್ಜಲ ನೃಪ ಮತ್ತು ವಿಕ್ಕಯ್ಯನೆಂಬಾತ್ಮಜರು ಹುಟ್ಟಿದರು[೩೧] ಇವರು ಪೊಗರ್ತೆಗಂ ನೆಲೆಯೆನಿಸಿ ಬಾಳಿದರು[೩೨] ಇವರಲ್ಲಿ ಬಿಜ್ಜಳನು ವೈರಿಗಳೆಂಬ ಆನೆಗಳಿಗೆ ಸಿಂಹದಂತಿದ್ದನು[೩೩] ಇವನನ್ನು "ಚೆಲುವಿನ ಕಣಿ ಎಂದು ವರಪುಮಂ ವಿಜಯ ಶ್ರೀಧರ ನೊಸೆದಾಳ್ವನಮಳ ಸಿಂದನ್ವಯ ಲಕ್ಷ್ಮೀಧರ"ನೆಂದೂ ಬಣ್ಣಿಸಲಾಗಿದೆ. ಈತನು ಬಾಲ್ಯದಲ್ಲಿ ಮಹಾಪರಾಕ್ರಮ ಹೊಂದಿ ವೈರಿ ಅರಸರನ್ನು ವಣಿಸಿದ್ದನು, ಉಭಯ ಕುಲಶುದ್ಧನಾಗಿದ್ದನು[೩೪] ಈತನಿಗೆ ಮಿಕ್ಕ ಪುರುದೇವ, ಮೇವರಗಂಡ ಎಂಬ ಬಿರುದುಗಳು ಇದ್ದವು (ಅಲ್ಲೇ) ಈತನು ಒಳ್ಳೆಯ ಭಕ್ತನಾಗಿದ್ದನು. ಅದನ್ನು ಬೆಂಚನಮಟ್ಟಿ ಶಾಸನವು ಈ ರೀತಿ ಹೊಗಳಿವೆ[೩೫]ನಂಬಿಯ ತೆರದಿಂ ಶಿವನಂ ನಂಬಿದ ಓಹಿಲನ ತೆರದಿನೋಹಿಲ್ಲದ ಭಕ್ತಂ ಬಾಣನಂತೆ ಚಾಣಂ ಕಿಂಬಹುಣ ವೀರ ಬಿಜ್ಜಳಾವನಿಪಾಲಂ" ಅಲ್ಲದೆ ಇಲ್ಲಿ ಇವನನ್ನು ಅರವತ್ತು ನಾಲ್ಕು ಕಲೆಗಳಲ್ಲಿ ಪ್ರಮಾಣಪುರಷನೆಂದು ಕರೆಯಲಾಗಿದೆ.

ವಿಕ್ರಮನನ್ನು ಒಂದು ಶಾಸನ ಈ ರೀತಿ ಪರಿಚಯಿಸುತ್ತದೆ "ಈ ವಿಕ್ರಮೇಶ್ವರನ ನಿಜದೇವಗುರುಗಳಾದ ಕಳೇಶ್ವರಬ್ರತಿಪತಿಗಳು ಚಾವುಂಡಂಗೆ ಸಿರಿಯಾ ದೇವಿ ನಿಜಾಂಜಿಕೆಯೆನಲು ಬಿಜ್ಜಲನೆಣೆ ಯಾರು[೧೫೬] ಇವನು ಪ್ರಜೆಗಳನ್ನು ಪಾಲಿಸುತ್ತ ಧರ್ಮವನ್ನು ನಿಲಿಸುತ್ತ, ಒಳ್ಳೆಯವರ ಸಮೂಹವನ್ನು ರಕ್ಷಿಸುತ್ತ ವೈರಿಯಸಮೂಹವನ್ನು ಮುರಿಯುತ್ತ ಯಾವಾಗಲೂ ಲಕ್ಷ್ಮೀವಾಸಸ್ಥಳವೆನಿಸಿದ್ದನು. ಅಲ್ಲದೆ ಅರಸರಲ್ಲಿ ಚೂಡಾಮಣಿ ಎನಿಸಿ, ಸೋಲಿಲ್ಲದವನಾಗಿ ಅಪ್ಪರಿಗೆ ಒಳ್ಳೆಯ ಸಂಪತ್ತಿಯಾಗಿ ಮಂಡಳಿಕ ತಿಲಕನೆನಿಸಿ ಬಾಲ್ಯದಲ್ಲಿಯೇ ಖ್ಯಾತಿವೆತ್ತ ಮಾಂಧಾತುವೆನಿಸಿ ಸೂರ್ಯವಂಶದ ಯೌವ್ವನಾಶ್ವನ ಮಗನಂತೆ ಭೂಮಂಡಲವನ್ನು ರಕ್ಷಿಸಿದನು. ನೂತನ ಬಲಿಯನಿಸಿ ಮೆರೆದ.[೧೫೭]

ಇವರ ಕಾಲ ಕರ್ನಾಟಕದ ರಾಜಕೀಯದಲ್ಲಿ ಹೋರಾಟದ ಕಾಲ ೨ನೇ ಚಾವುಂಡನ ಕಾಲಕ್ಕೆ ಎದ್ದೆ ವೈರೆದ ಕಿಡಿ ಹಾಗೆಯೇ ಮುಂದುವರೆಯಿತು. ಕಲಚೂರಿ ಅರಸರು ಮತ್ತು ಚಾಲುಕ್ಯರು ಸಾಮ್ರಾಜ್ಯಕ್ಕಾಗಿ ಹೋರಾಡುತ್ತ ಮೇಲೆ ಕೆಳಗಾಗುತ್ತ ನಡೆದ ಕಾಲ ಆ ಏರುಪೇರುಗಳಿಗೆ ತಕ್ಕಂತೆ ಸಿಂದರಸರೂ ಆಳರಸರನ್ನು ಒಪ್ಪಿ ನಡೆದ ಕಾಲ ಸಮಯ ಸಾಧಿಸಿದಾಗ ಸ್ವತಂತ್ರರಾಗಲು ಪ್ರಯತ್ನಿಸಿ ಕೊನೆಗೆ ಮಾದವರ ಅರಸೊತ್ತಿಗೆಯ ಸೇರಿ ಮುಂದುವರೆದ ಕಾಲ.

ಇವರು ಕ್ರಿ.ಶ.೧೧೬೯–೭೦ ಸುಮಾರಿನಲ್ಲಿ "ನೆಗರ್ತೆಗಂ ಪೊಗರ್ತೆಗಂ ನೆಲೆಯೆನಿಸಿ" ಶ್ರೀಮತು ಕಿಸುಕಾಡೆಪ್ಪತ್ತನ್ನೂ ಬಾಗಡಿಗೆ ೭೦ನ್ನು ಕೆಳವಾಡಿ ಮುನ್ನೂರನ್ನು ಸುಖಸಂಕಥಾ ವಿನೋದದಿಂದಾರ್ದು ರಾಜ್ಯಂಗೆಯ್ಯುತ್ತಮಿದ್ದರು" ಎಂದು ಹೇಳಲಾಗಿದೆ. ಇವರನ್ನು ಇಲ್ಲಿ "ಚಾಳುಕ್ಯವಂಶರತೋತ್ತಂ ಸರ್ಮದವದರಿ ಹಸ್ತಿಮಸ್ತಕವಿದಳನ ಕಣ್ಮೀರವ ಪ್ರತಾಪ" ಎಂದು ಬಣ್ಣಿಸಲಾಗಿದೆ.[೧೫೮]

ಕ್ರಿ.ಶ.೧೧೭೪ರ ನಿಡಗುಂದಿ ಶಾಸನದಲ್ಲಿ "ಕಿಸುಕಾಡು ಅದರೊಳು ಭುವನಸ್ತುತ ರಾಜಧಾನಿ (ಎರಂಬರಗಿ) ಆ ವರಪುರವನ್ನು ಪ್ರೀತಿಯಿಂದ ಆಳುವವನು ಆಮೂಲನಾದ ಸಿಂದಾನ್ವಯ ಲಕ್ಷ್ಮೀಧರನೆನಿಸಿದ ಬಿಜ್ಜಲದೇವಿ" ಎನ್ನಲಾಗಿದೆ. ಇದರಿಂದ ಇವನು ವಂಶಪಾರಂಪರ್ಯವಾಗಿ ಬಂದ ಚಾಲುಕ್ಯದ ಸಂಬಂಧವನ್ನು ಕಡಿದುಕೊಂಡಿರುವಂತೆ ಸ್ವತಂತ್ರವಾಗಿ ರಾಜ್ಯವನ್ನು ನಿರ್ವಹಿಸುತ್ತಿರುವಂತೆ ತೋರುತ್ತದೆ.

ಮುಂದೆ ಬಿಜ್ಜಲ ಮತ್ತು ವಿಕ್ರಮ ಆಚುಗಿ ಮತ್ತು ಪೆರ್ಮಾಡಿಯರಲ್ಲಿ ಅಧಿಕಾರಕ್ಕಾಗಿ ಕಲಹವೇರ್ಪಟ್ಟಿರಬೇಕು. ಅದರ ಲಾಭವನ್ನು ಕಲಚುರಿ ವಂಶದ ಅರಸರು ಪಡೆದುಕೊಂಡರು. ತಮ್ಮ ಸಮೀಪದ ಸಂಬಂಧಿಗಳಾದ ಮತ್ತು ಪೆರ್ಮಾಡಿಯರಿಗೆ ಸಹಾಯ ಮಾಡಿಸಿದ ಅರಸರು ಸಾಮಾಂತರಾಗಿ ಮುಂದುವರೆಯುವಂತೆ ವ್ಯವಸ್ಥೆ ಮಡಿದರು. ಇದಕ್ಕೆ ಕ್ರಿ.ಶ.೧೧೭೪ರ ಅಬ್ಬಿಗೇರಿ ಶಾಸನ ಆಧಾರವಾಗಿದೆ. ಕಳಚೂರಿ ಅರಸರು ರಾಯಮುರಾರಿ ಸೋವಿದೇವನು ರಾಜ್ಯವಾಳುತ್ತಿದ್ದಾಗ ಅವನ ಪಾದಪದ್ಮೋಪಜೀವಿ ಸಮಧಿಗತ ಪಾಚ ಮಹಾಶಬ್ದ ಮಹಾಮಂಡಳೇಶ್ವರ ಸಿಂದಕುಲ ಕಮಲಮಾರ್ತಾಂಡ ಹೆಚ್ಚುಗಾರ ಕುಲಾನ್ವಯ... ಸಿಂದಾನ್ವಯ...ರು

ಇದ್ದುದಾಗಿ ಈ ಶಾಸನ ಉಲ್ಲೇಖಿಸಿದ ಇದರಿಂದ ಕಳಚೂರಿ ವಂಶದ ಅರಸರ ಆಡಳಿತಕ್ಕೆ ಒಳಪಟ್ಟಿದರೆಂಬುದು ಸ್ಪಷ್ಟವಾಗುತ್ತದೆ. ಇಲ್ಲಿ ಸಿಂದ ಅರಸರನ್ನು ಹೆಜ್ಜಿಗಾರಕುಲಾನ್ವಯರೆಂದು ಕರೆದಿರುವುದು ವಿಶೇಷವಾಗಿದೆ.

ಅದೇ ರೀತಿ ಕ್ರಿ.ಶ.೧೧೭೮ ಕಟಗೇರಿ ಶಾಸನವು ಕಲಚೂರಿ ವಂಶದ ಸಂಕಮದೇವರಸರು ಮೊದೆಗನೂರು ನೆಲೇವಿಡಿನೊಳು ಸುಖಸಂಕಥಾ ವಿನೋದದಿಂದ ರಾಜ್ಯಾಂಗೆಯ್ಯುತ್ತಮಿರೆ ತಚ್ಚರಣ...ಚ್ಚರಿತಸ್ವಿಂದ ವಂಶರಾದ ಬಿಜ್ಜಲೋರ್ವ್ವಿ ಮಿಕ್ಕರಸನು ಕಿಸುಕಾಡು ೭೦, ಬಾಗಡೆಗೆ ೭೦, ನರೆಯಂಗಲ್ಲು ೧೨, ಕೆಲವಾಡಿ ೩೦೦, ಮತ್ತು ಕಿರಿವಿಡಿ ೩೦ನ್ನು ಆಳುತ್ತಿದ್ದರು ಎಂದಿದೆ. ಇದೇ ಸ್ಥಳದ ಇನ್ನೊಂದು ಶಾಸನ ಸಿಂದ ವಂಶದ ಬಿಜ್ಜರಸ ಮತ್ತು ವಿಕ್ರಮಾದಿತ್ಯರು ಬಾಗಡಗೆ ೭೦, ಕಿಸುಕಾಡು ೭೦, ಹಂಬರಿಗೆ ೧೨, ನರೇಗಲ್ಲ ೧೨ಗಳನ್ನಾಳುತ್ತಿದ್ದರು. ಎಂದಿದೆ. ಕ್ರಿ.ಶ.೧೧೭೯ರ ರೋಣ ಶಾಸನವು ಕಲಚುರಿ ಸಂಕಮದೇವನ ಮಾಂಡಲಿಕನಾಗಿ ವಿಕ್ರಮಾದಿತ್ಯನು ನಿಜರಾಜಧಾನಿಯೆನಿಪೆರಂಬರಗೆಯ ನೆಲೆವಿಡಿನೋಳು ಸುಖ ಸಂಕಥ ವಿನೋಧದಿಂದ ರಾಜ್ಯಂಗೆಯ್ಯತ್ತಮಿದ್ದರು" ಎಂದಿದೆ.

ಈ ಎಲ್ಲಾ ಆಧಾರಗಳಿಂದ ಸಿಂದವಂಶದ ಬಿಜ್ಜಣ ಮತ್ತು ವಿಕ್ರಮರು ಕಲಚುರಿವಂಶದ ಅರಸರ ಸಹಾಯದಿಂದ ತಮ್ಮ ಸಹೋದರರಾದ ಆಚರಸ ಪೆರ್ಮಾಡಿಯರನ್ನು ಬದಿಗೆ ಸರಿಸಿ, ವಂಶಪಾರಂಪರ್ಯವಾಗಿ ಬಂದಿದ್ದ ಚಾಲುಕ್ಯ ಸಾಮ್ರಾಟರ ಅಧಿಪತ್ಯದಿಂದ ಬಿಡುಗಡೆ ಹೊಂದಿ ಕಲಚುರಿ ಅರಸರ ಕೆಳಗೆ ಆಳಹತ್ತಿದರು ಎಂಬುದು ಸ್ಪಷ್ಟವಾಗುತ್ತದೆ.

ಆದರೆ ಕ್ರಿ.ಶ.೧೧೮೩ರ ಕೊಣ್ಣೂರು ಶಾಸನವು ಚಾಲುಕ್ಯ ಅರಸ ವೀರಸೋಮೇಶ್ವರನು ರಾಜ್ಯಂಗೆಕಯ್ಯುತ್ತಿರಲು ತತ್ಪಾದ ಪದ್ಮೋಪಜೀವಿ ವೀರಬಿಜ್ಜಲೋರ್ವಿಪಾಲನು ರಾಜ್ಯಂಗೆಯುತ್ತಿದ್ದನು ಎಂದಿದೆ. ಕ್ರಿ.ಶ.೧೧೮೩ರ ಸುಮರಿನಲ್ಲಿ ಮತ್ತು ಚಾಲುಕ್ಯ ಅರಸು ನಾಲ್ವಡಿ ಸೋಮೇಶ್ವರನು ಕಲಚುರಿ ಅರಸರನ್ನು ಸೋಲಿಸಿ ಅರಸೊತ್ತಿಗೆಯನ್ನು ಪ್ರತಿಷ್ಠಾಪಿಸಿದಂತೆ ತೋರುತ್ತದೆ. ಇದರಿಂದ ಸಹಜವಾಗಿ ಸಾಮಂತರಾದ ಸಿಂದರು ಕಲಚುರಿ ವಂಶದಿಂದ ಚಾಲುಕ್ಯ ವಂಶಕ್ಕೆ ಹಸ್ತಾಂತರಿಸಲ್ಪಟ್ಟರು ಕ್ರಿ.ಶ.೧೧೮೬ ಅಬ್ಬಿಗೇರಿಯ ಒಂದು ಶಾಸನವು ಇದಕ್ಕೆ ಸಾಕ್ಷಿ ನುಡಿಯುತ್ತದೆ. ಅಲ್ಲಿ "ಚಾಲುಕ್ಯಾಭರಣಂ ಶ್ರೀಮತ್ರಿಭುವ... ತತ್ಪಾದ ಪದುಮೋಪ ಬೇವಿಗಳು... ಶ್ರೀ ಮತುಬಿಜ್ಜಣದೇವಂ ವಿಕ್ರಮಾದಿತ್ಯ ದೇವರ..." ಎನ್ನಲಾಗಿದೆ. ಹೀಗೆ ಸಿಂದರು ಕ್ರಿ.ಶ.೧೧೮೩ ರಿಂದ ೧೧೮೬ರವರೆಗೆ ಚಾಲುಕ್ಯ ವಂಶಾಧಿಪತ್ಯಕ್ಕೆ ಒಳಪಟ್ಟಿದ್ದರು ಎಂಬುದು ಸ್ಪಷ್ಟವಾಗುತ್ತದೆ.

ಕ್ರಿ.ಶ.೧೧೮೬-೮೭ರ ಸೂಳಿಭಾವಿಯ ಒಂದು ಶಾಸನವು ಯಾವ ಅಧಿಪತ್ಯವನ್ನು ಹೆಸರಿಸದೆ ವೀರಬಿಜ್ಜಳ ದೇವ, ವೀರ ವಿಕ್ರಮಾದಿತ್ಯದೇವರನ್ನು ಹೆಸರಿಸಿದೆ. ಅಬ್ಬಿಗೇರಿಯ ಒಂದು ಶಾಸನವು[೫೫] ಇವರನ್ನು ಸ್ವತಂತ್ರ್ಯವಾಗಿಯೇ ಉಲ್ಲೇಖಿಸಿದೆ. ಅದೇ ರೀತಿ ಕ್ರಿ.ಶ.೧೧೮೭ ಬೆಂಚನಮಟ್ಟಿಯ ಒಂದು ಶಾಸನವು ಬಿಜ್ಜಲ ಮತ್ತು ವಿಕ್ರಮಾದಿತ್ಯರು ಕಿಸುಕಾಡು ೭೦, ಬಾಗಡೆಗೆ ೭೦, ಕೆಳವಾಡಿ-೩೦೦, ನರೇಗಲ್ಲ ೧೨ ಮತ್ತು ಕಿರಿವೀಡಿ ೩೦ನ್ನು ಯಾವ ಆದಿಪತ್ಯಕ್ಕೂ ಒಳಪಡದೆ ಆಳುತ್ತಿದ್ದುದನ್ನು ಸೂಚಿಸುತ್ತದೆ. ಇವೆಲ್ಲವುಗಳಿಂದ ಕ್ರಿ.ಶ.೧೧೮೬-೮೭ರ ಸುಮಾರಿನಲ್ಲಿ ಇವರು ಮತ್ತೆ ಸ್ವತಂತ್ರರಾಗಿದ್ದಾರೆಂದು ಹೇಳಬಹುದಾಗಿದೆ.

ಕ್ರಿ.ಶ.೧೧೯೫ರ ಸುಮಾರಿನಲ್ಲಿ ಹೊಯ್ಸಳ ಬಲ್ಲಾಳನು ಯರಂಬರಗೆ ಕುಪ್ಪವನ್ನು ಆಳುತ್ತಿದ್ದನು ಎಂದಿದೆ. ಒಂದು ಶಾಸನ[೨೦] ೧೧೯೬ರ ಅರಸಿಕೆರೆ ಶಾಸನದಲ್ಲಿ ವೀರಬಲ್ಲಾಳನು ಯರಂಬರಗೆಯಲ್ಲಿ ವಾಸವಾಗಿದ್ದನು ಎಂದು ಹೇಳಿದೆ. ಅಲ್ಲಿಂದಲೆ ಅವನು ಗುತ್ತಿ, ಬೆಳ್ಳಟ್ಟಗೆ, ರಟ್ಟಪಳ್ಳಿ ಮೊದಲಾದ ಕೋಟೆಗಳನ್ನು ೧೧೯೧ರ ಸುಮಾರಿನಲ್ಲಿ ಗೆದ್ದನೆಂದು ಹೇಳಲಾಗಿದೆ. ಇದರಿಂದ ಹೊಯ್ಸಳರು ಯಾದವ ಮಾಂಡಲಿಕರನ್ನು ಸೋಲಿಸಿ ಈ ನಾಡನ್ನು ಹಿಡಿದುಕೊಂಡಿರಬೇಕು ಕ್ರಿ.ಶ.೧೨೦೨ ಸೂಡಿ ಶಾಸನವು "ಪ್ರತಾಪ ಚಕ್ರವರ್ತಿ ಸಿಂಹಣದೇವನ... ಖಂಡೇರಾಯ ಮಂಡಳಿಕ (ಪಿ)... ತಾಮ... ಸರು ಕಿಸುಕಾಡು ಎಪ್ಪತ್ತಕೆಂ ಆ(ಸ್ಥಾ)ನ ಸುಂಕವೆಲ್ಲಂಬಿಟ್ಟರು' ಎಂದಿದೆ. ಇದರಿಂದ ಯಾದವರು ಕ್ರಿ.ಶ.೧೨೦೨ರಲ್ಲಿ ಮತ್ತೆ ಈ ನಾಡನ್ನು ಹೊಯ್ಸಳರಿಂದ ಪಡೆದಿರಬೇಕು. ಆದರೆ ಇಲ್ಲಿ ಸಿಂದರ ಪ್ರಸ್ತಾಪ ಇಲ್ಲ.

ಕ್ರಿ.ಶ.೧೨೨೦ರ ರೋಣದ ಒಂದು ಶಾಸನವು ಸಿಂದವಂಶದ ಮಹಾಮಂಡಳೇಶ್ವರ ವಿಕ್ರಮಾದಿತ್ಯನು ಯಾದವ ಸಿಂಪುಣ ದೇವನ ಸಾಮಂತನಾಗಿ ಆಳುತ್ತಿದ್ದನು ಎಂದಿದೆ. ಬಹುಶಃ ಯಾದವರ ಪ್ರಾಬಲ್ಯದೊಂದಿಗೆ, ಸಿಂದರೂ ಪ್ರಭಲರಾಗಿರಬೇಕು. ಅರಸೊತ್ತಿಗೆಯನ್ನು ಪಡೆದಿರಬೇಕು. ಈ ಮಧ್ಯದಕ ಮತ್ತು ತರುವಾಯದ ಸಿಂದರ ಶಾಸನಗಳು ದೊರೆಯುವುದಿಲ್ಲವಾದ್ದರಿಂದ ಆ ಕಾಲದ ಸಿಂದ ಅರಸುತ್ತಿಗೆಯ ಬಗೆಗೆ ಏನು ಹೇಳಲು ಬಾರದು.

ಮುಂದೆ ಮಿಕ್ರಮನು ಮಕ್ಕಳಿಲ್ಲದೆ ಸತ್ತಿರಬಹುದಾಗಿದ್ದು ಯಾದವರು ಆ ನಾಡಿಗೆ ತಮ್ಮ ಒಬ್ಬ ಅಧಿಕಾರಿಯನ್ನು ನೇಮಿಸಿ ಅದರ ಆಡಳಿತವನ್ನು ತಾವು ನೇರವಾಗಿ ನೋಡಿಕೊಳ್ಳಹತ್ತಿರಬೇಕು ಇದಕ್ಕೆ ಆಧಾರವಾಗಿ ಯಾದವರ ಸಿಂಘಣನಿಗೆ ಸಂಬಂಧಿಸಿದ ನಿಡಗುಂದಿಯ ಒಂದು ಶಾಸನವು ಮಹಾಪಸಾಯಿತ ಪರಮ ವಿಶ್ವಾಸಿನ್, ಬಾಹತ್ತರ ನಿಯೋಗಾಧಿಪತಿ ಸರ್ವಾಧಿಕಾರಿ ವಾಸುದೇವನಾಯಕ ಕಿಸುಕಾಡು ೭೦ರ ರಾಜಧಾನಿಯಾದ ಎರಂಬರಗೆಯನ್ನು ಆಳುತ್ತಿದ್ದನು ಎಂದಿದೆ. (9A xxx. p.267)

ಬಿಜ್ಜಳ ಮತ್ತು ವಿಕ್ರಮರ ಕಾಲವು ದಾನಧರ್ಮಗಳಿಗೆ ಉಲ್ಲೇಖನಾರ್ಹವಾಗಿದೆ. ಕ್ರಿ.ಶ.೧೧೮೭ರ ರೋಣದ ಒಂದು ಶಾಸನವು ಸಿಂದ ಅರಸು ವಿಕ್ರಮನ ಧರ್ಮಪ್ರಸಂಗವನ್ನು ಸೊಗಸಾಗಿ ಬಣ್ಣಿಸಿದೆ. ಅವನು ನಿಜರಾಜಧಾನಿಯೆನಿಸಿದ ಯೆರಂಬರಗೆಯ ನೆರೆವೀಡಿನೊಳೆ ಸುಕಸಂಕಥಾ ವಿನೋದದಿಂದ ರಾಜ್ಯಂಗೆಯ್ಯುತ್ತ ಇದ್ದುದಾಗಿಯೂ ಆಗ ನಡೆದ ಒಂದು ಧರ್ಮ ಪ್ರಸಂಗದಲ್ಲಿಯ ಸುಭಾಷಿತ ವಚನಗಳನ್ನು ಕೇಳಿ ತಾಂ ನಾಜದಿಂ ಧರ್ಮ ಬುದಿಯಪ್ಪದರಿಮದಂ ತಮ್ಮ ಬಪ್ಪಂ ಶ್ರೀಮನ್ಮಮಹಾಮಂಡಳೇಶ್ವರಂ ಚಾವುಂಡರಸದೇವರ್ಗೆ ಪರೋಕ್ಷ ವಿನಯ ಪ್ರಾಯಶ್ಚಿತ್ತ ನಿಮಿತ್ತ ಯೆರದಂಬರಿಗೆಯಲು ಭೊದಾನ ಗೃಹದಾನ ಗೋದಾನ ಸುವರ್ಣದಾನಂಗಳಂ ಮಾಡುತ್ತ ಮಿರ್ದು ತತ್ಕಲದೋಳು... ಶ್ರೀಮನ್ಮಹಾಗ್ರಹಾರಂ ರೋಣದ ನೂರನಾಲ್ವರಶೇಷ ಮಹಾಜನಂಗಳ ಸನ್ನಿಧಾನದಲಲ್ಲಿಯ ಕಲ್ಲಮಠದಾಚಾರ್ಯ ಗುರುಭಕ್ತದೇವರ್ಗೆ..." ಎಂದಿದೆ.

ಅದೇ ರೀತಿ ಕ್ರಿ.ಶ.೧೧೮೬ರ ಅಜ್ಜಿಗೇರಿ ಶಾಸನವು ಶ್ರೀ ಹುಜಪ್ಪೇಶ್ವರ ದೇವರ ಪೂಜೆ... ವಿಕ್ರಮಾದಿತ್ಯದೇವರಸರು ಕೊಟ್ಟ ದಾನವನ್ನು ಹೇಳಿದೆ. ಇದೇ ಕಾಲದ ಸೂಳೀಭಾವಿಯ ಒಂದು ಶಾಸನವು ವೀರಬಿಜ್ಜಳ ದೇವರಸರು ವಿಕ್ರಮಾದಿತ್ಯ ದೇವರಸರು ಶ್ರೀ ಮತ್ತು ಅರಸೀಬೀಡಿನ ಊರಿಂ ಬಡಗಣ ಮಾರಿಕಜ್ಜಿಯೆ ಕೆರೆಯಕೆಯಿಂ ಪಡುವಲು ಕಂಮ (೫೦೦) ಮಂ (ಕಲ್ವೆರದ ಶಕಕ್ಕೆ) ಧಾರಾಪೂರ್ಬಕಂ ಮಾಡಿಕೊಟ್ಟರು ಎಂದಿದೆ. ಬ್ರಾಹ್ಮಣರ ಭೋಜನಕ್ಕಾಗಿಂಯೂ ಅವರು ದಾನವಿತ್ತಂತೆ ಆ ಶಾಸನ ಹೇಳಿದೆ.

ಬಿಜ್ಜಳನ ಭಕ್ತಿಗುಣವನ್ನು ವರ್ಣಿಸುವ ಬೆಂಚನಮಟ್ಟಿಯ ಶಾಸನವನ್ನು ಈಗಾಗಲೇ ನೋಡಿದೆ. ಆದರಿಂದ ಅವನೊಬ್ಬ ಮಹಾಭಕ್ತರ ಸಾಲಿನಲ್ಲಿ ಸೇರಿದ್ದನೆಂಬುದು ಸ್ಪಷ್ಟವಾಗುತ್ತದೆ.

೧೨ನೇ ಶತಮಾನದ ಕೊನೆಯ ಭಾಗದ ಅಬ್ಬಿಗೇರಿಯ ಇನ್ನೊಂದು ಶಾಸನವು "ವೀರಬಿಜ್ಜಣದೇವರ ಸರುಂ ವಿಕ್ರಮಾದಿತ್ಯನುಂ ವಿದ್ದು (ಗಾವುಂಡ)... ಸನ್ನಿಧಾನದೊಳು ಶ್ರೀ ಮೂಲಸ್ಥಾನ ದೇವರ್ಗೆ... ಶ್ರೀಮತು ಮಲ್ಲಿಕಾರ್ಜುನ ಗುರುಗಳ ಕಾಲಂ ಕರ್ಚಿ ಧಾರಾಪೂರ್ವಕಂ ಮಾಡಿಬಿಟ್ಟ ಕೆಯಿ ಸಾಯಿರ" ಎಂದಿದೆ.

ಕ್ರಿ.ಶ.೧೧೬೬ರ ಹುಯಿಲಗೋಳದ ಒಂದು ಶಾಸನವು ಭುಜಬಳಮಲ್ಲ ವೀರಬಿಜ್ಜಣದೇವ ಕಾಲದಲ್ಲಿ ಅಯ್ಯೊವೊಳೆಯ ಪುರವರಾಧೀಶ್ವರಪ್ಪ ಶ್ರೀಮದೆಂಟುನಾಡ ಪದಿನರುವರಾಂ ಬೆಳ್ವೊಲ ಮೂನ್ನೂರರ ಕಿಸ್ಕಾಡೆಳ್ಪತ್ತರ ಬಾಗಡಗೆ ಯೇಳ್ಪತ್ತರ ಪಟ್ಟಣದ ಪ್ರಭುಗಳು ಮಿಂತಿನಿತು ಗ್ರಾಮಾನುಗ್ರಾಮಗಳ ತಳ ಸಮಸ್ತ ಮುಂಮರಿದಂಡನಾನಾದೇಸಿಯುಂ" ಶ್ರೀಮದಗ್ರಹಾರ ಕೆಯ್ಯಾವೊಳೆಯಲ್ಲಿ ನೆರೆದು ಶ್ರೀ ಹೂಲಿಗೋಳ ಚಂಡೇಶ್ವರ ದೇವರ್ಗೆ ಬಿಟ್ಟ ಧರ್ಮಕ್ರಮವನ್ನು ಹೇಳಿದೆ.

ಕ್ರಿ.ಶ.೧೧೭೩ರ ಹರ್ತಿಯ ಒಂದು ಶಾಸನವು ವೀರ ಬಿಜ್ಜಣದೇವ ವರುಣದ ವಿಜಿಯ ೭ನೆಯ ವಿಜಯ ಸಂವತ್ಸರದ... ಪುಣ್ಯದಿನದೊಳು ಶ್ರೀಮತ ಹರತಿಯ ಹನ್ನಿರ್ಬರ್ಗಾವುಂಡಗ ಅರವತ್ತುಕ್ಕಾಲುಂ ಉಗುರ ಮೊನೂರ್ವರಂ ಸಾಸಿರ್ವರುಂ ಮುಖ್ಯವಾಗಿ ಹಟ್ಟಿಗಾರ ಬೀರವಣಧ ಹೆಗ್ಗಡೆರೆಮ್ಮರಸ ಗೋಯಿದೇಪ್ಪರದೇವರಾಚಾರ್ಯ ರ್ಚಾತವೇದ ಪಣ್ಡಿತರ ಕಾಲಂ ಕರ್ಚಿ ಧಾರಾಪೂರ್ವಕಂ ಮಾಡಿಬಿಟ್ಟುದಾಗಿ ಹೇಳಿದೆ.

ಕ್ರಿ.ಶ.೧೧೬೯ರ ನಿಡಗುಂದಿಯ ಒಂದು ಶಾಸನವು ಕರಗವಳರಧಿಷ್ಠಾಯಕ, ಲಕ್ಷ್ಮೀನಿಧಿ ಬಿಜ್ಜಲನ ದಕ್ಷಿಣ ಭುಜದಂಡನಾಥ ಮಾಧವದೇವನಾಥನು ಮಾಧವೇಶ್ವರ ದೇವಾಲಯ ಮಾಡಿಸಿದಂತೆಯೂ ಮಹಾಜನರಿಗೆ ಹಣವನ್ನು ದಾನವಾಗಿ ಇತ್ತಂತೆಯೂ ಹೇಳಿದ. ಕ್ರಿ.ಶ.೧೧೭೮ರ ಕಟಗೇರಿಯ ಒಂದು ಶಾಸನ ವೀರ ಚಾವುಂಡ ದೇವರ್ಗೆ ಶ್ರೇಯೋನಿಮಿತ್ಯವಾಗಿ ಮಹಾದೇವ ದಂಡನಾಯಕನು ದಂಡನಾಯಕ ತಿಕ್ಕಾರಸರಿಗೆ ಬಿನ್ನಪಂಗೈದು ಸುಗ್ಗಿವಾಡವನ್ನು ಕಡಕೆರೆ ಅಗ್ರಹಾರದ ೫೦೦ ಮಹಾಜನರಿಗೆ ಇತ್ತನೆಂದು ಹೇಳಿದೆ.

ಕ್ರಿ.ಶ.೧೨ನೇ ಕೊನೆಯ ಭಾಗದ ಯಲಬುರ್ಗಿಯ ಒಂದು ಶಾಶನ ವಿಕ್ರಮನ ಮಂತ್ರಿ ದೇವಣಾರ್ಯನಾಯಕ ಮೊದಲಾದವರು ಪಾಶ್ವನಾಥ ಚೈತ್ಯ(ದ್ವ)ಯ ಮನೆತ್ತಿಸಿ ದಾನವನ್ನು ಇತ್ತುದಾಗಿ ಹೇಳಿದೆ.

ಚಿಂಚನಮಟ್ಟಿಯ ಒಂದು ಶಾಸನದಲ್ಲಿ ಬಿಜ್ಜಣನ ಹೆಂಡತಿ ತ್ರಿಪುರಾ ದೇವಿಯೆಂದು ಹೇಳಲಾಗಿದೆ. ವಿಕ್ರಮನ ಹೆಂಡತಿಯ ಹೆಸರನ್ನು ಹೇಳುವ ಭಾಗ ಒಡೆದು ಹೋಗಿದೆ.[೧೬೩] ಆದರೆ ಇಲ್ಲಿ ಇವರ ಬಗೆಗಿನ ವಿಶೇಷವೇನೂ ತಿಳಿದು ಬಾರದು.

ಹೀಗೆ ಬಿಜ್ಜಣ ವಿಕ್ರಮರು ಸುಮರು ೫೦ ವರ್ಷಗಳವರೆಗೆ ಬೇರೆ ಬೇರೆ ಅರಸರ ಆಡಳಿತದಲ್ಲಿ ರಾಜ್ಯಭಾರ ಮಾಡಿದುದಾಗಿ ತಿಳಿಯುತ್ತದೆ.

**ಮೂರನೆಯ ಆಚುಗಿ ಮತ್ತು ಎರಡನೆಯ ಪೆರ್ಮಾಡಿ ೧೧೬೩-೧೧೯೪**

ಕೌಶಲ್ಯೆ ಮತ್ತು ದಶರಥರಿಗೆ ರಾಮ ಲಕ್ಷ್ಮೀಧರರು ಜನಿಸಿದಂತೆ ದೇಮಲದೇವಿ ಮುತ್ತು ಚಾವುಂಡವನೀಶನಿಗೆ ಆಚಿದೇವ ಮತ್ತು ಪೆರ್ಮಾಡಿಯರು ಜನಿಸಿದರಂತೆ[೧೬೪] ಆ ಆಚಿದೇವ ಮತ್ತು ಉದಾರಿ ಪೆರ್ಮಾಡಿದೇವರು ಘನಶೌರ್ಯವಂತರು, ಅಪ್ರತಿಮ ತೇಜೋಮೂರ್ತಿಗಳು, ಸತ್ಕೀರ್ತಿವಂತರು, ವೈರಿಗಳಿಗೆ ಯುದ್ಧಭಯಂಕರರು, ಲೋಭದೂರರು, ಸಮುದ್ರ ಗಂಭೀರರು ಆಗಿದ್ದರಂತೆ ಇವಲ್ಲದೆ ಇನ್ನೂ ಹಲವು ಗುಣವಿಶೇಷಗಳಿಂದ ಇವರು ಕೂಡ ನೆಗಳ್ತೆಗಂ ಪೂಗಳ್ತೆಂ ನೆಲೆ ಯೆನಿಸಿದ್ದರಂತೆ[೧೬೫] ಆಚಿದೇವರಸನನ್ನು ಭುಜಬಳಭೀಮ, ಸಾಹಸ ಉತ್ತುಂಗ, ಸತ್ಯರಾಧೇಯ, ನುಡಿದಂತೆಗಾಡ, ದಾನ ಗುಣಮಣಿ ಮಹಿಮೋನ್ನತ ಎಂದು ಬಣ್ಣಿಸಿದೆ.

ವೀರಚಾವುಂಡ ದೇವರಸರು ಕಿಸುಕಾಡೆಪ್ಪತ್ತು ಬಾಗಡಗೆ ಎಪ್ಪತ್ತು ಕೆಳವಾಡಿ ಮುನೂರು, ಇವು ಆದಿಯಾಗಿ ಹಲವು ದೇಶಗಳನ್ನು ಸುಖಸಂಕಥಾ ವಿನೋದದಿಂದ ಆಳುತ್ತಿದ್ದಾಗ "ಶ್ರೀ ಮತ್ಪಿರಿಯರಸಿ ದೇಮಲದೇವಿಯರು ಶ್ರೀಮತುಕುಮಾರ ಆಚಿದೇವನು ತನ್ನ ಕುಮಾರ ವೃತ್ತಿಯಾಳ್ವಿಕೆಯಿಂದ ಪಟ್ಟದಕಿಸುವೊಳಲನ್ನು ಆಳುತ್ತಿದ್ದರು[೧೬೬] ಎಂದು ಒಂದು ಶಾಸನ ಹೇಳಿದೆ. ಇಲ್ಲಿ ಉಕ್ತವಾಗಿರುವ "ಕುಮಾರವೃತ್ತಿ" ಯುವರಾಜ ಪಟ್ಟದ ಪೂರ್ವದ ಅಧಿಕಾರವಾಗಿದ್ದಿರಬೇಕು. ಇಲ್ಲಿ ಇವರು ಪೂರ್ವದರಸು ಇವನು ಮರಣವಪ್ಪಿದ ನಿಶ್ಚಿತ ದಿನ ತಿಳಿಯುವುದಿಲ್ಲ. ಇವರ ಕಾಲದಲ್ಲಿ ಪಟ್ಟದಕಿಸುವೊಳಲ್ ಮೊದಲಾದ ಭಾಗಗಳು ಸುಂದರವಾದ ತೋಟಪಟ್ಟಿಗಳಿಂದ ಸಂಪದ್ಭರಿತವಾದ ಹೊಲವನಗಳಿಂದ ಕೂಡಿದ್ದವು ಆಚರಸ ಪೆರ್ಮಾಡಿಯರು ಒಕ್ಕಲಿಗರ ಸಂತೋಷವೇ ತಮ್ಮ ಸಂತೋಷವೆಂದು ತಿಳಿದರು ಅವರಿಗೆ ಉಚಿತವಾಗಿ ಭೂಮಿ ಮನೆಗಳನ್ನು ದನಕನಕಗಳನ್ನು ಕೊಟ್ಟು ಪ್ರೋತ್ಸಾಹಿಸುತ್ತಿದ್ದರಂತೆ.

**ಅರಸೊತ್ತಿಗೆಯ ಅಂತ್ಯ**

ಬಿಜ್ಜಳ ಮತ್ತು ವಿಕ್ರಮರ ಮೂರನೆಯ ಆಚುಗಿ ೨ನೆಯ ಪೆರ್ಮಾಡಿಯರ ಕಾಲದಲ್ಲಿ ಚಾಲುಕ್ಯರು ಪುನಃ ರಾಜ್ಯ ಸ್ಥಾಪನೆಯ ಪ್ರಯತ್ನವು ನಡೆದಿದ್ದಿತು. ಹೊಯ್ಸಳರ ರಾಜ್ಯ ಬೆಳೆಸುವ ಆಶೆಯೂ ಅವ್ಯಾಹತವಾಗಿಸಾಗಿದ್ದಿತು. ಈ ಎಲ್ಲಾ ಪ್ರಯತ್ನಗಳ ಸಂಘರ್ಷ ಭೂಮಿಯಾಯಿತು. ಈ ನೆಲ, ಚಾಲುಕ್ಯರ ಅರಸು ೪ನೆಯ ಸೋಮೇಶ್ವರನು ಕ್ರಿ.ಶ.೧೧೨೪ರಲ್ಲಿ ತನ್ನ ಸಾಮ್ರಾಜ್ಯವನ್ನು ಪುನಃ ಎತ್ತಿಕಟ್ಟಿರುವ ಪ್ರಯತ್ನಿಸಿದರೂ. ಯಾದವ ಅರಸರ ಪ್ರತಿರೋಧದಿಂದ ತೀವ್ರ ಸೋಲನ್ನನುಭವಿಸಬೇಕಾಯಿತು. ಕ್ರಿ.ಶ.೧೧೯೧ರಲ್ಲಿ ಹೊಯ್ಸಳ ಅರಸು ೩ನೇಯ ವೀರಬಲ್ಲಾಳನು ಯಾದವ ಅರಸು ಭಿಲ್ಲಮನನ್ನು, ಚಾಲುಕ್ಯ ಅರಸು ೪ನೆಯ ಸೋಮೇಶ್ವರನನ್ನು ಸೋಲಿಸಿ ಈ

ನಾಡನ್ನು ಹಿಡಿದುಕೊಂಡುದಾಗಿ ಶಾಸನಗಳು ಹೇಳುತ್ತಿವೆ. ಆದರೂ ಕ್ರಿ.ಶ.೧೧೯೪ರಲ್ಲಿ ೪ನೆಯ ಸೋಮೇಶ್ವರ ಅಧಿಕಾರದಲ್ಲಿದ್ದನೆಂದು ಕಳಕಪ್ಪನ ಗುಡ್ಡದ ಶಾಸನ ಹೇಳಿದ. ೩ನೇ ವೀರಬಲ್ಲಾಳನ ತರುವಾಯ ೩ನೆಯ ನಾರಸಿಂಹನೂ ಈ ಆಕ್ರಮಣವನ್ನು ಮುಂದುವರಿಸಿದನು. ಆದರೆ ಅದು ಸಾಧ್ಯವಾಗದೆ ಕ್ರಿ.ಶ.೧೨೧೫ರ ಸುಮಾರಿನಲ್ಲಿ ಈ ನಾಡು ಮತ್ತೆ ಯಾದವರ ಕೈವಶವಾಯಿತು ಈ ಹೋರಾಟದಲ್ಲಿ ಸಿಂದ ವಂಶ ಮೂಲೆಗುಂಪಾಗಿ ಹೋಯಿತು. ಕರ್ನಾಟಕದ ರಾಜಕೀಯ ಚರಿತ್ರೆಯಿಂದ ಕಣ್ಮರೆಯಾಯಿತು.

ಹೀಗೆ ಸುಮಾರು ೧೫೦ ವರ್ಷಗಳ ಕಾಲ ಕರ್ನಾಟಕದ ರಾಜಕೀಯದಲ್ಲಿ ಮೈಲಿಗಲ್ಲನ್ನು ನಿಲ್ಲಿಸಿ, ಒಂದು ಸಾಮ್ರಾಜ್ಯಕ್ಕೆ ಬೆನ್ನಲೆಬಾಗಿ ನಿಂತು. ಈ ನಾಡಿನ ಹೆಸರು ಕನ್ನಡ ನಡಿನ ಚರಿತ್ರೆಯ ಉದ್ದಗಲಕ್ಕೂ ಹಬ್ಬಿ ನಿಲ್ಲುವಂತೆ ಮಾಡಿ ಕೊನೆಗೆ ರಾಜ್ಯರಾಜ್ಯಗಳ ತಾಕಲಾಟದ ಮಧ್ಯೆ ಸಿಲುಕಿ ನುಗ್ಗಾಗಿ ಆಂತರಿಕ ಹೋರಾಟದಿಂದ ಸಣ್ಣಾಗಿ ನಾಡಿನ ಚರಿತ್ರೆಯ ಸಂಪುಟದಿಂದ ಮರೆಯಾಗಿ ಹೋಯಿತು. ಈ ಸಿಂದವಂಶ. ಈ ವಂಶದ ನಾಶದೊಂದಿಗೆ ಇವನನ್ನು ಆಶ್ರಯಿಸಿದ ಸಾಮ್ರಾಜ್ಯವೂ (ಚಾಳುಕ್ಯ) ನಾಶವಾಯಿತು.

**ಹೊಯ್ಸಳರು**

ಆ ತರುವಾಯ ಈ ಸ್ಥಳದ ಮಹತ್ವವು ಕ್ರಮೇಣ ಕಡಿಮೆಯಾಗುತ್ತ ನಡೆಯಿತು. ಇದಕ್ಕೆ ಹತ್ತಿರದಲ್ಲಿರುವ ಗಿರಿದುರ್ಗ ಕೊಪ್ಪಳವು ಪ್ರಮುಖ್ಯತೆಯನ್ನು ಪಡೆಯಿತು. ಇವರ ಕಾಲದಲ್ಲಿ ಶಾಂತಲೆ ಗಂಗರಾಜರು ಜೈನ ಧರ್ಮದ ಎರಡು ಕಣ್ಣುಗಳಂತಿದ್ದರು. ಅವರಲ್ಲಿ ಗಂಗರಾಜ ಗಂಗವಾಡಿ ತೊಂಬತ್ತಾರು ಸಾಸಿರಕಲ್ಲ ಕೊಪಣವನ್ನೇ ಆದರ್ಶವಾಗಿಟ್ಟುಕೊಂಡಿದ್ದನು. ಇನ್ನೊಬ್ಬ ಮಂತ್ರಿ ಎಚಿರಾಜನು ಬೆಳಗುತ್ತಿನಾಡನ್ನು ನಿರ್ಮಿಸುವಲ್ಲಿ ಕೊಪ್ಪಳವನ್ನೇ ಮಾದರಿಯಾಗಿಟ್ಟುಕೊಂಡಿದ್ದನಂತೆ ವೀರಬಲ್ಲಾಳನ ಮಹಾಮಂತ್ರಿಯಾಗಿದ್ದ ಕವಡೆಯ ಬೊಪ್ಪನು ಕೊಪಣ ತೀರ್ಥಕ್ಷೇತ್ರಕ್ಕೆ ಬಂದುದರಿಂದ ಅದು ಉರ್ಜಿತವಾಯಿತು ಆತನು ದಾನ ಧರ್ಮದಲ್ಲಿ ಗಂಗನೊ ನಿಂಬನೋ ಮಾಧವನೋ ಚಾವುಂಡರಾಯನೊ ಎಂಬಂತಿದ್ದನಂತೆ.

**ಮುಸಲ್ಮಾನರು**

ಮುಂದೆ ಮುಸಲ್ಮಾನರ ದಾಳಿ ಆರಂಭವಾಗಿ ನೆಮಿಖಾನನು ಬಾದಾಮಿ, ತೋರಗಲ್ಲು, ಮುದುಗಲ್ಲು, ಕೊಪ್ಪಳ, ರಾಜ್ಯಗಳನ್ನೆಲ್ಲ ಹಿಡಿದು ಕೆಡಿಸುತ ಬರಲು ಆನೆಗುಂದಿಯ ಕಂಪಿಲ ಕುಮಾರರಾಮರು, ಅವನನ್ನು ಸೋಲಿಸಿದರು. ಅಲ್ಲೆಲ್ಲ ತಮ್ಮ ಮಾಂಡಲೀಕರನ್ನು ನೇಮಿಸಿದರು ಕೊಪಣವೊಂದು ಬಲಾಢ್ಯ ದುರ್ಗವೆಂದು ಅಲ್ಲಿ ತಿಮ್ಮರಾಜನೆಂಬುವವನು ಕಂಪಿಲನ ಮಾಂಡಲಿಕನಾಗಿದ್ದನೆಂದೂ ಕುಮಾರರಾಮನ ಸಾಂಗತ್ಯ ಹೇಳಿದೆ.

**ವಿಜಯನಗರ**

ತರುವಾಯ ಈ ಪ್ರದೇಶ ವಿಜಯನಗರ ಅರಸರ ವಶವಾಯಿತು. ಹರಿಹರ ಮತ್ತು ಭಕ್ತಸಮೂಹ ಸೇರಿ ಸಿಂಹನಂದ್ಯಾಚಾರ್ಯರ ನಿಷಧಿಗೆ ನಿಲ್ಲಿಸಿದುದಾಗಿ ಒಂದು ಶಾಸನ ಹೇಳಿದೆ. ಕುಷ್ಟಗಿ ತಾಲ್ಲೂಕಿನ ಪುರದ ಒಂದು ಶಾಸನದಲ್ಲಿ ವೀರ.ಪ್ರತಾಪದೇವ ರಾಯನಿಗೆ

ಧರ್ಮವಾಗಬೇಕೆಂದಲು ಆತನ ರಾಣಿವಾಸದ ಓರ್ವವ್ಯಕ್ತಿ ಸೋಮೇಶ್ವರದೇವರ ನಿತ್ಯಪೂಜೆಗೆ ಮೊದಲಾದವುಗಳಿಗೆ ಭೂದಾನವಿತ್ತುದಾಗಿ ಹೇಳಿದೆ. ಕೃಷ್ಣದೇವರಾಯನ ಕಾಲದ ಎರಡು ಶಾಸನಗಳು ಇಲ್ಲಿ ದೊರೆತಿವೆ. ರಕ್ಕಸತಂಗಡಗಿ ಯುದ್ಧದಲ್ಲಿ ಮಡಿದ ರಾಮರಾಯನ ಮಗ ಶ್ರೀ ರಾಮರಾಜನು ವಿಜಯವಿಠಲನ ದಕ್ಷಿಣದ್ವಾರದ ಆರಂಭ ಕಾಲಕ್ಕೆ ದಾನವಿತ್ತ ಆರು ಹಳ್ಳಿಗಳಲ್ಲಿ ಕೊಪ್ಪಳದೇಶದ ಲೇಪಗೇರಿಯ ಒಂದಾಗಿತ್ತು ಇದರಿಂದ ಈ ಕಾಲದಲ್ಲಿ ಈ ಸ್ಥಳ "ಕೊಪ್ಪಳದೇಶ" ಎಂದು ಪ್ರಸಿದ್ಧಿ ಪಡೆದುದಾಗಿ ತಿಳಿಯುತ್ತದೆ.

**ವಿಜಾಪುರದ ಆದಿಲ್‌ಷಾಯಿ**

ವಿಜಯನಗರದ ಅವನತಿ ನಂತರ ಇದು ವಿಜಾಪುರದ ಆದಿಲ್‌ಷಾಹಿ ಆಡಳಿತಕ್ಕೆ ಒಳಪಟ್ಟಿತು. ಈ ಸ್ಥಳವನ್ನು ಅವರು "ಮುಜಾಫರ್ ನಗರ" ಎಂದು ಕರೆದರು.[೧೬] ಮುಂದೆ ಈ ಸ್ಥಳವು ೨ನೇ ಬಹುಲೋಲ ಎಂದು ಕರೆಯಲಾಗುತ್ತಿದ್ದ. ಅಬ್ದುಲ್ ರಹೀಮನಿಗೆ ಜಹಗೀರಾಗಿ ಕೊಡಲ್ಪಟ್ಟಿತು. ಅವನ ಪ್ರತಿನಿಧಿಯಾಗಿದ್ದ ಹುಸೇನ್‌ಮಿಯಾನನ್ನು ಶಿವಾಜಿ ಸೆರೆ ಹಿಡಿದು ಕೊಪ್ಪಳ ಕೋಟೆಯನ್ನಿತ್ತರೆ ಅವನನ್ನು ಬಿಡುವುದಾಗಿ ತಿಳಿಸಿದನು.

**ಮರಾಠ**

ಮುಂದೆ ಮರಾಠರ ರಾಜ ಶಿವಾಜಿಯ ಆಡಳಿತಕ್ಕೆ ಈ ಪ್ರದೇಶ ಒಳಪಟ್ಟಿತು. ಈ ಪ್ರದೇಶದ ಆಡಳಿತ ನೋಡಿಕೊಳ್ಳಲು ಸುಭಾನಜಿರಾವ್ ಎಂಬುವವನಿದ್ದನು ಆತನು ಈ ಪಟ್ಟಣದಿಂದ ತುಂಗಭದ್ರ ನದಿಯಾಚೆ ಮರಾಠ ಸಾಮ್ರಾಜ್ಯ ಹಬ್ಬುವಂತೆ ಮಾಡಿದನು.

**ಹೈದರಾಲಿ**

ಮರಾಠರ ತರುವಾಯ ಈ ಸ್ಥಳವು ಹೈದರಾಲಿಯ ಕೈ ಸೇರಿತು ಅವನು ಈ ನಾಡನ್ನು ಆಳಲು ಮೊಹ್ಮದ್ ಉಸ್ಮಾನ್ ಕೋವಾರ ಎಂಬುವವನನ್ನು ನೇಮಿಸಿನು ಇವನು ಕೊಪ್ಪ ಜಿಲ್ಲೆಯ ಕೊಪ್ಪಳ ದ ೨ನೇ ಬಾಗಿಲು ಮತ್ತು ಬಹದ್ದೂರಬಂಡೆಯ ಕೋಟೆಯನ್ನು ಕಟ್ಟಿಸಿದನು. ಈ ಸ್ಥಳ ಮರಾಠರೊಂದಿಗೆ ಹೋರಾಡಿ ವಶಪಡಿಸಿಕೊಂಡ ಸಂಕೇತವಾಗಿ ಟಿಪ್ಪು ಸುಲ್ತಾನನ ಈ ಸ್ಥಳವನ್ನು "ಸುಲ್ತಾನಗಡ" ಎಂದು ಕರೆದ.

**ಬ್ರಿಟೀಷರು**

ಕ್ರಿ.ಶ.೧೭೯೯ರಲ್ಲಿ ಬ್ರಿಟೀಷ್ ಅಧಿಕಾರಿ ಕರ್ನಲ್ ಕಿಡ್‌ನು ಸವಣೂರು, ಕೊಪ್ಪಳ, ಬೆಂಗಳೂರು ಮೊದಲಾದ ಪಟ್ಟಣಗಳನ್ನು ವಶಪಡಿಸಿಕೊಂಡನು ನಂತರ ೧೮೬೧ರಲ್ಲಿ ಈ ಭಾಗವನ್ನು ನವಾಬರಿಗೆ ಜಾಹಗೀರರಾಗಿ ಕೊಡಲ್ಪಟ್ಟಿತು.

**ಹೈದ್ರಾಬಾದ್‌ನ ನಿಜಾಮರ ಆಡಳಿತ**

ಹೈದ್ರಾಬಾದ ನಿಜಾಮರ ಆಡಳಿತಕ್ಕೆ ಅವಿಭಜಿತ ರಾಯಚೂರು ಜಿಲ್ಲೆಗೆ ಒಳಪಟ್ಟಿತ್ತು ಇದರಲ್ಲಿ ಕೊಪ್ಪಳ ಹಾಗೂ ಯಲಬುರ್ಗ ತಾಲೂಕಗಳನ್ನು ೧೮೬೧ರಲ್ಲಿ ಈ ನವಾಬ ಸಾಲಾರಜಂಗ ಅವ್ವಲ್ ಅವನಿಗೆ ಜಹಗೀರಾಗಿ ಕೊಡಲ್ಪಟ್ಟಿತು ಭಾರತಕ್ಕೆ ಸ್ವತಂತ್ರ್ಯ ಬರುವವರೆಗೂ ಈ ಪ್ರದೇಶ ಸಾಲಾರಜಂಗನ ಅಧಿಪತ್ಯದಲ್ಲಿಯೇ ಇದ್ದಿತು.

## ಅಡಿಟಿಪ್ಪಣಿಗಳು

೧. ಕೊಪ್ಪಳ ಜಿಲ್ಲೆಯ ಅಂಕಿ ಅಂಶಗಳ ನೋಟ ೨೦೧೨-೧೩
೨. ಅಂತರ್ ಜಾಲದಿಂದ ಪಡೆದುಕೊಂಡ ಮಾಹಿತಿ
೩. ಅಂತರ್ ಜಾಲದಿಂದ ಪಡೆದುಕೊಂಡ ಮಾಹಿತಿ
೪. ಕೊಪ್ಪಳ ಜಿಲ್ಲೆಯ ಅಂಕಿ ಅಂಶಗಳ ನೋಟ ೨೦೧೨-೧೩
೫. ಅದೇ,
೬. ಶಾಮಾಚಾರ್ಯ ಜಿ, ಯಲಬುರ್ಗಿ ತಾಲೂಕ ದರ್ಶನ, ಪುಟ-೬
೭. ಅದೇ, ಪುಟ-೩೨
೮. ಉಮಾಶಂಕರ ಹಿರೇಮಠ, ಯಲಬುರ್ಗಿ ಕೆಂಪು ಕೆರೆಗೆ ಕಯಕಲ್ಪ, ಪ್ರಜಾವಾಣಿ ದಿನಪತ್ರಿಕೆ ಜುಲೈ ೧ ೨೦೦೦, ಪುಟ-೩
೯. ಮಹಾಂತೇಶ ಎನ್.ಎಸ್, ಹೊಸದುರ್ಗ ಪರಿಸರದ ಸಾಂಸ್ಕೃತಿಕ ಕಧ್ಯಯನ (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨, ಪುಟ-೩೦
೧೦. ಶಾಮಾಚಾರ್ಯ ಜಿ, ಯಲಬುರ್ಗಿ ತಾಲೂಕ ದರ್ಶನ, ಪಿ.ಬಿಎಚ್.ಪ್ರಕಾಶನ, ಬೆಂಗಳೂರು, ೧೯೮೬, ಪುಟ-೧೩
೧೧. ಅದೇ, ಪುಟ-೧೩
೧೨. ಪಪ್ಪು ಆರ್.ಎಸ್, ಪ್ರಾಚೀನತಮ ಮಾನವ ಸಂಸ್ಕೃತಿಗಳು, ವಿಕಸನದ ಹಂತಗಳು, ಕರ್ನಾಟಕ ಚರಿತ್ರೆ, ಸಂಪುಟ-೧, ಪುಟ-೯೮
೧೩. ಗೋಪಾಲ ಆರ್, ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪುಟ-೧೧
೧೪. ಶಿವತಾರಕ ಕೆ.ಬಿ, ಕರ್ನಾಟಕದ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೧೫. ಅದೇ,
೧೬. Allchin F.R, Neolithic Cattel Keepers of South India, Combridge, 1963, p-67
೧೭. ಕರ್ನಾಟಕ ಭಾರತಿ, ೬-೧, ಪುಟ-೬೪, ೭೫
೧೮. ಕರ್ನಾಟಕ ಭಾರತಿ, ೬-೧, ಪುಟ-೮, ೭೫
೧೯. ರೈಸ್ ಬಿ.ಎಲ್, ಎಫಿಗ್ರಫಿಯ ಕರ್ನಾಟಕ, ಸಂಪುಟ-೧೧, ಹಿರಿಯೂರು, ಪುಟ-೨೯೨
೨೦. ಹೂಗಾರ ಬಿ.ಪಿ, ಪ್ರಾಚೀನ ಭಾರತದ ಇತಿಹಸ, ಪುಟ-೬
೨೧. ಭರಂಪುರ ಕಣುಮಪ್ಪ, ಬೇಚಿರಾಕ್ ಗ್ರಾಮ ಕುಂಬಾರ ಕಟ್ಟೆ ಸಂಸ್ಕೃತಿ, ಪುಟ-೩೪
೨೨. ಅದೇ, ಪುಟ-೮೮
೨೩. ಶಿರೂರ ಬಿ.ವ್ಹಿ (ಸಂ), ಸಿದ್ಧಶ್ರೀ, ಪುಟ-೨೮
೨೪. ಅಲ್ಲಮಪ್ರಭು ಬೆಟ್ಟದೂರು (ಸಂ), ಕೊಪ್ಪಳ ಜಿಲ್ಲಾ ದರ್ಶನ, ಪುಟ-೯
೨೫. ರಾಜಶೇಖರಪ್ಪ ಬಿ, ಚಂದ್ರವಳ್ಳಿ ಶಾಸನದ ಮೇಲೆ ಹೊಸ ಬೆಳಕು, ಸಂಪುಟ-೬೯, ಸಂಚಿಕೆ-೨
೨೬. ಶಿರೂರ ಬಿ.ವ್ಹಿ, ಸಿದ್ಧಶ್ರೀ ಶ್ರೀ ಸಿದ್ಧರಾಮೇಶ್ವರ ಪ್ರಕಾಶನ, ಯಲಬುರ್ಗ, ೨೦೦೦, ಪುಟ-೨೯
೨೭. ಅದೇ, ಪುಟ-೨೯
೨೮. ಅದೇ, ಪುಟ-೩೦
೨೯. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ, ಪುಟ-೨೫೭
೩೦. ಅಲ್ಲಮಪ್ರಭು ಬೆಟ್ಟದೂರು (ಸಂ), ಕೊಪ್ಪಳ ಜಿಲ್ಲಾ ದರ್ಶನ, ಪುಟ-೯
೩೧. ದೇಸಾಯಿ ಪಿ.ಬಿ, ಶಾಸನ ಪರಿಚಯ, ಪುಟ-೫೧
೩೨. ಅದೇ, ಶಾಸನ-೩೧
೩೩. ಅದೇ, ಶಾಸನ-೩೦
೩೪. ಅದೇ, ಶಾಸನ-೨೯
೩೫. ಅದೇ, ಶಾಸನ-೨೫
೩೬. ಅದೇ, ಶಾಸನ-೪೦
೩೭. ಅದೇ, ಶಾಸನ-೩೭

೩೮. ಅದೇ, ಶಾಸನ-೨೬
೩೯. ಅದೇ, ಶಾಸನ-೪೭
೪೦. ಅದೇ, ಶಾಸನ-೪೫
೪೧. ಅದೇ, ಶಾಸನ-೪೮
೪೨. ಅದೇ, ಶಾಸನ-೫೨
೪೩. ಅದೇ, ಶಾಸನ-೪೬
೪೪. ಅದೇ, ಶಾಸನ-೪೮
೪೫. ಅದೇ, ಶಾಸನ-೩೬
೪೬. ಅದೇ, ಶಾಸನ-೪೯
೪೭. ಅದೇ, ಶಾಸನ-೫೦
೪೮. ಅದೇ, ಶಾಸನ-೩೫
೪೯. ಅದೇ, ಶಾಸನ-೨೭
೫೦. ಅದೇ, ಶಾಸನ-೨೮



೫೧. EC.vi, Kol, 162, Mg,36
೫೨. ಶಿರೂರ ಬಿ.ವ್ಹಿ, ಯಲಬುರ್ಗಿ ಸಿಂದರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪುಟ-೩
೫೩. Epigraphia Karnataka xii, HI, 20,50,98, xidg, 43
೫೪. ಕರ್ನಾಟಕ ಭಾರತಿ-೧,೧
೫೫. Epigraphia Indica, 9, xii, 230
೫೬. Dinakar Desai, Maharastra Mahamandaleswar Under the chalukyas of Kalyani, p-2
೫೭. Epigraphia xii, p-130
೫೮. Jurnal of the K.U.Humanitics, x, p-146
೫೯. Epigraphia, xi, p-43
೬೦. Dinakar Desai, Maharastra Mahamandaleswar Under the chalukyas of Kalyani, p-70-71
೬೧. Epigraphia Indica-9, xx
೬೨. S.I.I, 9.9.xv, 231, 241
೬೩. ಅದೇ, 9.9.xv, 74
೬೪. ಅದೇ, 9.9.xv, 134
೬೫. ಅದೇ, 9.9.xi, ii-199, 155
೬೬. ಪಾಂಡುರಂಗರಾಯರು ದೇಸಾಯಿ, ಶಾಸನ ಪರಿಚಯ, ಪುಟ-೪೨
೬೭. S.I.I, 9.9. xx,92
೬೮. ಅದೇ, 9.9.xi-ii, 119-155
೬೯. ಅದೇ, 9.9.xx, 238
೭೦. ಅದೇ, 9.9.xx, 77
೭೧. ಅದೇ, 9.9.xv-ii, 238
೭೨. ಅದೇ, 9.9.xv-ii, 155
೭೩. ಅದೇ, 9.9.xx-238
೭೪. ಅದೇ, 9.9.xv-ii, 119
೭೫. ಅಣ್ಣಿಗೇರಿ ಎ.ಎಂ, ಪಟ್ಟದಕಲ್ಲು ಗುಡಿಗಳು, ಪುಟ-೮೮
೭೬. South Indian Inscription, 9.9.xx-74
೭೭. ಅದೇ, 9.9.xx-74
೭೮. ಅದೇ, 9.9.xv-ii-117
೭೯. ಅದೇ, 9.9.xx-92
೮೦. ಅಣ್ಣಿಗೇರಿ ಎ.ಎಂ, ಪಟ್ಟದಕಲ್ಲು ಗುಡಿಗಳು, ಪುಟ-೮೮
೮೧. SII, 9.9. xx-92

೮೨. ಅದೇ, 9.9.xx, 77
೮೩. ಅದೇ, 9.9.xv-ii, 155, xi-41
೮೪. ಅದೇ, 9.9.xi-ii, 11-129
೮೫. ಅದೇ, 9.9.xx-74
೮೬. ಅದೇ, 9.9.xv-ii-129
೮೭. ಅದೇ, 9.9.xv-ii-115
೮೮. ಅದೇ, 9.9.xv-ii, 155, xv-41
೮೯. ಅದೇ, 9.9.xv-ii, 119, 155
೯೦. ಅದೇ, 9.9.xx, 42
೯೧. ಅದೇ, 9.9.xx, 241
೯೨. ಅದೇ, 9.9.xx, 47
೯೩. ಅಣ್ಣಿಗೇರಿ ಎ.ಎಂ, ಪಟ್ಟದಕಲ್ಲು ಗುಡಿಗಳು, ಪುಟ–೮೯
೯೪. ಅಣ್ಣಿಗೇರಿ ಎ.ಎಂ ಮತ್ತು ಮೇವುಂಡಿ ಮಲ್ಲಾರಿ, ಶಾಸನ ಸಾಹಿತ್ಯ ಸಂಚಯ, ಪುಟ–೮೩
೯೫. ಅಣ್ಣಿಗೇರಿ ಎ.ಎಂ, ಪಟ್ಟದಕಲ್ಲು ಗುಡಿಗಳು, ಪುಟ–೮೯
೯೬. S.I.I, 9.9, xx.92
೯೭. ಪಾಂಡುರಂಗರಾಯರು ದೇಸಾಯಿ, ಶಾಸನ ಪರಿಚಯ, ಪುಟ–೩೧
೯೮. S.I.I, 9.9, i-ii, 163
೯೯. ಅದೇ, 9.9.xi-iii, 176
೧೦೦. ಅದೇ, 9.9.xi-ii, 170
೧೦೧. ಅದೇ, 9.9.xv, 238
೧೦೨. ಅದೇ, 9.9.xi-ii, 119,155
೧೦೩. Ephigraphia Indica, xx
೧೦೪. S.I.I, 9.9, xv, 43
೧೦೫. ಅದೇ, 9.9.xi, 119-155, xx, 423
೧೦೬. ಅದೇ, 9.9.xv, 238
೧೦೭. ಅದೇ, 9.9.xv, 134
೧೦೮. ಅದೇ, 9.9.xi-ii, 155
೧೦೯. ಅಣ್ಣಿಗೇರಿ ಎ.ಎಂ ಮತ್ತು ಮೇವುಂಡಿ ಮಲ್ಲಾರಿ, ಶಾಸನ ಸಾಹಿತ್ಯ ಪರಿಚಯ, ಪುಟ–೧೨೯
೧೧೦. ಅದೇ, ಪುಟ–೧೨೯
೧೧೧. Karnataka Inscription, Vol-V, p-72
೧೧೨. Mahamadleswara Under the Challukysa of Kalyan
೧೧೩. ಪಾಂಡುರಂಗರಾಯರು ದೇಸಾಯಿ, ಶಾಸನ ಪರಿಚಯ, ಪುಟ–೩೫
೧೧೪. S.I.I, 9.9.xi-ii, 129
೧೧೫. ಅದೇ, 9.9.xv, 77
೧೧೬. ಅದೇ, 9.9.xi-ii, 115
೧೧೭. ಅದೇ, 9.9.xv, 155
೧೧೮. ಅದೇ, 9.9.xv, 155
೧೧೯. ಅದೇ, 9.9.xv, 119
೧೨೦. ಪಾಂಡುರಂಗ ರಾಯರು ದೇಸಾಯಿ, ಶಾಸನ ಪರಿಚಯ, ಪುಟ–೫೩
೧೨೧. S.I.I. 9.9.xv, 155
೧೨೨ ಅದೇ, 9.9.xv, 47
೧೨೩. ಅದೇ, 9.9.xv, 147
೧೨೪. ಅದೇ, 9.9.xv, 74
೧೨೫. ಅದೇ, 9.9.xv, 77

೧೨೬. ಅದೇ, 9.9.xv, 241
೧೨೭. ಅದೇ, 9.9.xv 117
೧೨೮. ಅಣ್ಣಿಗೇರಿ ಎ.ಎಂ, ಪಟ್ಟದ ಕಲ್ಲು ಗುಡಿಗಳು, ಪುಟ-೮೯, ೯೦
೧೩೦. S.I.I, 9.9.xv, 134
೧೩೧. ಅಣ್ಣಿಗೇರಿ ಎ.ಎಂ, ಪಟ್ಟದ ಕಲ್ಲು ಗುಡಿಗಳು, ಪುಟ-೮೧, ೯೦
೧೩೨. ಅದೇ, ಪುಟ-೯೦
೧೩೩. ಅದೇ, ಪುಟ-೯೦
೧೩೪. S.I.I, 9.9.xv, 238
೧೩೫. ಅದೇ, 9.9.xv, 238
೧೩೬. ಅದೇ, 9.9.xv, 238
೧೩೭. ಅದೇ, 9.9.xv, 236
೧೩೮. Ephigraphia Indica, xx
೧೩೯. S.I.I, 9.9.xv, 241
೧೪೦. ಅದೇ, 9.9.xv, 248
೧೪೧. ಅದೇ, 9.9.xv, 47
೧೪೨. ಅಣ್ಣಿಗೇರಿ ಎ.ಎಂ, ಪಟ್ಟದಕಲ್ಲು ಗುಡಿಗಳು, ಪುಟ-೯೪
೧೪೩. S.I.I, 9.9.xv, 47
೧೪೪. ಅದೇ, 9.9 and Ep, 1928-29
೧೪೫. ಪಾಂಡುರಂಗರಾಯರು ದೇಸಾಯಿ, ಶಾಸನ ಪರಿಚಯ, ಪುಟ-೪೨
೧೪೬. S.I.I, 9.9.xv, 134
೧೪೭. ಅದೇ, 9.9.xv, 236
೧೪೮. The Mahamandaleswaras Under the Chalukyas of Kalyani, p-99
೧೪೯. S.I.I, 9.9.xv, 239
೧೫೦. ಅದೇ,
೧೫೧. ಪಾಂಡುರಂಗರಾಯರು ದೇಸಾಯಿ, ಶಾಸನ ಪರಿಚಯ, ಪುಟ-೩೬
೧೫೨. ಅಣ್ಣಿಗೇರಿ ಎ.ಎಂ, ಐಹೊಳೆ, ಪುಟ-೧೬೧
೧೫೩. S.I.I, 9.9.xv, 243
೧೫೪. ಅದೇ, 9.9.xv,241
೧೫೫. Ep.9.xx.no-12
೧೫೬. ಪಾಂಡುರಂಗರಾಯರು ದೇಸಾಯಿ, ಶಾಸನ ಪರಿಚಯ, ಪುಟ-೩೬
೧೫೭. ಅಣ್ಣಿಗೇರಿ ಎ.ಎಂ, ಮತ್ತು ಮೆವುಂಡಿ ಮಲ್ಲಾರಿ, ಶಾಸನ ಸಾಹಿತ್ಯ ಸಂಚಯನ, ಪುಟ-೧೨೯
೧೫೮. ಅಣ್ಣಿಗೇರಿ ಎ.ಎಂ, ಐಹೊಳೆ, ಪುಟ-೧೬೦-೧೬೧
೧೫೯. S.I.I, 9.9.xv, 243
೧೬೦. Ep.9.xx.no-12
೧೬೧. Andraprades Areh Series xxx, p-267
೧೬೨. S.I.I, 9.9.xv, 241
೧೬೩. Ephigraphia Indiaca.9.xx
೧೬೪. ಅಣ್ಣಿಗೇರಿ ಎ.ಎಂ, ಪಟ್ಟದಕಲ್ಲು ಗುಡಿಗಳು, ಪುಟ-೯೦
೧೬೫. S.I.I, 9.9.xv, 74
೧೬೬. ಅಣ್ಣಿಗೇರಿ ಎ.ಎಂ, ಪಟ್ಟದಕಲ್ಲು ಗುಡಿಗಳು, ಪುಟ-೯೧-೯೨
೧೬೭. ಅಲ್ಲಮಪ್ರಭು ಬೆಟ್ಟದೂರು (ಸಂ), ಕೊಪ್ಪಳ ಜಿಲ್ಲಾ ದರ್ಶನ, ಪುಟ-೧೨

ಅಧ್ಯಾಯ : ಮೂರು

# ದೇವಾಲಯ ಮತ್ತು ಮೂರ್ತಿಶಿಲ್ಪಗಳು

- ೩.೧. ಶೈವ ದೇವಾಲಯಗಳು
- ೩.೨. ವೈಷ್ಣವ ದೇವಾಲಯಗಳು
- ೩.೩. ಶಾಕ್ತ ದೇವಾಲಯಗಳು
- ೩.೪. ಇತರೆ
- ೩.೫. ಮೂರ್ತಿ ಶಿಲ್ಪಗಳು
- ೩.೬. ಶಾಸನಗಳು

### ಅಧ್ಯಾಯ – ಮೂರು

# ದೇವಾಲಯ ಮತ್ತು ಮೂರ್ತಿಶಿಲ್ಪಗಳು

ಮಾನವ ಮತ್ತು ಪ್ರಕೃತಿ ಬೇರ್ಪಡಿಸಲಾಗದ ಅವಿನಾಭಾವ ಸಂಬಂಧವನ್ನು ಹೊಂದಿದ್ದು, ಮಾನವನು ಪ್ರಕೃತಿಯ ಒಂದು ಭಾಗವಾಗಿದ್ದಾನೆ. ಪ್ರಾಚೀನ ಕಾಲದಲ್ಲಿ ಮಾನವನು ತನ್ನ ಇರುವಿಕೆಗಾಗಿ ನಿರಂತರವಾಗಿ ಪ್ರಕೃತಿಯೊಡನೆ ಸೆಣಸಾಡಬೇಕಿತ್ತು. ಆಹಾರಕ್ಕಾಗಿ ಅಲೆಯುವಾಗ ಪ್ರಾಣಿಗಳನ್ನು ಎದುರಿಸಿ ಕೊಲ್ಲಲು ಸದಾ ಜಾಗರೂಕನಾಗಿರುವಂತೆ ಮಾಡಿತ್ತು. ಇದರ ಜೊತೆಗೆ ಪ್ರಕೃತಿ ಅವನಲ್ಲಿ ಭಯ ಮತ್ತು ಆಶ್ಚರ್ಯ, ವಿಸ್ಮಯಗಳನ್ನು ಉಂಟುಮಾಡಿತು. ಮಳೆ, ಗಾಳಿ, ಗುಡುಗು, ಸಿಡಿಲುಗಳು, ಹುಟ್ಟು, ಸಾವುಗಳು ನಿಸರ್ಗನಿಯಮಗಳೇ ಎಂಬುದನ್ನು ಅರಿಯದ ಕಾರಣ ಅವನಲ್ಲಿ ಭೀತಿಯನ್ನು ಮೂಡಿಸಿದವು. ಹಾಗಾಗಿ ನಿಸರ್ಗದಲ್ಲಿ ಮನುಷ್ಯ ಶಕ್ತಿಗಿಂತಲೂ ಮಿಗಿಲಾದ ಅದ್ಭುತ ಶಕ್ತಿ (ದೇವರು) ಇದೆ ಎಂದು ನಂಬಿದನು. ನಿಸರ್ಗದ ಆ ಅದ್ಭುತ ಶಕ್ತಿಯ ರಹಸ್ಯವನ್ನು ಅರಿಯುವ ಕುತೂಹಲ ಉಂಟಾಯಿತು. ಇದಕ್ಕಾಗಿ ನಿಸರ್ಗ ಶಕ್ತಿಗಳನ್ನು ಪವಿತ್ರ ಪೂಜಾರ್ಹ ಎಂದು ನಂಬಿದನ್ನು, ಶಕ್ತಿಯನ್ನು, ಒಲಿಸಿಕೊಳ್ಳಬೇಕಾದರೆ ಅದನ್ನು ಆರಾಧಿಸಬೇಕು. ತಾನು ಸಾಧಿಸಬೇಕಾದ ಕಾರ್ಯಗಳಿಗೆ ಇಂತಹ ಶಕ್ತಿಯ ಬೆಂಬಲ ಆಶೀರ್ವಾದ ಅವಶ್ಯವೆಂದು ಭಾವಿಸಿದ ಅದುದರಿಂದ ಆ ಶಕ್ತಿ ಒಂದು ರೂಪ ನೀಡಿ ಅದನ್ನು ಚಿತ್ರಿಸಿ ಪ್ರತಿಮೆಯನ್ನಾಗಿಸಿ ಪೂಜಿಸುವ ಪದ್ಧತಿಯನ್ನು ರೂಢಿಗೆ ತಂದನು. ತನ್ನ ಕಲ್ಪನೆಯ ಕುಂಚದಿಂದ ಚಿತ್ರವೊಂದನ್ನು ರೇಖಿಸಿ ಅದಕ್ಕೆ ಶಕ್ತ ಆಭರಣ ತೊಡಿಸಿ ಇಡೀ ಚಿತ್ರದ ಸುತ್ತಲೂ ಒಂದು ಮಂಡಲವನ್ನು ಎಳೆದು ಅದು ಪವಿತ್ರವೆಂದು ಭಾವಿಸಿದನು. ಕಾಲಾನಂತರದ ಇಂತಹ ಚಿತ್ರಗಳಿಗೆ ಬದಲಾಗಿ ಪ್ರತಿಮೆಯನ್ನು ಮಾಡಿ ಅವುಗಳಿಗೆ ಪ್ರತ್ಯೇಕ ಸ್ಥಳದಲ್ಲಿಟ್ಟು ಸುತ್ತಲೂ ರಕ್ಷಣೆಯ ಗೋಡೆ ನಿರ್ಮಿಸಿ ಪೂಜಿಸತೊಡಗಿದನು. ಈ ರೀತಿಯಾಗಿ ಬೆಳವಣಿಗೆಯಾದ ಕಲೆ ಮತ್ತು ವಾಸ್ತುಶಿಲ್ಪ, ದೇವಾಲಯಗಳ ನಿರ್ಮಾಣಕ್ಕೆ ನಾಂದಿಯಾಯಿತು. ಕಲೆಯ ವಿಕಾಸಕ್ಕೆ ಪ್ರೇರಣೆಯಾಯಿತು.

ವಾಸ್ತು ಶಿಲ್ಪವನ್ನು ಕುರಿತು ಅನೇಕ ಪ್ರಾಚೀನ ಗ್ರಂಥಗಳು ಹಾಗೂ ವಿದ್ವಾಂಸರು ಅನೇಕ ವಿಚಾರಧಾರೆಗಳನ್ನು ಹರಿಸಿದ್ದಾರೆ. ಅಂತಹವುಗಳಲ್ಲಿ ಮುಖ್ಯವಾಗಿ ಬೃಹತ್ ಸಂಹಿತೆ, ಮಾನಸಾರ, ಮಾಯಮತ, ಸಮರಾಂಗಣ ಸೂತ್ರದಾರ, ಕಾಶ್ಯಪಶಿಲ್ಪ, ಅಗಸ್ತ್ಯಸಕಲಾಧಿಕಾರ, ಅಪರಾಚಿತ, ಪುಜ್ಞಾ, ಪ್ರಸಾದ ಮಂಡನ, ರೂಪಮಂನ, ಅಭಿಲಾಷಿತಾರ್ಥ ಚಿಂತಾಮಣಿ ಮತ್ತು ತಂತ್ರ ಸಮುಚ್ಚಯ[೧]

ದೇವಾಲಯ ನಿರ್ಮಾಣವು ಇಡೀ ಸಮಾಜದ ಧಾರ್ಮಿಕ ಶ್ರದ್ಧೆಯ ಹಾಗೂ ಭಕ್ತಿಯ ಪ್ರತೀಕವೆನಿಸಿದ್ದು ಆಯಾಯಾ ಧಾರ್ಮಿಕ ಮತಗಳಿಗೆ ಅನುಗುಣವಾಗಿ ಈ ಪೂಜಾಸ್ಥಾನಗಳು ಬೇರೆ ಬೇರೆ ಹೆಸರಿನಿಂದ ಕರೆಯಲ್ಪಟ್ಟವು ಅಂದರೆ ಹಿಂದೂಗಳು ದೇವಾಲಯ ಎಂದು ಕರೆದರೆ, ಜೈನರು "ಬಸದಿ" ಎಂದೂ ಬೌದ್ಧರು ಚೈತ್ಯವೆಂದೂ, ಮುಸಲ್ಮಾನರು, ಮಸೀದಿಗಳೆಂದು ಮತ್ತು ಕ್ರಿಶ್ಚಿಯನ್ನರು ಚರ್ಚ್‌ಗಳೆಂದು ಕರೆದರು[೨]

**ಯಲಬುರ್ಗ ಪಟ್ಟಣದ ದೇವಾಲಯಗಳು**

ಯಲಬುರ್ಗ ಪಟ್ಟಣವು ಒಂದು ಸಾಂಸ್ಕೃತಿಕ ಕೇಂದ್ರವಾಗಿ ಬಿಂಬಿತವಾಗಿದ್ದು ಎಲ್ಲಾ ಮತ-ಧರ್ಮಗಳ ಆಚರಣೆಗೂ ಮನ್ನಣೆ ದೊರೆತಿಗೆ. ಕರ್ನಾಟಕದ ಎಲ್ಲ ರಾಜಮನೆತನಗಳು ಈ ನಾಡನ್ನು ವಾಸ್ತುಶಿಲ್ಪ ಕಲಾಕೇಂದ್ರವನ್ನಾಗಿಸಿವೆ. ವೇಸರ ಶೈಲಿ ಇಲ್ಲಿ ಸಮೃದ್ಧವಾಗಿ ಬೆಳೆದು ಬೆಳಗಿದರೆ, ದ್ರಾವಿಡ ಶೈಲಿ ತನ್ನ ಔನತ್ಯವನ್ನು ಈ ನೆಲದಲ್ಲಿ ಕಂಡದ್ದು ಗಮನಾರ್ಹ ಕನ್ನಡ ನಾಡನ್ನಾಳಿದ ಕದಂಬರಿಂದ ವಿಜಯನಗರದ ಅರಸರವರೆಗೆ ಇಲ್ಲಿ ಕಟ್ಟಿದ ಗುಡಿಗಳಿಗೆ ಲೆಕ್ಕವಿಲ್ಲ. ಆ ಮೂಲಕ ಅರಳಿದ ಕಲೆಯ ವೈವಿಧ್ಯತೆಗೆ ಮಿತಿ ಇಲ್ಲ. ಕರ್ನಾಟಕದ ಸುಂದರ ವಾಸ್ತು ನಿರ್ಮಿತಿಗಳನ್ನು ಹೊತ್ತು ನಿಂತಿರುವ ಹಲವು ಪ್ರದೇಶಗಳಲ್ಲಿ ಪ್ರಸ್ತುತ ಯಲಬುರ್ಗಿಯು ಒಂದಾಗಿದೆ. ಆರ್ಥಿಕವಾಗಿ ಅದು ಬಡವಾಗಿದ್ದರೂ, ಚಾರಿತ್ರಿಕವಾಗಿ ಮತ್ತು ಕಲಾತ್ಮಕವಾಗಿ ಭವ್ಯ ಹಿರಿಮೆ ಗರಿಮೆಯನ್ನು ಹೊಂದಿದೆ. ವಿಶೇಷವಾಗಿ ಈ ತಾಲೂಕ ಅಚ್ಚರಿ ನಿರ್ಮಿತಿಯ ಅಪೂರ್ವ ದೇವಾಲಯಗಳನ್ನು ಹೊಂದಿರುವುದು ಗಮನಾರ್ಹವಾಗಿದೆ.

**೩.೧. ಶೈವ ದೇವಾಲಯಗಳು**

ಧರ್ಮಗಳಲ್ಲಿಯೇ ಪ್ರಾಚೀನವಾದುದು ಮತ್ತು ಭಾರತದಲ್ಲಿ ಹೆಚ್ಚು ವ್ಯಾಪಕಗೊಂಡ ಧರ್ಮವೆಂದರೆ ಅದು ಶೈವ ಧರ್ಮ (ಪಂಥ) ಶೈವ ಧರ್ಮದ ಮೂಲ ಮತ್ತು ಅದು ಬೆಳೆದು ಬಂದ ಬಗೆ ಇನ್ನೂ ಅಸ್ಪಷ್ಟವಾಗಿದೆ. ಶೈವ ಧರ್ಮಕ್ಕೆ ೨೮ ಆಗಮಗಳು ಇದ್ದು ಇವುಗಳನ್ನು ಶೈವಾಗಮಗಳೆಂದು ಕರೆಯಲಾಗಿದೆ. ಶೈವಾಗಮದ ಕರ್ತೃ ಶಿವನಾಗಿದ್ದಾನೆ. ಶೈವರು ಪರಬ್ರಹ್ಮವಸ್ತುವನ್ನು ಶಿವ, ರುದ್ರ ಎಂದು ಪೂಜಿಸುತ್ತಾರೆ. ಶೃತಿ, ಸ್ಮೃತಿಗಳಲ್ಲಿ ಇದಕ್ಕೆ ಆಧಾರವಿದೆ. ಶೈವ ಮತದಲ್ಲಿ ದ್ವೈತ ಪಾಶುಪತ, ದ್ವೈತ ಶೈವ ಸಿದ್ಧಾಂತ, ದ್ವೈತಾದ್ವೈತರು ಲೀಶ ಪಾಶುಪತ, ವಿಶಿಷ್ಟಾದ್ವೈತ ಶೈವ ಮತ್ತು ವಿಶೇಷಾ ದ್ವೈತ ಶೈವ (ವೀರಶೈವ) ನಂದಿಕೇಶ್ವರ ಶೈವ, ರಸೇಶ್ವರ ಶೈವ ಮತ್ತು ಕಾಶ್ಮೀರ ಶೈವ ಎಂಬ ೮ ಪ್ರಬೇಧಗಳಿವೆ[೩] ಕನ್ನಡ ನಾಡಿನ ರಾಜರು, ಸಾಮಂತ ಮನೆತನದವರು, ಜನಸಾಮಾನ್ಯರು, ಶೈವ ಧರ್ಮದ ಪುರಸ್ಕೃತರಾಗಿದ್ದಾರೆ.

ಯಲಬುರ್ಗ ಪಟ್ಟಣದಲ್ಲಿ ಕಂಡುಬರುವ ಶೈವ ದೇವಾಲಯಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

| | | |
|---|---|---|
| ಸ್ಥಳ | : | (ಯಲಬುರ್ಗ) ಗ್ರಾಮದ ಆಗ್ನೇಯಕ್ಕೆ |
| ಸ್ಮಾರಕದ ಹೆಸರು | : | ನಕರೇಶ್ವರ ದೇವಾಲಯ (ಸಿದ್ಧೇಶ್ವರ ದೇವಾಲಯ) |
| ಅಭಿಮುಖ | : | ಪೂರ್ವ |
| ಕಾಲಮಾನ | : | ಕ್ರಿ.ಶ.ಸು.೧೨ನೇ ಶತಮಾನ |
| ಸ್ಥಿತಿ | : | ಕನಿಷ್ಠ |
| ಶೈಲಿ | : | ಕಲ್ಯಾಣ ಚಾಲುಕ್ಯ |

**ಸಿದ್ಧೇಶ್ವರ ದೇವಾಲಯ**

ಈ ದೇವಾಲಯವು ಊರಿನಿಂದ ದಕ್ಷಿಣಕ್ಕೆ ಸುಮಾರು ೧ ಕಿ.ಮೀ ದೂರದಲ್ಲಿದೆ. ಸದ್ಯ ದೇವಾಲಯದ ನವರಂಗ ಮಾತ್ರ ಉಳಿದಿದ್ದು, ಬೇರೆ ಯವುದೇ ವಾಸ್ತುಭಾಗಗಳು ಇಲ್ಲ. ೧೬ ಕಂಬಗಳ ನವರಂಗ ಮಂಟಪವು ತನ್ನ ಬೃಹದಾಕಾರದಿಂದ ಗಮನ ಸೆಳೆಯುತ್ತದೆ. ಮಧ್ಯದ ಎರಡು ಸಾಲುಕಂಬಗಳನ್ನು ತಿಳಿಹಸಿರು (Green Schist) ಶಿಲೆಯಿಂದಲೂ ಎರಡು ಬದಿಯ ಕೊನೆಯ ಸಾಲಿನ ಕಂಬಗಳನ್ನು ಕಣಶಿಲೆ (Granite)ಯಿಂದಲೂ ನಿರ್ಮಿಸಲಾಗಿದೆ. ಪೀಠ, ಕಾಂಡ, ಕುಭ, ಕಳಸ ಮತ್ತು ಬೋದುಗೆಗಳನ್ನು ಹೊಂದಿರುವ ಕಂಬಗಳು ಸಂಪೂರ್ಣ ಕಲ್ಯಣ ಚಾಲುಕ್ಯ ಶೈಲಿಯಲ್ಲಿವೆ. ಕಲ್ಯಾಣ ಚಾಲುಕ್ಯ ಕಾಲದ ದೇವಾಲಯಗಳಲ್ಲಿ ಈ ತೆರನಾದ ಭಾರಿ ಕಂಬಗಳು ಮತ್ತು ಬೃಹತ್ ಮಂಟಪಗಳು ಅಪರೂಪವೆಂದೇ ಹೇಳಬಹುದು.[೪] ಛತ್ತಿನ ಒಂಭತ್ತು ಅಂಕಣಗಳು ಭುವನೇಶ್ವರಿಯ ಅಲಂಕರಣಗಳನ್ನು ಹೊಂದಿರುವುದು ಇಲ್ಲಿಯ ಮತ್ತೊಂದು ವಿಶೇಷ ಮಧ್ಯದಲ್ಲಿ ಅರಳು ಕಮಲದ ಭುವನೇಶ್ವರಿ ಇದ್ದರೆ, ಉಳಿದವುಗಳಲ್ಲಿ ವೃತ್ತಾಕಾರದಲ್ಲಿ ಕುಟ್ಮಲಗಳಿವೆ. ಮಂಟಪದ ಪೂರ್ವದ ಮಾಡು ಮುಂದಕ್ಕಿದ್ದು ಭಿನ್ನ ವಾಸ್ತು ಕಟ್ಟಡವನ್ನು ಸೂಚಿಸುತ್ತದೆ. ಮಂಟಪದ ಮುಂಭಾಗದಲ್ಲಿ ಕಣಶಿಲೆಯ ವಿಶಾಲವಾದ ವೇದಿಕೆಯೊಂದಿದೆ. ಮಂಟಪದ ಸುತ್ತೆಲ್ಲ ಕೆಂಪು ಮರಳುಗಲ್ಲಿನ (Red Sand Stone) ತಿಳಿಹಸಿರು ಶಿಲೆಯ ಕಂಬಗಳು ಮತ್ತು ಇತರ ವಾಸ್ತು ಅವಶೇಷಗಳು ಬಿದ್ದಿವೆ. ಇವುಗಳನ್ನು ಮತ್ತು ಮಂಟಪದ ವಾಸ್ತುಶೈಲಿಯನ್ನು ಅನುಲಕ್ಷಿಸಿದಾಗ, ಇಲ್ಲಿ ಒಂದು ಅದ್ಭುತ, ಸುಂದರವಾದ ದೇವಾಲಯವಿದ್ದು, ಪ್ರಸ್ತುತ ಮಂಟಪ ಬಿಟ್ಟು ಉಳಿದ ಭಾಗಗಳು ನಾಶಗೊಂಡಿರಬೇಕು, ಇಲ್ಲವೆ ದೇವಾಲಯವೇ ನಿರ್ಮಾಣದಲ್ಲಿ ಅಪೂರ್ಣವಾಗಿರಬೇಕೆಂದು ಊಹಿಸಬಹುದು. ಒಟ್ಟಿನಲ್ಲಿ ಇದು ಪೂರ್ಣರೂಪದಲ್ಲಿ ಇದ್ದಿದ್ದರೆ. ಇಟಗಿಯ ಮಹಾದೇವ ದೇವಾಲಯದಂತಹ ಒಂದು ಅಪೂರ್ವ ದೇವಾಲಯವನ್ನು ಹೊಂದಿದ ಕೀರ್ತಿ ಯಲಬುರ್ಗಿಯದಾಗುತ್ತಿತ್ತು.

ಊರು : ಯಲಬುರ್ಗ
ಸ್ಥಳ : ನಗರದ ಉತ್ತರಕ್ಕೆ
ಸ್ಮಾರಕ : ಸಂಗಮೇಶ್ವರ ದೇವಾಲಯ
ಕಾಲ : ಕ್ರಿ.ಶ.ಸು.೧೨ನೇ ಶತಮಾನ
ಶೈಲಿ : ಕಲ್ಯಾಣ ಚಾಲುಕ್ಯ
ಅಭಿಮುಖ : ಉತ್ತರ
ಸ್ಥಿತಿ : ಉತ್ತಮ
ಸಂರಕ್ಷಣೆ : ಇಲ್ಲ

ಸಂಗಮೇಶ್ವರ ದೇವಾಲಯವು ಸರಳ ವಾಸ್ತು ಶೈಲಿಯಲ್ಲಿ ನಿರ್ಮಾಣಗೊಂಡಿದ್ದು ಗರ್ಭಗೃಹ, ನವರಂಗ (ಸಭಾಮಂಟಪ) ಮತ್ತು ಮುಖಮಂಟಪಗಳಿಂದ ಕೂಡಿದೆ, ಗರ್ಭಗುಡಿಯಲ್ಲಿ ಸುಮಾರು ಒಂದು ಅಡಿ ಎತ್ತರದ ಶಿವಲಿಂಗವಿದೆ, ಬಾಗಿಲವಾಡವು ವಿಶೇಷ ಕೆತ್ತನೆಯಿಂದ ಒಳಗೊಂಡಿದೆ. ಮಧ್ಯಮಂಟಪವು ನಾಲ್ಕು ಕಂಬಗಳಿಂದ ಒಳಗೊಂಡಿದ್ದು ಸುಮಾರು ೬.೫ಅಡಿ ಎತ್ತರವಿದೆ ಕೆಳಗೆ ಮೇಲೆ ಚೌಕಾಕಾರದ ವೃತ್ತಾಕಾರದ, ಮುಚ್ಚಳ, ಚೌಕಾಕಾರದ ಫಲಕ ಮತ್ತು ಬೋದಿಗೆಗಳಿಂದ ಕೂಡಿವೆ. ಮಧ್ಯಭಾಗದಲ್ಲಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಮುಖ್ಯ ಪ್ರವೇಶದ್ವಾರದ ಬಾಗಿಲು ವಿವಿಧ ಶಾಖೆಗಳಿಂದ ಕೆತ್ತಲ್ಪಟ್ಟಿದೆ. ಬಾಗಿಲ ಲಲಾಟ ಬಿಂಬದಲ್ಲಿ ಮೊದಲಿದ್ದ ತೀರ್ಥಂಕರನ ವಿಗ್ರಹವನ್ನು ಬದಲಿಸಿ, ಲಿಂಗವನ್ನು ಕೆತ್ತಿ ಅದಕ್ಕೆ ಬಣ್ಣವನ್ನು ಬಳಿಯಲಾಗಿದೆ. ಇದರಿಂದ ಮೂಲ ಜೈನ ಬಸದಿಯಾಗಿದ್ದು ಸ್ಪಷ್ಟವಾಗುತ್ತದೆ. ಕಲ್ಲು ಚಪ್ಪಡಿಯಿಂದ ನಿರ್ಮಿಸಿದ ಮುಖಮಂಟಪದ ಮೇಲ್ಛಾವಣಿ ಇಳಿಜಾರಾಗಿದೆ. ದೇವಾಲಯದ ಹೊರಗೋಡೆ ಸರಳ ಶೈಲಿಯಲ್ಲಿದ್ದು, ಅಧಿಷ್ಠಾನ ಭಾಗ ಮಣ್ಣಿನಲ್ಲಿ ಹೂತುಹೋಗಿದೆ.[೫]

ಊರು : ಯಲಬುರ್ಗ
ಸ್ಥಳ : ನಗರದ ಉತ್ತರಕ್ಕೆ
ಸ್ಮಾರಕ : ಈಶ್ವರ ದೇವಾಲಯ (ಚೌಕಿಮಠ)
ಕಾಲ : ಕ್ರಿ.ಶ.ಸು.೧೨ನೇ ಶತಮಾನ
ಶೈಲಿ : ಕಲ್ಯಾಣ ಚಾಲುಕ್ಯ
ಅಭಿಮುಖ : ಪೂರ್ವ
ಸ್ಥಿತಿ : ಉತ್ತಮ

**ಚೌಕಿ ಮಠ**

ವೀರಶೈವ ರುದ್ರಭೂಮಿಯಲ್ಲಿದ್ದು ಸಿದ್ಧರಾಮೇಶ್ವರ ಸಂಸ್ಥಾನ ಹಿರೇಮಠದ ಪೂಜ್ಯ ಶ್ರೀ ಸೊಲಬಸ್ವಾಮಿಗಳ ಸಮಾಧಿ ಮಂದಿರವಾಗಿದೆ.[೬] ದೇವಾಯ ಸುತ್ತೆಲ್ಲ ಕೆಂಪು ಮರಳುಗಲ್ಲು ಮತ್ತು ಕಣಶಿಲೆಯ ಕಲ್ಯಾಣ ಚಾಲುಕ್ಯ ಕಾಲದ ಕಂಬಗಳು ಹಾಗೂ ಇತರ ಅವಶೇಷಗಳು ಕಂಡುಬರುತ್ತವೆ. ಇದರಿಂದ ಮೂಲತಃ ಇಲ್ಲಿ ಒಂದು ಕಲ್ಯಾಣ ಚಾಲುಕ್ಯರ ಕಾಲದ ದೇವಾಲ ಅಥವಾ ಸಮಾಧಿ ಮಂದಿರ ಇದ್ದುದ್ದು ಸ್ಪಷ್ಟವಾಗುತ್ತದೆ. ಅದು ನಾಶವಾಗಲು ಪ್ರಸ್ತುತದ

ದೇವಾಲಯವನ್ನು ವಿಜಯನಗರೋತ್ತರ ಕಾಲದಲ್ಲಿ ರಚಿಸಿದಂತೆ ತೋರುತ್ತದೆ. ಆ ಸಂದರ್ಭದಲ್ಲಿ ಹಿಂದಿನ ದೇವಾಲಯದ ಕೆಲವು ಕಂಭಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಗರ್ಭಗೃಹ ಮುಖಮಂಟಪವನ್ನು ಹೊಂದಿರುವ ಇದು ಅಂಥ ವಿಶೇಷ ವಾಸ್ತುಶೈಲಿಯನ್ನೇನು ಹೊಂದಿಲ್ಲ. ಗರ್ಭಗೃಹದ ಲಿಂಗವು ಕಲ್ಯಾಣ ಚಾಲುಕ್ಯರ ಕಾಲದ್ದು, ಮತ್ತು ಮುಖಮಂಟಪದ ಗೋಡೆಯ ಮೇಲೆ ಒಂದು ಕಡೆ ಮಿಥುನ ಶಿಲ್ಪ ಮತ್ತೊಂದು ಗೋಡೆಯ ಮೇಲೆ ಹಂಸದ ಚಿತ್ರವಿರುವುದು ಕಂಡುಬರುತ್ತದೆ. ಗರ್ಭಗೃಹದ ದ್ವಾರದ ಮೇಲೆ ಕುಳಿತ ಭಂಗಿಯಲ್ಲಿರುವ ಒಂದು ಶಿಲ್ಪವಿದೆ. ದೇವಾಲಯದ ಮುಂದಿದ್ದ ಸೂಕ್ಷ್ಮ ಕೆತ್ತನೆಯಿಂದ ಕೂಡಿದ ವೀರಗಲ್ಲಿನಲ್ಲಿ (ಈಗ ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದಲ್ಲಿದೆ) ಮೂರು ಹಂತಗಳಿದ್ದು, ಕೆಳಗೆ ವೀರನು ಯುದ್ಧ ಮಾಡುತ್ತಿರುವ ದೃಶ್ಯ ಮಧ್ಯ ಸಕಿಯರೊಂದಿಗೆ ಸ್ವರ್ಗಕ್ಕೆ ಹಾರುತ್ತಿದ್ದಾನೆ. ಮೇಲ್ಭಾಗ ಶಿವಲಿಂಗ ಪೂಜೆಯಲ್ಲಿ ತೊಡಗಿದ್ದಾನೆ. ಹಾಗೆಯೇ ಮುಂಭಾಗದಲ್ಲಿ ಜಗತಿ ಇದ್ದು ಜಗತಿಯ ಮೇಲೆ ಪಾದೆ ಮತ್ತು ಬ್ರಹ್ಮಗುಂಡಪ್ಪನ ಶಿಲ್ಪ ಕಾಣಬಹುದು ಮಂಟಪದ ಅಕ್ಕಪಕ್ಕದಲ್ಲಿ ಹಲವಾರು ಪ್ರಾಚೀನ ಅವಶೇಷಗಳು ಅಡ್ಡದಿಡ್ಡಿಯಾಗಿ ಬಿದ್ದಿವೆ.

**ಮುತ್ತಿನ ಪೆಂಡೇಶ್ವರ ದೇವಾಲಯ**

ಈ ದೇವಾಲಯವು ನಗರದ ಉತ್ತರ ಭಾಗದ ಶ್ರೀಧರ ಮುರುಡಿಮಠದ ಹೊಲದಲ್ಲಿ ಈ ದೇವಾಲಯವಿದೆ. ಈ ದೇವಾಲಯದಲ್ಲಿ ಉದ್ಭವ ಲಿಂಗವು ಸುಮಾರು.೨ ಅಡಿ ಎತ್ತರವಿದೆ. ಲಿಂಗವು ವರ್ಷದಿಂದ ವರ್ಷಕ್ಕೆ ಬೆಳೆಯುತ್ತಿದೆಯೆಂಬ ನಂಬಿಕೆ ಇದೆ. ದೇವಾಲಯದಿಂದ ಶ್ರೀಧರ ಮುರುಡಿ ಮಠಕ್ಕೆ ಗುಹೆ ಇದೆ ಎಂದು ಸ್ಥಳೀಯರ ಅಭಿಪ್ರಾಯ. ದೇವಾಲಯದ ಮುಂದೆ ಮಠಕ್ಕೆ ದಾನ ನೀಡಿದ ಶಾಸನ, ಲಿಂಗಮುದ್ರೆ ಮತ್ತು ನಂದಿಯ ಮೂರ್ತಿ ಶಿಲ್ಪವನ್ನು ಕಾಣಬಹುದಾಗಿದೆ.

**ಮೈಲಾರ ಲಿಂಗೇಶ್ವರ**

ಪಟ್ಟಣದ ಉತ್ತರಭಾಗಕ್ಕೆ ಇದು ದಕ್ಷಿಣಾಭಿಮುಖವಾಗಿ ನಿರ್ಮಾಣಗೊಂಡಿದೆ. ಗರ್ಭಗೃಹ ಮತ್ತು ತೆರೆದ ಮುಖಮಂಟಪವನ್ನು ಹೊಂದಿದೆ ಗರ್ಭಗೃಹದಲ್ಲಿ ಪಾಣಿ ಪೀಠದ ಮೇಲೆ ಲಿಂಗದ ರೂಪದಲ್ಲಿ ಮೈಲಾರ ಲಿಂಗವನ್ನು ಕಾಣಬಹುದು. ಶಿಲ್ಪದ ಹಿಂಭಾಗದಲ್ಲಿ ಶಿವನ ತ್ರಿಶೂಲ ಆಕಾರದ ಮೂರ್ತಿಶಿಲ್ಪವಿದೆ. ದೇವಾಲಯದ ಮುಂಭಾಗದಲ್ಲಿ ಸುಮಾರು.೪ ಅಡಿ ಎತ್ತರದ ಬಲಿಪೀಠವಿದೆ, ಮತ್ತು ನವಗ್ರಹಗಳು, ಗಣೇಶ, ನಾಗಶಿಲ್ಪಗಳನ್ನು ಕಾಣಬಹುದು. ದೇವಾಲಯದ ಹಿಂಭಾಗದಲ್ಲಿ ಲಿಂಗಮುದ್ರೆ ಕಲ್ಲು ಮತ್ತು ಗಜಶಿಲ್ಪವನ್ನು ಕಾಣಬಹುದು. ಈ ದೇವಾಲಯವು ಇತ್ತೀಚೆಗೆ ನವೀಕರಣಗೊಂಡಿದೆ.

**ಈಶ್ವರ ದೇವಾಲಯ**

ಪಟ್ಟಣದ ಉತ್ತರ ಭಾಗದಲ್ಲಿ ಶ್ರೀಧರ ಮುರುಡಿ ಹಿರೇಮಠದ ಒಳಗಡೆ ಈ ಈಶ್ವರ ದೇವಾಲಯವಿದೆ. ಗರ್ಭಗುಡಿಯ ೬ ಕಂಬಗಳಿಂದ ಕೂಡಿದ್ದು ಗರ್ಭಗುಡಿಂಯು ಶಿವಲಿಂಗವಿದ್ದು ಚಾವಣಿಯಲ್ಲಿ ಭುವನೇಶ್ವರಿಯ ಕೆತ್ತನೆಯಿದೆ. ಇತ್ತೀಚೆಗೆ ನವೀಕರಣಗೊಂಡಿದೆ.

**ಮೊಗ್ಗಿ ಬಸವೇಶ್ವರ**

ಈ ದೇವಾಲಯವು ಪಟ್ಟಣದ ಹೊರ ಭಾಗದಲ್ಲಿದ್ದು ಇತ್ತೀಚೆಗೆ ನಿರ್ಮಾಣಗೊಂಡ ಆಧುನಿಕ ದೇವಾಲಯವಾಗಿದೆ. ಗರ್ಭಗುಡಿಯಲ್ಲಿ ಶಿವಲಿಂಗವಿದ್ದು ಎದುರಿಗೆ ನಂದಿಯ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ವಿಶೇಷವಾಗಿ ಪ್ರತಿ ವರ್ಷ ಅತ್ಯಂತ ವಿಜೃಂಬಣೆಯಿಂದ ಆಚರಿಸುವ ಊರ ಜಾತ್ರೆ ಇದಾಗಿದೆ. ಅಷ್ಟೇ ಅಲ್ಲದೇ ಪ್ರತಿ ಶನಿವಾರ ಈ ದೇವಾಲಯದ ಮುಂಭಾಗದಲ್ಲಿ ಸಂತೆ ನಡೆಯುತ್ತದೆ. ತಾಲೂಕಿನ ನಾನಾ ಭಾಗಗಳಿಂದ ರೈತರು ತಾವು ಬೆಳೆದ ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡಲು ಮತ್ತು ಕೊಂಡುಕೊಳ್ಳಲು ಇಲ್ಲಿಗೆ ಬರುತ್ತಾರೆ.

**೩.೨. ವೈಷ್ಣವ ದೇವಾಲಯಗಳು**

ಋಗ್ವೇದ ಕಾಲದಲ್ಲಿ ರುದ್ರನೇ ಪ್ರಧಾನ ದೇವತೆಯಾಗಿದ್ದು ವಿಷ್ಣುವಿನ ಸ್ಥಾನ ಗೌಣವಾಗಿತ್ತು ಸವಿತೃ ಪೊಷನ್, ಸೂರ್ಯ, ವಿಷ್ಣು, ಭಗ, ಆರ್ಯನ್ ಎಂಬ ಸೂರ್ಯನ ಅಂಶಗಳಲ್ಲಿ ವಿಷ್ಣವೂ ಒಬ್ಬನು ವೇದದಲ್ಲಿ ಐದಾರು ಸೂಕ್ತಗಳಲ್ಲಿ ವಿಷ್ಣು ವರ್ಣನೆ ಇದೆ. ಇವನು ಮುರು ಹೆಜ್ಜೆಗಳಲ್ಲಿ ಪೃಥ್ವಿ, ಅಂತರಿಕ್ಷ ಆಕಾಶಗಳನ್ನು ಶ್ರಮಿಸುವನು ಮಹಾಕಾವ್ಯಗಳ ಕಾಲದಲ್ಲಿ ವಿಷ್ಣುವು ಪರಮದೇವತೆಯಾಗಿ ಪರಿಣಮಿಸಿದನು.[೭]

ವೈದಿಕ ಧರ್ಮವು ವರ್ಣಾಶ್ರಮ ಧರ್ಮವನ್ನು "ಯಜ್ಞ ಯಾಗಾದಿ ಪ್ರಕ್ರಿಯೆಗಳನ್ನು ಪುರಷ್ಕರಿಸಿದಷ್ಟೇ ಅದರ ಜೊತೆಗೆ ಬೆಳೆದುಬಂದ ಇನ್ನೊಂದು ಧರ್ಮ ಭಾಗವತ, ಋಗ್ವೇದ ಕಾಲದಲ್ಲಿ ಅಪ್ರಧಾನ ದೇವತೆಯಾಗಿದ್ದ ವಿಷ್ಣುವು ಭಾಗವತ ಕಾಲದಲ್ಲಿ ಭಗವಂತನ ಸ್ಥಾನಕ್ಕೇರಿದ ಮೇಲೆ ಭಾಗವತ ಧರ್ಮಕ್ಕೆ "ವೈಷ್ಣವ ಧರ್ಮ" ಎಂಬ ಹೆಸರು ಪ್ರಾಪ್ತವಾಯಿತು.[೮]

ಯಲಬುರ್ಗ ಪಟ್ಟಣದಲ್ಲಿ ಸಾಕಷ್ಟು ವೈಷ್ಣವ ದೇವಾಲಯಗಳು ನಿರ್ಮಾಣಗೊಂಡಿವೆ. ಪ್ರಮುಖವಾಗಿ ಕಲ್ಯಾಣ ಚಾಲುಕ್ಯರು, ವಿಜಯನಗರೋತ್ತರ ಕಾಲದಲ್ಲಿಯ ದೇವಾಲಯಗಳು ಕಂಡುಬರುತ್ತವೆ. ಅವುಗಳಲ್ಲಿ ಕೆಲವು ವೈಷ್ಣವ ದೇವಾಲಯಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**ಆಂಜನೇಯ ದೇವಾಲಯ**

ಊರು : ಯಲಬುರ್ಗ

ಸ್ಥಳ : ನಗರದ ಉತ್ತರಕ್ಕೆ

ಸ್ಮಾರಕ : ಆಂಜನೇಯ ದೇವಾಲಯ

ಕಾಲ : ಕ್ರಿ.ಶ.ಸು.೧೨ನೇ ಶತಮಾನ

ಶೈಲಿ : ಕಲ್ಯಾಣ ಚಾಲುಕ್ಯ

ಅಭಿಮುಖ : ದಕ್ಷಿಣಕ್ಕೆ

ಸ್ಥಿತಿ : ಮಧ್ಯಮ

ಈ ದೇವಾಲಯವನ್ನು ರುದ್ರಬಾವಿ ಮಾರುತಿ ಎಂದು ಸ್ಥಳೀಯರು ಕರೆಯುತ್ತಾರೆ. ಇದು ಜೀರ್ಣೋರ್ಧಾರ ಗೊಂಡಿರುವುದರಿಂದ ಅದರ ಭಾಗಗಳು ಸ್ಪಷ್ಟವಾಗಿ ಗೋಚರಿಸುವುದಿಲ್ಲ. ದೇವಾಲಯದ ಮಧ್ಯದಲ್ಲಿ ಸುಮಾರು ೫ ಅಡಿ ಎತ್ತರದ ಆಂಜನೇಯ, ಅದರ ಮುಂದೆ ನಂದಿ ಶಿಲ್ಪಗಳನ್ನು ಪ್ರತಿಷ್ಠಾಪಿಸಲಾಗಿದೆ ಮಧ್ಯೆ ನಾಲ್ಕು ಕಂಬಗಳಿದ್ದು ಅವು ಕೆಳಗೆ ಚೌಕ, ಮೇಲೆ ಬಹುಮುಖಗಳಿಂದ ಕೂಡಿದ ವೃತ್ತಾಕಾರದಲ್ಲಿವೆ. ದೇವಾಲಯದ ಗೋಡೆಯನ್ನು ಜೀರ್ಣೋದ್ಧಾರಗೊಳಿಸುವಾಗ ಅನೇಕ ಉಬ್ಬುಶಿಲ್ಪಗಳನ್ನು ಅಳವಡಿಸಲಾಗಿದೆ. ಅವುಗಳಲ್ಲಿ ಮಗುವಿಗೆ ಹಾಲುಣಿಸುತ್ತಿರುವ ತಾಯಿ ಮತ್ತು ಕಾಮಧೇನುವಿನ ಶಿಲ್ಪಗಳು ಪ್ರಮುಖ ದೇವಾಲಯದ ಸುತ್ತಲೂ ಆವರಣಗೋಡೆ ನಿರ್ಮಿಸಲಾಗಿದೆ. ಈ ದೇವಾಲಯಕ್ಕೆ ಹೊಂದಿಕೊಂಡಂತೆ ಬಲಭಾಗದಲ್ಲಿ ಒಂದು ಚಿಕ್ಕ ಗರ್ಭಗೃಹದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಆವರಣಗೋಡೆಗೆ ಹೊಂದಿಕೊಂಡು ಮುಂಭಾಗದಲ್ಲಿ ಪ್ರಾಚೀನ ಕಾಲದ ಬಾವಿಯಿದೆ.

**ಪಾಂಡುರಂಗ ದೇವಾಲಯ**

ಊರು : ಯಲಬುರ್ಗ

ಸ್ಥಳ : ಗ್ರಾಮದ ಪಶ್ಚಿಮಕ್ಕೆ

ಸ್ಮಾರಕ : ಪಾಂಡುರಂಗ ದೇವಾಲಯ

ಕಾಲ : ಕ್ರಿ.ಶ.ಸು.೧೮ನೇ ಶತಮಾನ

ಶೈಲಿ : ಆಧುನಿ

ಅಭಿಮುಖ : ಪೂರ್ವ

ಸ್ಥಿತಿ : ಉತ್ತಮ

ತ್ರಿಕೂಟ ಚಲವಾದ ಈ ದೇವಾಲಯವನ್ನು ಪ್ರಾಚೀನ ಕಾಲದ ದೇವಾಲಯದ ಅವಶೇಷಗಳನ್ನು ಬಳಸಿ ನಿರ್ಮಿಸಲಾಗಿದೆ. ಉತ್ತರದ ಜಗತಿಯ ಮೇಲೆ ನಿರ್ಮಾಣವಾದ ಇದು ಮೂರು ಗರ್ಭಗೃಹಗಳು, ಅವುಗಳಿಗೆ ಹೊಂದಿಕೊಂಡು ವಿಶಾಲವಾದ ಸಭಾಮಂಟಪ ಮತ್ತು ಮುಂಭಾಗ ಆವರಣದಿಂದ ಕೂಡಿದೆ.

ಮದ್ಯದ ಗರ್ಭಗೃಹದಲ್ಲಿ ಎತ್ತರದ ಕಟ್ಟೆಯ ಮೇಲೆ ಪಾಂಡುರಂಗ ಮತ್ತು ರುಕುಮಾಯಿಯ ಶಿಲ್ಪಗಳಿವೆ. ಇವು ವಿಜಯನಗರ ಕಾಲದಲ್ಲಿ ನಿರ್ಮಾಣವಾದಂಥವು ಯಡಭಾಗದ ಗರ್ಭಗೃಹದಲ್ಲಿ ಶಿವಲಿಂಗವಿದೆ. ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿದ ಈ ಶಿವಲಿಂಗವನ್ನು ನಗರದ ಹೊರ ವಲಯದಲ್ಲಿ ಹಾಳಾದ ಅವಸ್ಥೆಯಲ್ಲಿರುವ ನಗರೇಶ್ವರ ದೇವಾಲಯದಿಂದ ತಂದು ಪ್ರತಿಷ್ಠಾಪಿಸಲಾಗಿದೆಯೆಂದು ತಿಳಿಯುತ್ತದೆ. ಸುಮರು ಮೂರು ಅಡಿ ಎತ್ತರವಿರುವ ಸುಂದರವಾದ ಪಾರ್ವತಿ ವಿಗ್ರಹ ಕೀರಿಟ ಮುಕುಟ, ಕಂಠ ಕರ್ಣಾಭರಣಗಳನ್ನು ಧರಿಸಿದ್ದು ಕೈಯಲ್ಲಿ ಪದ್ಮಹಿಡಿದು ಸಮಭಂಗಿಯಲ್ಲಿದೆ. ಎದುರಿಗೆ ನಂದಿ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಬಲಭಾಗದ

ಗರ್ಭಗೃಹದಲ್ಲಿ ಚಿಕ್ಕವೆಂಕಟೇಶ್ವರ ಶಿಲ್ಪವನ್ನು ಗರುಡ ಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ. ಎಲ್ಲಾ ಗರ್ಭಗೃಹಗಳಲ್ಲೂ ನಾಲ್ಕರಂತೆ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿಸ ಕಂಬಗಳು, ಕೆಳಗೆ, ಚೌಕ, ಮೇಲೆ ಬಹುಮುಖ ಭಾಗಗಳಿವೆ. ವಿಶಾಲವಾದ ತೆರೆದ ಸಭಾಮಂಟಪದ ಮಧ್ಯೆ ನಾಲ್ಕು ಕಂಬಗಳಿವೆ. ದೇವಾಲಯದ ಸುತ್ತಲೂ ಪ್ರಕಾರ ಗೋಡೆಯನ್ನು ನಿರ್ಮಿಸಲಾಗಿದೆ.

ದೇವಾಲಯದ ಉತ್ತರ ದಿಕ್ಕಿನಲ್ಲಿ ಒಂದು ಬಾವಿಯದೆ. ದೇವಾಲಯದ ಪೂಜೆ, ಪುನಸ್ಕಾರಕ್ಕೆ ಈ ಬಾವಿಯ ನೀರನ್ನು ಬಳಸಿಕೊಳ್ಳಲಾಗುತ್ತದೆ. ಪ್ರಸ್ತುತ ಈ ಪುಸ್ಕರಣಿಯು ಭತ್ತಿ ಹೋಗಿದ್ದು ಯಾವುದೇ ರಕ್ಷಣೆಯಿಲ್ಲದೆ. ತ್ಯಾಜ್ಯ ಪದಾರ್ಥಗಳಿಂದ ಕಲುಷಿತಗೊಂಡಿದೆ.

**ಲಕ್ಷ್ಮೀವೆಂಕಟೇಶ್ವರ**

ಶ್ರೀಧರ ಮುರುಡಿ ಮಠದ ಹತ್ತಿರ ಲಕ್ಷ್ಮೀವೆಂಟೇಶ್ವರ ದೇವಾಲಯವಿದೆ. ಸರಳವಾದ ಒಂದು ಗರ್ಭಗುಡಿಯನ್ನು ಹೊಂದಿದೆ. ಗರ್ಭಗುಡಿಯಲ್ಲಿ ಸುಮಾರು೧.೫ ಅಡಿ ಎತ್ತರದ ಲಕ್ಷ್ಮೀವೆಂಟೇಶ್ವರ ಮೂರ್ತಿಶಿಲ್ಪವಿದೆ. ಈ ದೇವಾಲಯವು ಪೂರ್ವಾಭಿಮುಖವಾಗಿದೆ. ಇತ್ತೀಚೆಗೆ ನವೀಕರಣಗೊಂಡಿದ್ದು ಈ ದೇವಾಲಯದ ಅಕ್ಕಪಕ್ಕ ಪ್ರಾಚೀನ ಪಾಳು ಬಿದ್ದ ಅವಶೇಷಗಳು ಕಂಡುಬರುತ್ತವೆ.

**ತೋಪಿನ ಹನುಮಪ್ಪ**

ಯಲಬುರ್ಗ ತಾಲೂಕ ಕಛೇರಿ ಹಿಂದುಗಡೆ ಇರುವ ತೋಪಿನ ಹನುಮಪ್ಪನ ದೇಗುಲ ಸುಮಾರು ೨೭೧ ವರ್ಷ ಹಳೆಯದು.

ನೆಲ ಅಂತಸ್ತಿನಲ್ಲಿ ನಿರ್ಮಾಣಗೊಂಡ ಈ ದೇವಾಲಯದ ಪೂರ್ವಕ್ಕೆ ಮುಖ ಮಾಡಿ ಮುಖ್ಯದ್ವಾರದಲ್ಲಿ ಇರುವ ಒಂಭತ್ತು ಮೆಟ್ಟಿಲುಗಳನ್ನು ಇಳಿದರೆ, ಎಡ-ಬಲಕ್ಕೆ ಗೋಡೆಯೊಳಗೆ ಚಿಕ್ಕ ಗುಡಿಗಳಿದ್ದು ಅವು ನಾಶಗೊಂಡಿವೆ. ನಂತರದ ೭ ಮೆಟ್ಟಿಲುಗಳನ್ನು ಇಳಿದರೆ ನಾಲ್ಕು ಕಂಬಗಳ ಮಧ್ಯೆ ಇರುವ ವಿಲಾಸ ಮಂಟಪದಲ್ಲಿ ಎಡ ಭಾಗದಲ್ಲಿ ದಕ್ಷಿಣ ಮುಖವಾಗಿ ಮಾರುತಿ ದೇವರ ವಿಗ್ರಹವು ಗರ್ಭಗುಡಿಯೊಳಗೆ ನೆಲೆಗೊಂಡಿದೆ. ಈ ಗರ್ಭಗುಡಿ ಬಾಗಿಲಿಗೆ ದ್ವಾರಪಾಲಕರ ಮೂರ್ತಿಗಳಿವೆ. ಬಲಭಾಗಕ್ಕೆ ಬೃಹತ್ ಬಾವಿ ಇದೆ. ಈ ಮಂಟಪದಲ್ಲಿನ ಪ್ರತಿಯೊಂದು ಕಂಬದಲ್ಲೂ ಸೂಕ್ಷ್ಮ ಕೆತ್ತನೆಯಿಂದ ಶಿಲ್ಪಿ ತನ್ನ ಕೈ ಚಳಕವನ್ನು ತೋರಿಸಿದ್ದಾನೆ. ಮೂರು ಕಂಬಗಳಲ್ಲಿ ಈ ದೇಗುಲದ ನಿರ್ಮಾಣ ಮತ್ತು ಮೂರ್ತಿ ಪ್ರತಿಷ್ಠಾಪನೆಗೆ ಸಂಬಂಧಿಸಿದ ವಿವರವನ್ನು ಸಾರುವ ಶಾಸನಗಳನ್ನು ಬರೆದಿಡಲಾಗಿದೆ. ಅಂತಹ ಒಂದು ಶಾಸನವು ೧೬೬೩ನೇ ಉದ್ರಿನಾಮ ಸಂವತ್ಸರದ ಭಾದ್ರಪದ ಬ॥ ೭ ಸೋಮವಾರದಂದು ಶ್ರೀ ಮುಖ ಪ್ರಾಣದೇವರ ವಿಲಾಸ ಮಂಟಪದಲ್ಲಿ ಯಲಬುರ್ಗಿಯ ಕುಲಕರ್ಣಿ ರಾಯಪ್ಪನವರ ಸುಪುತ್ರನಾದ ತಿಮ್ಮಣ್ಣನು ಬಾವಿಯ ಮಂಟಪವನ್ನು ನಿರ್ಮಾಣ ಮಾಡಿ ವನಾಂತ್ರಕ್ಕೆ ತಕ್ಕ ವೃಕ್ಷಗಳನ್ನು ಹಾಕಿಸಿ ಧರ್ಮಪುಣ್ಯ ಅಭಿವೃದ್ಧಿಯಾಗಬೇಕೆಂದು ಮಾಡಿ ಈ ಮಾಘ ಶು॥೩ ಯಲ್ಲು ಶ್ರೀ ಮುಖ್ಯಪ್ರಾಣದೇವರನ್ನು ನೂತನವಾಗಿ ಮೂರ್ತಿ ಮಾಡಿಸಿ ಪ್ರತಿಷ್ಠಾಪಿಸಿದ್ದನ್ನು ಸಾರುತ್ತದೆ.

ವಿಲಾಸ ಮಂಟಪದಲ್ಲಿ ದಕ್ಷಿಣಕ್ಕೆ ಮುಖಮಾಡಿ ೩೨ ಮೆಟ್ಟಿಲುಗಳ ಕಲ್ಲು ಬಾವಿಯ ವಿಹಂಗಮ ದೃಶ್ಯ ಕಾಣುತ್ತದೆ. ಎಂಟೆಂಟು ಮೆಟ್ಟಿಲು ಹಂತ ಹಂತವಾಗಿ ಇಳಿದರೆ ಈ ಬಾವಿಯ ತಳ ಸಿಗುತ್ತದೆ. ಹಿಂದೆ ಬಾವಿಯು ನೀರು ಕುಡಿಯಲು ಉಪಯೋಗಿಸಲಾಗುತ್ತಿತ್ತು. ಆದರೆ ಈಗ ಅದನ್ನು ಯಾವುದಕ್ಕೂ ಉಪಯೋಗಿಸುತ್ತಿಲ್ಲ ನಾಲ್ಕು ಹಂತಗಳಲ್ಲಿ ೩೨ ಮೆಟ್ಟಿಲುಗಳ ಮಧ್ಯದಲ್ಲಿ ಅಂದರೆ ಗೋಡೆಯೊಳಗೆ ಎದುರುಬದಿರಾಗಿ ಎರಡುಗುಡಿಗಳಿವೆ. ಅವುಗಳಲ್ಲಿ ಯಾವುದೇ ವಿಗ್ರಹಗಳಲ್ಲಿ ಅಲ್ಲದೇ ಬಾವಿಯ ಗೋಡೆಯಲ್ಲಿ ಅಲ್ಲಲ್ಲಿ ಸರ್ಪಗಳು,ಮೀನು,ಆಮೆ ಮತ್ತು ರತಿಕ್ರೀಡೆಯ ಚಿತ್ರಗಳನ್ನು ಕಾಣಬಹುದು.

ಈ ದೇಗುಲಕ್ಕೆ ಮುಖ್ಯದ್ವಾರವನ್ನು ಹೊರತುಪಡಿಸಿ ಮತ್ತೆರಡು ಕಡೆ ಗುಪ್ತ ದ್ವಾರಗಳಿವೆ. ಇವು ಒಬ್ಬಬ್ಬರು ಹೋಗುವಷ್ಟು ಅಗಲವಾಗಿವೆ. ಈ ದ್ವಾರದ ಮೂಲಕ ಹೊರಟರೆ ೧೩ ಕಂಬಗಳು ಸಿಗುತ್ತವೆ. ಅವುಗಳನ್ನು ಉಪಯೋಗಿಸಿ ಬಾವಿಯ ದಂಡೆಗೆ ಮಂಟಪ ನಿರ್ಮಿಸಿದ್ದಾರೆ. ಈ ಮಂಟಪದಲ್ಲಿ ನಿಂತು ದೇಗುಲವನ್ನು ವೀಕ್ಷಿಸುವಂತೆ ಮಾಡಿದ್ದಾರೆ. ಈ ಕಂಬಗಳಲ್ಲಿ ನಾಲ್ಕೈದು ಕಂಬಗಳನ್ನು ಕಪ್ಪು (ಗ್ರಾನೈಟ್ ಕಲ್ಲಿನ ತಿರುಗಣಿಯಿಂದ ತಿರುಗಿಸಿದ ನಯವಾದ ಕಂಬಗಳನ್ನು ಉಪಯೋಗಿಸಿದ್ದಾರೆ. ಈ ದೇಗುಲಕ್ಕೆ ಇತ್ತೀಚೆಗೆ ಭಕ್ತರೊಬ್ಬರು ಗೋಪುರವನ್ನು ಕಟ್ಟಿಸಿದ್ದಾರೆ.

**೩.೩. ಶಾಕ್ತ ದೇವಾಲಯಗಳು**

ಹಿಂದೂ ಧರ್ಮದ ಪೌರಾಣಿಕ ಸಾಹಿತ್ಯದಲ್ಲಿ ಮತ್ತು ತಂತ್ರಗಳಲ್ಲಿ ಶಕ್ತಿಯನ್ನು ಹೆಣ್ಣು ದೇವತೆಯ ರೂಪದಲ್ಲಿ ಚಿತ್ರಿಸಿದ್ದಾರೆ[೧೦] ಶಕ್ತಿ ಇಲ್ಲದ ಎಲ್ಲಾ ದೇವರು ಅಪೂರ್ಣ ಹೆಣ್ಣು ದೇವತೆಯ ಶಕ್ತಿ ಮತ್ತು ಸ್ವರೂಪವನ್ನು ಗಂಡು ದೇವರ ತಾಯಿಯಾಗಿ, ಸಹೋದರಿಯಾಗಿ, ಪತ್ನಿಯಾಗಿ ನಾನಾ ಮಗ್ಗುಲುಗಳಿಂದ ಕಾಣಲಾಗಿದೆ. ಇವುಗಳಲ್ಲಿ ಪತ್ನಿರೂಪದಲ್ಲಿಯೇ ಶಕ್ತಿಯನ್ನು ಹೆಚ್ಚಾಗಿ ಕಾಣುತ್ತೇವೆ.[೧೧] ವೈದಿಕ ಕಾಲದ ನಂತರ ಶಕ್ತಿ ದೇವತೆ ಬೆಳವಣಿಗೆ ಪ್ರಮುಖವಾಗಿ ಕಂಡುಬರುತ್ತದೆ. ಶಾಕ್ತರ ಆರಾಧ್ಯದೇವತೆಯೇ ಶಕ್ತಿದೇವತೆ ಇವರುಗಳನ್ನು ಆದಿಶಕ್ತಿ, ಪರಾಶಕ್ತಿ, ಮಹಾಶಕ್ತಿ ಮಹಾದೇವಿ ಮುಂತಾಗಿ ಕರೆದು ಉಪಾಸನೆ ಮಾಡುತ್ತಾರೆ. ಈ ಕಾಲದ ದೇವತೆಗಳನ್ನು ಗೃಹ ಸೂತ್ರಗಳು ಸ್ಮೃತಿಗಳು ಉಪನಿಷತ್ತುಗಳು, ಪುರಾಣಗಳು ಮುಂತಾದ ಸಾಹಿತ್ಯಿಕ ಆಕರಗಳು ವಿವಿಧ ಬಗೆಯಿಂದ ವರ್ಣಿಸುತ್ತವೆ. ಬುಡಕಟ್ಟುಗಳಿಂದಲೂ ಶಕ್ತಿ ದೇವತೆಗಳನ್ನು ತಮ್ಮ ಯುದ್ಧ ಸಂಸ್ಕೃತಿಗಳ ಪ್ರತೀಕಗಳಾಗಿ ಅವುಗಳನ್ನು ಆರಾಧಿಸಿಕೊಂಡು ಬರಲಾಗುತ್ತಿದೆ. ಗ್ರಾಮೀಣ ಮಟ್ಟದಿಂದ ಹಿಡಿದು ನಗರ ಮಟ್ಟದವರೆಗೂ ಶಕ್ತಿ ದೇವತೆಗಳ ಆರಾಧನೆಯನ್ನು ಕಾಣಬಹುದು. ಪ್ರಸ್ತುತ ಅಧ್ಯಯನದಲ್ಲಿ ಯಲಬುರ್ಗ ಪಟ್ಟಣದ ಕೆಲವು ಶಕ್ತಿ ದೇವಾಲಯಗಳನ್ನು ಕುರಿತು ವಿವೇಚಿಸಲಾಗಿದೆ.

**ಗ್ರಾಮದೇವತೆ (ದ್ಯಾಮಮ್ಮ)**

ಈ ದೇವಾಲಯವು ಪಟ್ಟಣದ ಕೇಂದ್ರಭಾಗದಲ್ಲಿ ನಿರ್ಮಾಣಗೊಂಡಿದ್ದು ಪೂರ್ವಾಭಿಮುಖವಾಗಿದೆ. ಮೂಲ ದೇವಾಲಯವು ನಗರೀಕರಣದಿಂದ ನಶಿಸಿದ್ದು ಇತ್ತೀಚೆಗೆ ನವೀಕರಣಗೊಂಡಿರುತ್ತದೆ. ಗರ್ಭಗುಡಿಯಲ್ಲಿ ದೇವತೆಯ ಮೂರ್ತಿಯು ಪೀಠದ ಮೇಲೆ ದ್ಯಾಮವ್ವ (ಗ್ರಾಮದೇವತೆಯ) ಪ್ರತಿಷ್ಠಾಪಿಸಲಾಗಿದೆ. ಉತ್ಸವ ಮೂರ್ತಿಯನ್ನು ಕಟ್ಟಿಗೆಯಿಂದ ನಿರ್ಮಿಸಲಾಗಿದೆ. ಪ್ರತಿ ಮಂಗಳವಾರ ಅಲ್ಲದೆ ಶುಕ್ರವಾರ ದೇವಿಗೆ ವಿಶೇಷ ಪೂಜೆ ಮಾಡಲಾಗುತ್ತದೆ.

**ವಿಜಯ ದುರ್ಗ ದೇವಾಲಯ**

ಈ ದೇವಾಲಯವು ಯಲಬುರ್ಗ ಪಟ್ಟಣದ ಮಧ್ಯ ಭಾಗದಲ್ಲಿ ಪೂರ್ವಾಭಿಮುಖವಾಗಿ ನಿರ್ಮಾಣಗೊಂಡಿದೆ ದೇವಾಲಯದ ಗರ್ಭಗೃಹದಲ್ಲಿ ಪ್ರಾಚೀನ ಕಾಲದ ವಿಜಯ ದುರ್ಗೆಯ ಮೂರ್ತಿ ಶಿಲ್ಪವನ್ನು ಕಾಣಬಹುದು. ಇತ್ತೀಚೆಗೆ ಈ ದೇವಾಲಯವನ್ನು ಆಧುನಿಕವಾಗಿ ನವೀಕರಿಸಲಾಗಿದೆ. ವಿಶೇಷವಾಗಿ ಈ ದೇವಿಯರಿಗೆ ನವರಾತ್ರಿಯಂದು ೯ ದಿನಗಳ ಕಾಲ ಉತ್ಸವ ಮತ್ತು ಸಾಂಸ್ಕೃತಿಕ ಕಾರ್ಯಕ್ರಮ ನಡೆಯುತ್ತವೆ ಕೊನೆಯ ದಿನ ಆನೆಯ ಮೇಲೆ ಅಂಬಾರಿ ಮಾಡಿ ದೇವಿಯ ವಿಗ್ರಹವನ್ನು ಪಟ್ಟಣದ ಪ್ರಮುಖ ಬೀದಿಗಳಲ್ಲಿ ಮೇರವಣಿಗೆ ಮಾಡಲಾಗುತ್ತದೆ. ನಂತರ ಅನ್ನ ಸಂತರ್ಪಣೆ ಇಲ್ಲಿ ನಡೆಯುತ್ತದೆ. ವಿಶೇಷವಾಗಿ ಈ ದೇವಿಗೆ ಮಂಗಳವಾರ, ಮತ್ತು ಶುಕ್ರವಾರ ವಿಶೇಷ ಪೂಜೆ ಮಾಡಲಾಗುತ್ತದೆ.

**೩.೪. ಇತರೆ ದೇವಾಲಯಗಳು**

**ಜೈನ ಬಸದಿಗಳು**

ಕರ್ನಾಟಕ ಸಾಂಸ್ಕೃತಿಕ ಇತಿಹಾಸಕ್ಕೆ ಜೈನ ಧರ್ಮದ ಕೊಡುಗೆ ಅತ್ಯಮೂಲ್ಯವಾದುದು ದಕ್ಷಿಣ ಭಾರತದ ಜೈನ ಧರ್ಮದ ಇತಿಹಸವೆಂದರೆ ಕರ್ನಾಟಕದ ಜೈನ ಧರ್ಮದ ಇತಿಹಾಸವೇ ಆಗಿದೆ ಕರ್ನಾಟಕದ ರಾಜಕೀಯ, ಧಾರ್ಮಿಕ, ಆರ್ಥಿಕ, ಸಾಮಾಜಿಕ, ವಲಯಗಳನ್ನು ರೂಪಿಸುವಲ್ಲಿ ಜೈನ ಧರ್ಮದ ಪಾತ್ರ ಹಿರಿದಾದುದು.

ಕರ್ನಾಟಕಕ್ಕೆ ಜೈನಧರ್ಮ ಯಾವಾಗ ಆಗಮನವಾಯಿತು ಎಂದು ಹೇಳುವುದು ಕಷ್ಟ ಚಂದ್ರಗುಪ್ತ ಮೌರ್ಯನ ಆಡಳಿತದ ಅವಧಿಯಲ್ಲಿ ಉತ್ತರ ಭಾರತದಲ್ಲಿ ೧೨ ವರ್ಷಗಳ ಕಾಲ ಕ್ಷಾಮ ಉಂಟಾದಾಗ ಜೈನ ಗುರು ಭದ್ರಬಾಹು ೧೨೦೦ ಮುನಿ ಸಂಘಗಳೊಡನೆ ದಕ್ಷಿಣದ ಕಡೆ ಬರುತ್ತಾರೆ. ಭದ್ರಬಾಹುವಿನೊಡನೆ ಚಂದ್ರಗುಪ್ತಮೌರ್ಯನು ಕಳ್ಳಪ್ಪ (ಶ್ರವಣಬೆಳಗೋಳ)ಗೆ ಬರುತ್ತಾರೆ.

ಭದ್ರಬಾಹು ಕಳ್ಳಪ್ಪನಾಡನ್ನು ಸಮೀಪಿಸಿದಾಗ ತನ್ನ ಅವಸಾನ ಹತ್ತಿರವಾಯಿತೆಂದು ಶಿಷ್ಯ ಚಂದ್ರಗುಪ್ತನೊಡನೆ ಇಲ್ಲಿಯೇ ಉಳಿಯುತ್ತಾರೆ. ಇವರು ಶ್ರವಣಬೆಳಗೋಳಕ್ಕೆ ಬಂದು ನೆಲೆಸಿದ್ದರಿಂದ ಜೈನಧರ್ಮವು ಈ ಪ್ರದೇಶದಲ್ಲಿ ಪ್ರಾಬಲ್ಯಗೊಂಡಿತೆಂದು ಹೇಳಬಹುದು.

ಗಂಗರು ಮತ್ತು ಹೊಯ್ಸಳರ ಕಾಲಾವಧಿಯಲ್ಲಿ ಜೈನ ಧರ್ಮಕ್ಕೆ ರಾಜಾಶ್ರಯ ನೀಡಿದ್ದರಿಂದ ನೂರಾರು ಜೈನ ಬಸದಿಗಳು ಚೈತಾಲಯಗಳನ್ನು ನಿರ್ಮಾಣಗೊಂಡಿರುವುದನ್ನು ಕಾಣಬಹುದು. ಕೊಪ್ಪಣ ಪ್ರದೇಶ (ಕೊಪ್ಪಳ)ವು ಜೈನರ ಎರಡನೇ ಕಾಶಿ ಎಂದೇ ಪ್ರಸಿದ್ಧಿ ಪಡೆದಿದೆ. ಈ ಜಿಲ್ಲೆ ಪರಿಸರದಲ್ಲಿಯೇ ಬರುವ ಯಲಬುರ್ಗ ಪಟ್ಟಣವು ಜೈನರ ಪ್ರಭಾವಕ್ಕೆ ಒಳಗಾಗಿದ್ದು ಕ್ರಿ.ಶ.೯ನೇ ಶತಮಾನದಲ್ಲಿ ಜೈನಧರ್ಮ ಈ ಪ್ರದೇಶದಲ್ಲಿ ಇತ್ತೆಂಬುವುದಕ್ಕೆ ಅನೇಕ ಶಾಸನ ಮತ್ತು ಅಲ್ಲಿ ಸಿಗುವ ಜೈನ ತೀರ್ಥಂಕರ ಮೂರ್ತಿಗಳು ಮತ್ತು ಜೈನ ಅವಶೇಷಗಳು ಇಲ್ಲಿ ಹೇರಳವಾಗಿ ಸಿಗುತ್ತವೆ.

ಪಟ್ಟಣದ ಉತ್ತರ ಭಾಗದಲ್ಲಿರುವ ಸಂಗಮೇಶ್ವರ ದೇವಾಲಯವು ಬಹುಷ್ಯ ಪ್ರಾಚೀನ ಕಾಲದಲ್ಲಿ ಜೀನ ದೇವಾಲಯವಾಗಿದ್ದು ಪ್ರಸ್ತುತ ಸಂಗಮೇಶ್ವರ ದೇವಾಲಯವಾಗಿ ಮಾರ್ಪಡಿಸಲಾಗಿದೆ.

ಪಟ್ಟಣದ ಹೊರಭಾಗದಲ್ಲಿ ಒಂದು ಪ್ರಾಚೀನ ಕಾಲದ ಜೈನ ಮೂರ್ತಿಶಿಲ್ಪವು ಅನಾಥವಾಗಿ ಬಿದ್ದಿರುವುದನ್ನು ಕಾಣಬಹುದಾಗಿದೆ.

ಜಿನ್ನಿಂಗ್ ಪ್ಯಾಕ್ಟರಿ ಹೊರಗೆ ಕಟ್ಟೆಯ ಮೇಲಿನ ಒಡೆದ ಶಿಲಾವಿಗ್ರಹದ ಪೀಠದಲ್ಲಿಯ ಈ ಶಾಸನವು ಆರುಸಾಲುಗಳಿಂದ ಕುಡಿದ್ದು ತ್ರಪಿತವಾಗಿದೆ. ಮಹಾಮಂಡಳೇಶ್ವರ ವಿಕ್ರಮಾದಿತ್ಯಕದೇವನ ಮಹಾಪ್ರಧಾನ ತಂತ್ರಾಧಿಷ್ಠಾಯಕ ದೇವಣಾರ್ಯ ನಾಯಕನಿಗೆ. ಸಂಬಂಧಿಸಿದ ಸ್ತ್ರೀಯೋರ್ವಳು ಪಾರ್ಶ್ವನಾಥ ಬಸದಿಯನ್ನು ಮಾಡಿಸಿದಂತೆ ತಿಳಿಯುತ್ತದೆ.[೧೨] ಮತ್ತು ಸಾಲರಜಂಗ್ ಮ್ಯೂಸಿಯಂನಲ್ಲಿರುವ ಚೌವೀಸ್ ತೀರ್ಥಂಕರ ಪ್ರತಿಮೆಯ ಅಡಿಯಲ್ಲಿ ಮೂಲ ಸಂಘ ದೇಸಿಯ ಗಣದ ಮಾದಣ ದಂಡನಾಯಕ ಕಟ್ಟಿಸಿದ ಬಸದಿಗೆ ರಾಯರಾಜಗುರು ಮಂಡಳಾಚಾರ್ಯ ಶ್ರೀಮತ್ ಮಾಘನಂದಿಸಿದ್ಧಾಂತ ಚಕ್ರವರ್ತಿಯ ಪ್ರಿಯ ಶಿಷ್ಯ ಕೊಪಣತೀರ್ಥದ ಎಮ್ಮೆಯರ ಪ್ರಿಥಿಗೌಡ ಮತ್ತು ಅವರ ಹೆಂಡತಿ ಮಲೌವೆಯ ಮಗ ಬೋಪಣ್ಣನು ತಮ್ಮ ನೋಂಪಿ ನಿಮಿತ್ತ ಚಾವೀಸ್ ತೀರ್ಥಂಕರ ಬಿಂಬ ಮಾಡಿಸಿದ ಉಲ್ಲೇಖವಿದೆ.[೧೩]

ಅದೇ ಮ್ಯೂಸಿಯಂನ ಇನ್ನೊಂದು ಜೈನ ತೀರ್ಥಂಕರ ಬಿಂಬದ ಕೆಳಗೆ ಮೂಲಸಂಘ ದೇಸಿಯಗಣ ಪುಸ್ತಕಗಚ್ಚದಯಿಂಗಳೇಶ್ವರ ಬಳಿಯ ಮಾಧವ ಚಂದ್ರಭಟ್ಟಾರಕನ ಶಿಷ್ಯ ರಾಜಧಾನಿ ಎರಂಬರಗೆಯ ಸಿದ್ದಚಕ್ರದ ನೋಂಪಿ ಶ್ರುತಪಂಚಮಿ ನೋಂಪಿಗಾಗಿ ಪಂಚಪರಮೇಷ್ಠಿಗಳ ಪ್ರತಿಮೆ ಮಾಡಿಸಿದ.[೧೪]

ಈಗ ಲಂಡನ್‌ನ ವಿಕ್ಟೋರಿಯಾ ಮತ್ತು ಆಲ್ಬರ್ಟ್ ವಸ್ತು ಸಂಗ್ರಹಸಾಲಯದಲ್ಲಿರುವ ಜೀನ ಬಿಂಬದ ಪೀಠದಲ್ಲಿ ಮುಮ್ಮಡಿ ಸಿಂಗನ ಉಲ್ಲೇಖ ಬಂದಿರುವುದರಿಂದ ೧೩ನೇ ಶತಮಾನದ ಉತ್ತರಾರ್ಧಕ್ಕೆ ಸೇರಿಸಬಹುದಾಗಿದೆ. ಹೊಯ್ಸಳ ದೇಶ ಮತ್ತು ಕುಂತಳ ದೇಶಗಳಲ್ಲಿ ಹೆಸರಾಗಿದ್ದ ದೇಶಿಯ ಗಣದ ರಾಯಾಚಾರ್ಯನು ಮುಮ್ಮಡಿ ಸಿಂಗನ ಬಾಧೆಯಿಂದ

ಯರಂಬರಗೆಯಲ್ಲಿ ಹಾಳಾದ ಜೈನಧರ್ಮವನ್ನು ಉದ್ಧರಿಸಿದನು ಮೂಲ ಸಂಘದ ದೇಸಿಯಗಣದ ಪುಸ್ತಕ ಗಚ್ಚದ ಕುಂದಕುಂದಾನ್ವಯದ ರೋಣ ಸಂಬಂಧದ ಎರಂಬರಿಗೆಯ ನಗರ ಜಿನಾಲಯಕ್ಕೆ ಮಿಂಡಗುದುಲಿಯ ಕೇತಿಸೆಟ್ಟಿಯ ಮಗ ಮಲ್ಲಿಸೆಟ್ಟಿಯು ಪಾರ್ಶ್ವನಾಥ ದೇವರ ವಿಗ್ರಹವನ್ನು ಮಾಡಿಸಿದ. ವಿಗ್ರಹವನ್ನು ಮಾಡಿಸಿದ ರೂಮರಿ ಚಕ್ರವರ್ತಿ ಪಾಲೊಜಿ.[೧೫]

**ಇಸ್ಲಾಂ ಸ್ಮಾರಕಗಳು (ಧಾರ್ಮಿಕ ಕಟ್ಟಡಗಳು)**

ಯಲಬುರ್ಗ ಪಟ್ಟಣವು ಇಸ್ಲಾಂ ಮತದವರನ್ನು ಒಳಗೊಂಡಿದ್ದು ಅವರ ನಂಬಿಕೆ ಆಚರಣೆಗೆ ತಕ್ಕಂತೆ ಧಾರ್ಮಿಕ ಕಟ್ಟಡಗಳನ್ನು ಕಾಣಬಹುದಾಗಿದೆ. ಮುಖ್ಯವಾಗಿ ಮಸೀದಿಗಳು ಮತ್ತು ದರ್ಗಾಗಳನ್ನು ಒಳಗೊಂಡಿದೆ.

ಮುಸಲ್ಮಾನ ಬಾಂದವರು ಯಲಬುರ್ಗ ಪಟ್ಟಣದಲ್ಲಿ ಪಾರ್ಥನೆ ಸಲ್ಲಿಸುವ ಸಲುವಾಗಿ ಸಂತೆ ಬೀದಿಯಲ್ಲಿ ಮಸೀದಿ ಕಟ್ಟಿಕೊಂಡಿದ್ದಾರೆ. ಪೂರ್ವಾಭಿಮುಖವಾಗಿದ್ದು ಸಾಕಷ್ಟು ವಿಸ್ತೀರ್ಣ ಒಳಗೊಂಡಿದೆ. ಮಸೀದಿಯು ಆಂಜನೇಯ ದೇವಾಲಯಕ್ಕೆ ಹೊಂದಿಕೊಂಡಂತೆ ಇರುವುದರಿಂದ ಇದು ಹಿಂದೂ ಮತ್ತು ಮುಸ್ಲಿಂ ಭಾವೈಕ್ಯತೆಯ ಸಂಕೇತವಾಗಿದೆ. ಇಂಡೋ ಇಸ್ಲಾಮಿಕ್ ಶೈಲಿಯಲ್ಲಿ ಮಸೀದಿ ರಚನೆಗೊಂಡಿದ್ದು ಮಸೀದಿಯ ಮುಂದಿನ ಬಾಗಿಲ ದಾರಿ ಆ ಮೂಲಕ ಆಕಾರವುಳ್ಳ ಕಮಾನುಗಳಿಂದ ಕಟ್ಟಲಾಗಿದೆ. ಪುಷ್ಕಳವಾದ ಸುರುಳಿಗಳಿಂದ ಅಲಂಕೃತವಾಗಿದೆ. ಮಸೀದಿಯಲ್ಲಿನ ಪ್ರಾರ್ಥನೆ ಗೂಡು ಮತ್ತು ಅದರ ಸುತ್ತ ಇರುವ ಗೋಡೆಗಳು ಅತೀ ನಾಜೂಕಾದ ಸುರುಳಿ, ನಕ್ಷತ್ರಗಳಿಂದ ಕೂಡಿದೆ. ಕುಂಭ ಪೀಠಗಳ ಮೇಲಿನ ಅರ್ಧಸ್ಥಂಭ ಚಿತ್ರಣ ಭಾರತೀಯ ಮಾದರಿಯಲ್ಲಿದ್ದು ಅತ್ಯಂತ ರಮಣೀಯವಾಗಿದೆ. ಅಲ್ಲದೆ ಎತ್ತರವಾದ ಬುರ್ಜುಗಳನ್ನು ಕಾಣಬಹುದು.

**ದರ್ಗಾಗಳು**

ಇಸ್ಲಾಂ ಧರ್ಮದಲ್ಲಿ ಧಾರ್ಮಿಕ ಕೇಂದ್ರಗಳಾಗಿದ್ದು ನಂಬಿಕೆ ಆಚರಣೆಗಳನ್ನು ಆಸೆ-ಆಕಾಂಕ್ಷೆಗಳನ್ನು ಅಲ್ಲಾನಲ್ಲಿ ಒಪ್ಪಿಸುವುದಕ್ಕಾಗಿ, ಧರ್ಮಪ್ರಚಾರಕ್ಕಾಗಿ ಮುಲ್ಲಾಗಳು ಮತ್ತು ಸೂಫಿ-ಸಂತರು ಈ ದರ್ಗಾಗಳಲ್ಲಿ ಇದ್ದುಕೊಂಡು ಮುಸಲ್ಮಾನ ಬಾಂದವರ ಕಷ್ಟ-ಸುಖಗಳನ್ನು ದುಃಖ ದುಮ್ಮಾನಗಳನ್ನು ಈಡೇರಿಸುವ ಸಲುವಾಗಿ ದರ್ಗಾಗಳು ನಿರ್ಮಾಣಗೊಂಡಿರುವುದು ವಿಶೇಷವಾಗಿದೆ.

ಯಲಬುರ್ಗ ಪಟ್ಟಣದಲ್ಲಿ ಒಂದು ದರ್ಗಾವನ್ನು ಕಾಣಬಹುದು. ಅದನ್ನು ಸೂಫಿ ಸಂತ ಪರಂಪರೆಯ ಶ್ರೀ ಅಷರಪ್ ಅಲಿ ವಲಿ ದರ್ಗಾ ಎಂದು ಕರೆಯುತ್ತಾರೆ. ಈ ದರ್ಗಾಗಳ ಸ್ಥಾಪನೆ ಬಹುಮನಿಸುಲ್ತಾನರ ಕಾಲದಿಂದಲೂ ಬೆಳೆದು ಬಂದಿದ್ದು ಈ ದರ್ಗಾಗಳಲ್ಲಿ ತಮ್ಮ ಧರ್ಮ ಗುರುಗಳ ಸಮಾಧಿ ಇದ್ದು ಅವರ ಆಸೆ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳಲು ಹೂವು, ಗಂಧ, ಸಕ್ಕರೆ, ಹಸಿರುಬಣ್ಣದ ಬಟ್ಟೆ ಧೂಪವನ್ನು ಇಟ್ಟು ಪ್ರಾರ್ಥನೆ ಮಾಡುವುದು ವಾಡಿಕೆಯುಂಟು.

### ಕ್ರೈಸ್ತ ಮಿಷನರಿಗಳ ಪಾತ್ರ

ಕ್ರಿ.ಶ.೧೫ನೇ ಶತಮಾನದಲ್ಲಿ ಪಶ್ಚಿಮ ಕರಾವಳಿ ಪ್ರದೇಶದಲ್ಲಿ ಪೋರ್ಚುಗೀಸರು ಕಂಡುಬಂದ ನಂತರ ಕ್ರೈಸ್ತ ಧರ್ಮಿಯರ ಚಟುವಟಿಕೆಗಳು ಗೋವಾ, ಕರ್ನಾಟಕ, ಮಲಬಾರ್ ಮುಂತಾದ ಪ್ರದೇಶಗಳಲ್ಲಿ ವ್ಯಾಪಕವಾಗಿ ಕಂಡುಬರುತ್ತದೆ. ಕ್ರೈಸ್ತ ಮಿಷನರಿಗಳು ಕೈಗೊಂಡ ಧಾರ್ಮಿಕ ಚಟುವಟಿಕೆಗಳು ಸ್ಥಾಪಿಸಿದ ಶಿಕ್ಷಣ ಕೇಂದ್ರಗಳು ನಡೆಸಿದ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳ ಪ್ರಭಾವ ಇಡೀ ಭಾರತದಲ್ಲಿ ಹರಡಿತ್ತು, ಕ್ರೈಸ್ತ ಧರ್ಮದ ಹಿನ್ನೆಲೆಯಿಂದಲೂ ಕರ್ನಾಟಕ ಭಾರತದಲ್ಲಿ ಮುಖ್ಯ ಸ್ಥಾನವನ್ನು ಪಡೆದಿದೆ.[೧೬]

ಯಲಬುರ್ಗ ಪಟ್ಟಣದಲ್ಲಿ ಕ್ರೈಸ್ತ ಧರ್ಮಿಯರು ನೆಲೆಸಿದ್ದು ಅಲ್ಪಸಂಖ್ಯಾತರಾಗಿದ್ದಾರೆ. ಚರ್ಚಗಳ ನಿರ್ಮಾಣ ಮಾಡಿಕೊಂಡು ಶಾಂತಿ ಬೋಧನೆ ಮತ್ತು ಧರ್ಮ ಪ್ರಸಾರ ಮಾಡುತ್ತಿದ್ದಾರೆ. ಕ್ರೈಸ್ತ ಮಿಷನರಿ ಸಂಘವು ವಿದ್ಯಾ ಸಂಸ್ಥೆಗಳನ್ನು ಸ್ಥಾಪಿಸಿ ಶಿಕ್ಷಣ ನೀಡುತ್ತವೆ. ಆಸ್ಪತ್ರೆಗಳನ್ನು ತೆರೆಯುವುದರ ಮೂಲಕ ಆರೋಗ್ಯ ಸೇವೆ ನೀಡುತ್ತಾರೆ. ಸಮಾಜದಲ್ಲಿ ಕ್ರೈಸ್ತ ಬಾಂಧವರು ಅನ್ಯೋನ್ಯವಾಗಿದ್ದಾರೆ.

### ೩.೫. ಮೂರ್ತಿ ಶಿಲ್ಪಗಳು

ಶಿಲ್ಪ ಎನ್ನುವ ಮಾತು ಮೊದಲು ಬಹಳ ವ್ಯಾಪಕವಾದ ಅರ್ಥವನ್ನು ಪಡೆದಿದ್ದು. ಪ್ರಸಿದ್ದವಾದ ೬೪ ಕಲೆಗಳಲ್ಲಿ 'ಶಿಲ್ಪ' ಎನ್ನುವ ಹೆಸರು ಅನ್ವಯವಾಗುತ್ತಿತ್ತು ಮುಂದೆ ಈ ಪದದ ವ್ಯಾಪ್ತಿ ಪರಿಮಿತಿಗೊಂಡು ಶಿಲ್ಪ ಎಂದರೆ ಮೂರ್ತಿಗಳ ನಿರ್ಮಾಣ ಎಂಬ ಅರ್ಥಕ್ಕೆ ಸೀಮಿತವಾಯಿತು.[೧೭]

ಜಗತ್ ಸೃಷ್ಟಿಯು ಯಾವಾಗ ಮೊದಲಾಯಿತೋ ಆಗಲೇ ಶಿಲ್ಪವು ಪ್ರಾರಂಭವಾಗಿದೆಯೆಂದು ವೇದವು ಹೇಳಿದೆ. ಈ ಜಗತ್ತಿನ ಸೃಷ್ಟಿ ಕರ್ತನನ್ನು ಜಗತ್ ಶಿಲ್ಪಿ ಎಂದು ವರ್ಣಿಸಿರುವುದುಂಟು. ಭಾರತೀಯ ಕಲೆಯಲ್ಲಿ ವಾಸ್ತು, ಮೂರ್ತಿ, ಚಿತ್ರಕಲೆಗಳಿಗೆ ಸಂಬಂಧಿಸಿದ ಒಟ್ಟಾರೆ ಅಧ್ಯಯನವನ್ನು "ಶಿಲ್ಪಶಾಸ್ತ್ರವೆಂದು" ಗುರುತಿಸಲಾಗುತ್ತದೆ. "ಮೂರ್ತಿ" ಎಂಬ ಪದಕ್ಕೆ ಪರ್ಯಾಯವಾಗಿ ಬಳಸಿದ ಪದಗಳಿಂದ ಪ್ರತಿಮಾ ಬಿಂಬ ಪ್ರತಿಕೃತಿ ವಿಗ್ರಹ ಮುಂತಾದ ಶಿಲ್ಪಗಳು ಅದೊಂದು ಭೌತಿಕ ವಸ್ತು ಎಂಬಂತೆ ಅರ್ಥಮಾಡಿಕೊಡುತ್ತದೆ.[೧೮] ಅರಣ್ಯಕಗಳು, ಋಗ್ವೇದ, ಸ್ಮೃತಿಗಳು ಮುಂತಾದ ಧಾರ್ಮಿಕ ಗ್ರಂಥಗಳಲ್ಲಿ ಶಿಲ್ಪಿ ಮತ್ತು ಶಿಲ್ಪಿಗೆ ಸಂಬಂಧಿಸಿದಂತೆ, ಶಿಲ್ಪಶಾಸ್ತ್ರದ ಬಗ್ಗೆ ಮಾಹಿತಿಯನ್ನು ಪಡೆಯಬಹುದಾಗಿದೆ.

ಕಾಶ್ಯಪಶಿಲ್ಪ, ಮನಸಾರ, ಸಮರಾಂಗಣ ಸೂತ್ರಧಾರ, ಶಿಲ್ಪರತ್ನಂ ಮಯಮತಂ, ಮಯವಸ್ತುಶಾಸ್ತ್ರ, ವಿಶ್ವಕರ್ಮ, ವಾಸ್ತುಶಾಸ್ತ್ರ, ಸಕಲಾಧಿಕಾರ ಕಾಶ್ಯಪಸಂಹಿತ, ದೇವತಾ ಮೂರ್ತಿ, ಲಕ್ಷಣ ಪ್ರಸಾದ ಮಂಡನ, ರಾಜವಲ್ಲ ಭರಂತಹ ಇಪ್ಪತ್ತು ಗ್ರಂಥಗಳು ಅತಿ ಪ್ರಮುಖವಾಗಿದೆ. ಕಾರಣ ಇವು ಶಿಲ್ಪಶಾಸ್ತ್ರದ ಬಗ್ಗೆ ತಿಳಿಸುತ್ತದೆ.[೧೯]

**ಶೈವ ಶಿಲ್ಪಗಳು**

ಶಿವನನ್ನು ಮಲ್ಲಿಕಾರ್ಜುನ ಪಶುಪತಿ, ಮಹೇಶ್ವರ, ರುದ್ರ, ಕಲ್ಲೇಶ್ವರ, ಭೋಗೇಶ್ವರ, ಮುಕ್ತೇಶ್ವರ, ಅರ್ಧನಾರೇಶ್ವರ ನೀಕಂಠೇಶ್ವರ ಇತ್ಯಾದಿ ಹೆಸರುಗಳಿಂದ ಕರೆಯಲಾಗುತ್ತದೆ. ಶಿವನನ್ನು ಹೆಚ್ಚಾಗಿ ಲಿಂಗದ ರೂಪದಲ್ಲಿ ಪೂಜೆ ಮಾಡುತ್ತಿದ್ದು, ಮೂರ್ತಿ ರೂಪದಲ್ಲಿ ಪೂಜಿಸುವುದು ಕಡಿಮೆ ಶಿವನನ್ನು ಪೂಜಿಸುವವರನ್ನು (ಆರಾಧಿಸುವವರು) ಶೈವ ಪಂಥಕ್ಕೆ ಸೇರಿಸಲಾಗಿದೆ. ಶಿವನ ಲೀಲಾವಳಿಗಳು ಶಿಲ್ಪರೂಪದಲ್ಲಿ ಭಿತ್ತಿಯ ಮೇಲೆ ಕಂಬಗಳ ಮೇಲೆ ಕೆತ್ತಲ್ಪಟ್ಟಿರುತ್ತವೆ. ಪ್ರಸ್ತುತ ಅಧ್ಯಯನದಲ್ಲಿ ಸಾಕಷ್ಟು ಶೈವ ದೇವಾಲಯಗಳು ಕಾಣಿಸಿವೆ. ಯಲಬುರ್ಗ ಪಟ್ಟಣದಲ್ಲಿ ಆಡಳಿತ ನಡೆಸಿದ ಅರಸುಮನೆತನಗಳು ಶೈವ ಧರ್ಮದ ಅನುಯಾಯಿಯಾಗಿದ್ದು ಸಾಕಷ್ಟು ಪ್ರೋತ್ಸಾಹ ಮತ್ತು ಸಹಕಾರ ನೀಡಿದ್ದಾರೆ. ಈಶ್ವರ ಕಲ್ಲೇಶ್ವರ, ಸಂಗಮೇಶ್ವರ ಮುತ್ತಿನ ಪೆಂಡೆಶ್ವರ, ಸಿದ್ದೇಶ್ವರ ದೇವಾಲಯಗಳನ್ನು ಕಾಣಬಹುದು.

**ಶಿವಲಿಂಗ**

ಲಿಂಗವು ಶೈವಧರ್ಮದ ಪ್ರತೀಕ ಶಿವನನ್ನು ಲಿಂಗ ರೂಪದಲ್ಲಿ ಪೂಜಿಸುತ್ತಾರೆ ಲಿಂಗಾತ್ ಸರ್ವಂ ಸಮುತ್ಪನ್ನಂ ಲಯಂ ತನ್ಮನ್ ಪ್ರಕೀರ್ತಿತಮ್ ಲಿಂಗದಿಂದಲೇ ಸಕಲ ಜಗತ್ತು ಹುಟ್ಟುತ್ತದೆ ಮತ್ತು ಅಲ್ಲಿಯೇ ಲಯವಾಗುತ್ತದೆ.[೨೦] ಸುಪ್ರಭೇದಾಗಮದ ಪ್ರಕಾರ ಗರ್ಭಗೃಹದಲ್ಲಿ ಸ್ಥಾಪಿತಗೊಂಡ ಅಚಲ ಲಿಂಗಗಳಲ್ಲಿ ಒಂಬತ್ತು ವಿಧಗಳಿವೆ, ಅವು ಸ್ವಯಂಭು, ಪುರವ, ದೈವತ್ವ, ಗಾಣಪತ್ಯ, ಅಸುರ, ಸುರ, ರಾಕ್ಷಸ, ಮಾನುಷ, ಬಾಣಲಿಂಗಗಳಾಗಿವೆ.[೨೨] ಮನುಷ್ಯಾಕೃತ ಲಿಂಗಗಳು ಬಹುವಾಗಿ ಕಂಡುಬರುತ್ತವೆ. ಇದು ಬ್ರಹ್ಮಭಾಗ, ವಿಷ್ಣುಭಾಗ, ವೃತ್ತಾಕಾರದ ಪೂಜಾ ಭಾಗವು ರುದ್ರಭಾಗ, ರುದ್ರಭಾಗದಲ್ಲಿ ಬ್ರಹ್ಮ ಸೂತ್ರವಿರುತ್ತದೆ ಮತ್ತು ಭಿನ್ನ ಭಿನ್ನ ಶಿರೋವರ್ತನಗಳಿರುತ್ತವೆ. ಆದುದರಿಂದ ಪ್ರತಿಯೊಂದು ದೇವಾಲಯದಲ್ಲಿ ಇರುವ ಮನುಷ್ಯಾಕೃತ ಲಿಂಗಗಳೂ ತ್ರಿಮೂರ್ತಿಗಳ ಸಂಕೇತವಾಗಿದೆ.[೨೨]

ಯಲಬುರ್ಗ ಪಟ್ಟಣದ ಶ್ರೀಧರ ಮುರುಡಿ ಮಠದ ಒಳಗಡೆ ಈಶ್ವರ ದೇವಾಲಯವಿದ್ದು ಗರ್ಭಗುಡಿಯಲ್ಲಿ ಸುಮಾರು೧.೫ ಅಡಿ ಎತ್ತರವಾದ ಕಪ್ಪು ಶಿಲೆಯಿಂದ ಕುಡಿದ ಶಿವಲಿಂಗವನ್ನು ಕಾಣಬಹುದು. ರುದ್ರಭಾಗದ ಮೇಲೆ ಲೋಹದ ಶಿವನ ಮುಖವಾಡವನ್ನು ಹಾಕಲಾಗಿದೆ, ಪಾಂಡುರಂಗ ದೇವಾಲಯದ ಮೊದಲ ಗರ್ಭಗುಡಿಯಲ್ಲಿ ಕಪ್ಪು ಶಿಲೆಯಿಂದ ಕೂಡಿದ ಶಿವಲಿಂಗವನ್ನು ಕಾಣಬಹುದು. ಈ ಶಿವಲಿಂಗವು ೩ ಭಾಗಗಳಿಂದ ಕೂಡಿದ್ದು ಬ್ರಹ್ಮಭಾಗ, ವಿಷ್ಣುಭಾಗ ಮತ್ತು ರುದ್ರಭಾಗದಿಂದ ಕೂಡಿದ್ದು, ಸುಮಾರು ೧.೫ ಅಡಿ ಎತ್ತರವಾಗಿದೆ. ಹಾಗೂ ಲಿಂಗದಲ್ಲಿ ಬಲಭಾಗಕ್ಕೆ ಬೆಲಹರಿ ಇದೆ. ಮುತ್ತಿನ ಪೆಂಡಶ್ವರ ದೇವಾಲಯದಲ್ಲಿ ಸುಮಾರು. ೧ ಅಡಿ ಎತ್ತರದ ಶಿವಲಿಂಗವನ್ನು ಕಾಣಬಹುದಾಗಿದೆ. ಸ್ಥಳೀಯರ ನಂಬಿಕೆಯ ಪ್ರಕಾರ ಇದು ಉದ್ಭವಲಿಂಗವಾಗಿದ್ದು ಪ್ರತಿವರ್ಷ ಬೆಳೆಯುತ್ತದೆ. ಎಂಬ ನಂಬಿಕೆ

ಇಟ್ಟುಕೊಂಡಿದ್ದಾರೆ. ಮೈಲಾರ ಲಿಂಗೇಶ್ವರ ದೇವಾಲಯದಲ್ಲಿ ಶಿವಲಿಂಗವನ್ನು ಕಾಣಬಹುದು. ಲಿಂಗವು ಮೂರು ಭಾಗಗಳಿಂದ ಕೂಡಿದ್ದು ರುದ್ರಭಾಗದಲ್ಲಿ ಕಣ್ಣನ್ನು ಧರಿಸಿಲಾಗಿದೆ. ಚೌಕಿ ಮಠದಲ್ಲಿ ಶಿವಲಿಂಗವಿದ್ದು ಲಿಂಗದ ಎದುರಿಗೆ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ರುದ್ರಭಾವಿ ಆಂಜನೆಯನ ದೇವಾಲಯದಲ್ಲಿ ಶಿವಲಿಂಗವನ್ನು ಕಾಣುಬಹುದಾಗಿದೆ. ಸಂಗಮೇಶ್ವರ ದೇವಾಲಯದಲ್ಲಿ ಸುಮಾರು ೧.೫ ಅಡಿ ಎತ್ತರದ ಶಿವಲಿಂಗವನ್ನು ಕಾಣಬಹುದಾಗಿದೆ. ಅದೇ ರೀತಿ ಸಿದ್ಧರಾಮೇಶ್ವರ ಮಠದಲ್ಲಿ ಸುಮಾರು ೧ ಅಡಿ ಎತ್ತರದ ಕಪ್ಪು ಶಿಲೆಯಿಂದ ಕೂಡಿದ ಶಿವಲಿಂಗವನ್ನು ಕಾಣಬಹುದು.

**ಗಣಪತಿ ಶಿಲ್ಪಗಳು**

ಗಣಪತಿಯು ಭಾರತೀಯ ಜಯ, ಶುಭ ವೈಭವದ ಸಂಕೇತ, ಶಿವ, ಬ್ರಹ್ಮಾಂಡ, ಗಣೇಶ, ವರಹ, ಸ್ಕಂದ ಬ್ರಹ್ಮ-ದೈವರ್ತ, ಮತ್ಸ್ಯ ವಾಮನ, ಪದ್ಮ ಮೊದಲಾದ ಪುರಾಣಗಳು ಹಾಗೂ ರೂಪ ಮಂಡನ ಕಾಮಿಕಾಮಗಳು ಗಣಪತಿಯನ್ನು ಉಲ್ಲೇಖಿಸಿವೆ.[೨೩]

ಶಿವ ಪುರಾಣವು ಗಣಪತಿಯ ಹುಟ್ಟಿನ ಬಗ್ಗೆ ತಿಳಿಸುತ್ತದೆ. ಗಣಪತಿಗೆ ನಾಲ್ಕು ಕೈಗಳಿರುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಗಣಪತಿಯನ್ನು ಬಾಲಗಣಪತಿ ತರುಣಗಣಪತಿ, ಭಕ್ತಿ ವಿಘ್ನೇಶ್ವರ, ವೀರವಿಘ್ನೇಶ, ಮಹಾಗಣಪತಿ, ಪ್ರಸನ್ನಗಣಪತಿ, ದ್ವಜಗಣಪತಿ, ಉರ್ದ್ವಗಣಪತಿ, ಎನ್ಮತ್ತ ಗಣಪತಿ, ಎಕದಂತ, ನೃತ್ಯಗಣಪತಿ ಮತ್ತು ಮೂಷಿಕವಾಹನ ಎಂಬುದಾಗಿ ನಾನಾ ಹೆಸರಿನಿಂದ ಕರೆಯಲಾಗುತ್ತದೆ.[೨೪]

ಸಾಮಾನ್ಯವಾಗಿ ಗಣಪತಿಯ ಶಿಲ್ಪಗಳು ಕುಳಿತ ಭಂಗಿಯಲ್ಲಿದ್ದು ಆನೆಮುಖ ಸುತ್ತಿದ ಸೊಂಡಿಲು, ದೊಡ್ಡ ಹೊಟ್ಟೆ, ನಾಲ್ಕು ಕೈಗಳಿಂದ ಕೂಡಿದವನಾಗಿ ಪಾಶ, ಅಂಕುಶ, ಅಭಯ, ಮೋದಕದಾರಿಯಾಗಿ ಕಂಡುಬರುತ್ತಾನೆ, ಇಲಿಯು ಗಣಪತಿಯ ವಾಹನವಾಗಿರುತ್ತದೆ. ಯಲಬುರ್ಗಪಟ್ಟಣದ ಸಂಗಮೇಶ್ವರ ದೇವಾಲಯದ ಪಕ್ಕದ ಬಾವಿಯಲ್ಲಿ ಕಣಶಿಲೆಯಿಂದ ಮಾಡಿದ ಸುಮಾರು ಮೂರು ಅಡಿ ಎತ್ತರದ ಕುಳಿತ ಭಂಗಿಯಲ್ಲಿರುವ ಗಣಪತಿಯನ್ನು ಕಾಣಬಹುದಾಗಿದೆ. ವೀರಭದ್ರದೇವಾಲಯದ ಗರ್ಭಗುಡಿಯ ಮುಂಭಾಗದಲ್ಲಿ ಸುಮಾರು ೧.೫ ಅಡಿ ಎತ್ತರದ ಗಣಪತಿ ವಿಗ್ರಹವನ್ನು ಕಾಣಬಹುದು.

**ನಂದಿ ಶಿಲ್ಪ**

ಶಿವನಗಣ ದೇವತೆಗಳಲ್ಲಿ ಕಂಡುಬರುವ ನಂದಿ ನಂದೀಶ ಅಥವಾ ನಂದೀಶ್ವರನನ್ನು ಮಾನವ ರೂಪದಲ್ಲಿ ೩ ಕಣ್ಣುಗಳನ್ನು ನಾಲ್ಕು ಕೈಗಳನ್ನು ಹೊಂದಿದ್ದು, ಹುಲಿಚರ್ಮವನ್ನು ಧರಿಸಿರುವನೆಂದು ಹೇಳಲಾಗಿದೆ.[೨೫] ಇವನನ್ನು ವೃಷಭ ರೂಪದಲ್ಲಿ ಗುರುತಿಸಲಾಗುತ್ತದೆ. ಪ್ರತಿ ಶಿವಾಲಯದಲ್ಲೂ ಶಿವನ ಎದುರಿಗೆ ವೃಷಭರೂಪದ ನಂದಿ ಶಿಲ್ಪವನ್ನು ಕಾಣುತ್ತೇವೆ. ನಂದಿಯು ಶಿವನ ವಾಹನ ಎಂದು ಪುರಾಣಗಳಲ್ಲಿ ಹೇಳಿದೆ, ಶಿವನನ್ನು ವೃಷದ್ವಜ, ವೃಷಕೇತನ ಎಂದು

ಕರೆಯಲಾಗಿದೆ. ಸಿಂಧೂ ಸಂಸ್ಕೃತಿಯಲ್ಲಿಯೂ ವೃಷಭಕ್ಕೆ ಪ್ರಾಮುಖ್ಯತೆ ಇದ್ದುದನ್ನು ಕಾಣುತ್ತೇವೆ. ಒಟ್ಟಾರೆ ನಂದಿಯು ಶೈವ ದೇವಾಲಯಗಳಲ್ಲಿ ಅತ್ಯಂತ ಪ್ರಾಮುಖ್ಯತೆ ಪಡೆದ ಶಿಲ್ಪವೆಂದು ತಿಳಿದುಬರುತ್ತದೆ. ಚೌಕಿ ಮಠ ಶಿವಲಿಂಗಕ್ಕೆ ಎದುರಾಗಿ ನಂದಿಯ ಶಿಲ್ಪವಿದೆ, ಸುಮಾರು ೨ ಅಡಿ ಎತ್ತರ ೩ ಅಡಿ ಉದ್ದವಿದ್ದು ದುಂಡಾಗಿದೆ, ಗಂಡಹಾರ, ಹಣೆಪಟ್ಟಿ, ಕೋರಳಪಟ್ಟಿ, ಡುಬ್ಬ ಬಳಸಿದ ಪದಕ ಹಾರ, ಗೆಜ್ಜೆಯಿದ್ದು ಅಲಂಕೃತಗೊಂಡಿದೆ ಕಾಲುಗಳನ್ನು ಮಡಿಚಿಕೊಂಡು ಎಡಗಾಲನ್ನು ಬಗ್ಗಿಸಿದೆ ಈ ನಂದಿ ವಿಗ್ರಹವನ್ನು ಕಣಶಿಲೆಯಿಂದ ಮಾಡಲಾಗಿದೆ. ಅದೇ ರೀತಿಯಾದ ನಂದಿವಿಗ್ರವು ಸಂಗಮೇಶ್ವರ ದೇವಾಲಯದಲ್ಲಿ ಶಿವಲಿಂಗಕ್ಕೆ ಎದುರಾಗಿ ಇರುವುದನ್ನು ಕಾಣಬಹುದು. ಪಾಂಡುರಂಗದೇವಾಲಯದಲ್ಲಿಯ ಈಶ್ವರ ಲಿಂಗದ ಎದುರಿಗೆ ನಂದಿವಿಗ್ರಹವನ್ನು ಕಾಣಬಹುದಾಗಿದೆ. ಮುತ್ತಿನ ಪೆಂಡೇಶ್ವರ ದೇವಾಲಯದ ಶಿವಲಿಂಗದ ಎದುರುಗಡೆ ಕಪ್ಪು ಶಿಲೆಯಲ್ಲಿ ಕೆತ್ತಿದ ಸುಂದರವಾದ ನಂದಿಯನ್ನು ಕಾಣಬಹುದು.

**ವೀರಭದ್ರ ಶಿಲ್ಪಗಳು**

ರುದ್ರನ ಉಗ್ರರೂಪಗಳ ಗುಂಪಿಗೆ ಸೇರಿದ ಇನ್ನೊಂದು ಪ್ರಚಲಿತ ಮೂರ್ತಿಯೆಂದರೆ ವೀರಭದ್ರನದು. ವೀರಭದ್ರನನ್ನು ರುದ್ರಗಣದಲ್ಲಿ ಸೇರಿಸಿದವನೆಂದೂ ವ್ಯವಹರಿಸುವುದರಿಂದ ಶಿವನ ಲೀಲಾವತಿರಗಳಲ್ಲಿ ಒಂದು ಎಂದೇ ಎಣಿಕೆ ಅವನ ಮೂರ್ತಿ ಲಕ್ಷಣದಲ್ಲಿ ಉಗ್ರ, ಅತಿಕ್ರೂರ, ಸರ್ಪದೋಷ ನಿಬರ್ಹಣ, ಕರಾಳಾಟ್ಟಹಾಸ, ಗದಾಮುಸ್ಟಿ ಹಸ್ತ, ಭುಜಂಗಣ ಭೂಷಿತ, ಭಯದ ಪಾಲನೇತ್ರಾಸನ, ದಿಗಂಬರ ಮೊದಲಾದ ವಿವರಗಳಿವೆ. ಕನ್ನಡನಾಡಿನಲ್ಲಿ ವೀರಭದ್ರನ ಮೂರ್ತಿಗಳು ಹೆಚ್ಚಾಗಿ ಕಂಡುಬರುತ್ತವೆ. ವೀರಭದ್ರನನ್ನು ವೀರಯೋಧ, ದೇವತೆಯಂತಲೂ ವೀರಪರಂಪರೆಯ ಪ್ರತೀಕವಾದ ದೇವತೆಯಂತಲೂ ಕರೆಯಲಾಗಿದೆ. ಶೈವಾಗಮಗಳಲ್ಲಿ ವೀರಭದ್ರನಿಗೆ ಒಂದು ಸ್ಥಾನವಿರುವುದು ಹಾಗೂ ವೀರಭದ್ರಾಗಮವೂ ಇರುವುದು ಗಮನಾರ್ಹ.

ವೀರಭದ್ರನು ಕಪ್ಪು ಮೈಬಣ್ಣದವನು ಮೂರು ಕಣ್ಣುಳ್ಳವನು, ನಾಲ್ಕು ಕೈಗಳಲ್ಲಿ ಖಡ್ಗ, ಬಿಲ್ಲು ಬಾಣ ಗುರಾಣಿಗಳನ್ನು ಹಿಡಿದಿರುವನು ರುಂಡ ಮಾಲೆಯನ್ನು ಪಾದರಕ್ಷೆಯನ್ನು ಧರಿಸಿರುವನು ಅವನ ಸೊಂಟಪಟ್ಟಿಯಲ್ಲಿ ವಸ್ತ್ರವನ್ನು ಧರಿಸಿರುವನು.[೨೬]

**ವೈಷ್ಣವ ಶಿಲ್ಪಗಳು**

ವೈಷ್ಣವ ಶಿಲ್ಪಗಳಲ್ಲಿ ವಿಷ್ಣು ಶಿಲ್ಪವನ್ನು ಮುಖ್ಯವಾಗಿ ಕಾಣುತ್ತೇವೆ. ವಿಷ್ಣುವು ಲೋಕಕಂಟಕರನ್ನು ನಿಗ್ರಹಿಸಲು, ಧರ್ಮವನ್ನು ರಕ್ಷಿಸಲು ೧೦ ಅವತಾರಗಳನ್ನು ಎತ್ತಿರುವನೆಂದು ಪುರಾಣಗಳು ಉಲ್ಲೇಖಿಸುತ್ತವೆ, ಅವು ಕ್ರಮವಾಗಿ ಮತ್ಸ್ಯ, ಕೂರ್ಮ, ವರಹ, ನರಸಿಂಹ, ವಾಮನ, ಪರಶುರಾಮ, ರಘುರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ[೨೭] ಮಾನಸಾರವು ವಿಷ್ಣುವಿನ ಸಾಮಾನ್ಯ ವಿವರಣೆಯನ್ನು ಕೊಡುತ್ತದೆ. ನಾಲ್ಕು ಕೈಗಳಿಂದ ಎರಡು ಕಣ್ಣುಗಳಿಂದ ಕೂಡಿದವನಾಗಿದ್ದು

ವಿಜೃಂಭಿಸುವ ಕಿರೀಟವನ್ನು ಹಳದಿ ಬಣ್ಣದ ವಸ್ತುವನ್ನು ಧರಿಸಿರುವನು ಅವನ ಎದೆಯ ಮೇಲೆ ಶುಭಕಾರಕನಾದ ಶ್ರೀವಸ್ತ್ರ ಮುದ್ರೆಯು ಇರುವುದು ನಾಲ್ಕು ಕೈಗಳಲ್ಲಿ ಶಂಖ, ಚಕ್ರ, ಗಧಾಪದ್ಮಗಳನ್ನು ಹಿಡಿದಿರುವನು, ಮೊಣಕಾಲಿನವರೆಗೂ ವನಮಾಲೆಯನ್ನು ಧರಿಸಿರುವನು, ಸಾಮಾನ್ಯವಾಗಿ ವಿಷ್ಣುವಿನ ಎಡಬಲದಲ್ಲಿ ಲಕ್ಷ್ಮಿ ಮತ್ತು ಭೂದೇವಿ ಇರುವರು, ವಿಷ್ಣು ಶಿಲ್ಪದಲ್ಲಿ ಸ್ಥಾನಿಕ, ಆಸೀನ ಮತ್ತು ಶಯನ ಎಂಬ ಮೂರು ವಿಧಗಳಿವೆ. ಪ್ರಸ್ತುತ ಅಧ್ಯಯನ ಕ್ಷೇತ್ರದಲ್ಲಿ ವೈಷ್ಣವ ಮೂರ್ತಿಗಳಲ್ಲಿ ಪಾಂಡುರಂಗ, ವೆಂಕಟರಮಣ ಹನುಮ, ಗರುಡ ಮುಂತಾದವುಗಳು ಕಂಡುಬರುತ್ತವೆ.

**ಪಾಂಡುರಂಗ**

ಯಲಬುರ್ಗ ಪಟ್ಟಣದ ಪಾಂಡುರಂಗ ದೇವಾಲಯವು ತ್ರಿಕೂಟ ದೇವಾಲಯವಾಗಿದ್ದು. ಮಧ್ಯದ ಈ ದೇವಾಲಯದಲ್ಲಿ ಪಾಂಡುರಂಗನ ವಿಗ್ರಹವನ್ನು ಕಾಣಬಹುದಾಗಿದ್ದು ಸುಮಾರು ೨ ಅಡಿ ಎತ್ತರದ ಪಾಣಿಪೀಠದ ಮೇಲೆ ಸುಮಾರು ೩ ಅಡಿ ಎತ್ತರದ ಆಕರ್ಷಣೀಯವಾದ ಸ್ಥಾನಿಕ ಭಂಗಿಯಲ್ಲಿರುವ ಪಾಂಡುರಂಗನ ವಿಗ್ರಹವನ್ನು ಕಾಣಬಹುದು. ಇತನು ಎರಡು ಕೈಗಳನ್ನು ಸೊಂಟದ ಮೇಲೆ ಇಟ್ಟುಕೊಂಡಿದ್ದಾನೆ. ಈ ಮೂರ್ತಿಶಿಲ್ಪವು ಕಪ್ಪುಶಿಲೆಯಿಂದ ಕೂಡಿದೆ.

**ವೆಂಕಟರಮಣ**

ಪಾಂಡುರಂಗ ದೇವಾಲಯದ ಮೂರನೆ ಗರ್ಭಗೃಹದಲ್ಲಿ ಸರಳವಾದ ವೆಂಕಟರಮಣನ ವಿಗ್ರಹವನ್ನು ಕಾಣಬಹುದಾಗಿದೆ. ಸುಮಾರು ೨ ಅಡಿ ಎತ್ತರದಲ್ಲಿ ಪಾಣಿಪೀಠದ ಮೇಲಿದೆ ಪಾಣಿಪೀಠದಲ್ಲಿ ಗರುಡ ವಿಗ್ರಹವಿದೆ.

**ಗರುಡ**

ಗರುಡನು ವಿಷ್ಣುವಿನ ವಾಹನವಾಗಿದ್ದು ಎಲ್ಲಾ ವಿಷ್ಣುವಿನ ದೇವಾಲಯಗಳಲ್ಲಿ ಕಾಣಬಹುದಾಗಿದೆ. ಸಾಮಾನ್ಯವಾಗಿ ಗರುಡನಿಗೆ ದ್ವಿಭುಜವಿರುತ್ತದೆ. ಎರಡು ಕೈಗಳನ್ನು ಕಾಣಬಹುದು. ಭುಜದ ಹಿಂದೆ ರೆಕ್ಕೆಯನ್ನು ಕಾಣಬಹುದು. ಯಲಬುರ್ಗ ಪಟ್ಟಣದ ಪಾಂಡುರಂಗದೇವಾಲಯದ ವೆಂಕಟರಮಣನ ವಿಗ್ರಹದ ಪಾಣಿಪೀಠದಲ್ಲಿ ಗರುಡ ವಿಗ್ರಹವನ್ನು ಕಾಣಬಹುದಾಗಿದೆ.

**ಆಂಜನೇಯ**

ಆಂಜನೇಯ ರಾಮನ ಭಂಟ (ಸೇವಕ)ನಾಗಿದ್ದು ವೈಷ್ಣವ ದೇವಾಲಯಗಳಲ್ಲಿ ಆಂಜನೇಯ ವಿಗ್ರಹವನ್ನು ಕಾಣಬಹುದು. ರುದ್ರಬಾವಿ ಆಂಜನೇಯ ದೇವಾಲದಲ್ಲಿ ೫ ಅಡಿ ಎತ್ತರದ ಆಂಜನೇಯ ವಿಗ್ರಹವಿದ್ದು ತ್ರಿಭಂಗಿಯಲ್ಲಿ ನಿಂತಿದ್ದು ಬಲಗೈಯನ್ನು ಮೇಲೆತ್ತಿದ್ದಾನೆ. ಬಾಲವು ಉದ್ದವಾಗಿದ್ದು ದ್ವಿಭುಜಹೊಂದಿದ್ದಾನೆ, ಕಾಲ್ಗಡಗ ಹಾಕಿದ್ದು, ಪಾದದ ಕೆಳಗೆ ಅಕ್ಷಯ ಕುಮಾರನ ಮೂರ್ತಿಶಿಲ್ಪವನ್ನು ಕಾಣಬಹುದು.

**ಕೊದಂಡ ರಾಮ**

ತೋಪಿನ ಹನುಪಪ್ಪನ ಬಾವಿಯಲ್ಲಿರುವ ದೇವಲಯದ ಭಿತ್ತಿಯಲ್ಲಿ ಕೋದಂಡ ರಾಮನ ಶಿಲ್ಪವಿದೆ. ಕೋದಂಡ ರಾಮನ ಪಾದದ ಎಡ ಮತ್ತು ಬಲಗಡೆ ಶ್ರೀ ದೇವಿ ಮತ್ತು ಭೂದೇವಿ ಶಿಲ್ಪಗಳನ್ನು ಕಾಣಬಹುದು ಬಲಗಡೆ ಆಂಜನೇಯ ಶಿಲ್ಪ ಇರುವುದನ್ನು ಕಾಣುತ್ತೇವೆ.

**ಶಾಕ್ತ ಮೂರ್ತಿಗಳು**

ಮಾತೃದೇವತೆಯ ರೂಪದಲ್ಲಿರುವ ಶಕ್ತಿದೇವತೆಯನ್ನು ಆರಾಧಿಸುವ ಪಂಥವನ್ನು ಶಾಕ್ತ ಪಂಥವೆಂದು ಕರೆಯುತ್ತಾರೆ. ವೈದಿಕ ಕಾಲದಲ್ಲಿ ಇಂದ್ರ, ಅಗ್ನಿ, ವರುಣ, ಸೂರ್ಯ, ವಿಷ್ಣು, ರುದ್ರ, ಮುಂತಾದ ಅಂಬ್ರನಿಸೂಕ್ತ ಮತ್ತು ರಾತ್ರಿ ಸೂಕ್ತಗಳು ಮಾತೃದೇವತೆಯ ಆರಾಧನೆಯ ಮೂಲಗಳಂತಿವೆ. ದೇವತೆಗಳ ತಾಯಿ ಅರಿತಿಯನ್ನು ಅಲಂಕಾರಿಯಾಗಿ ಸೃಷ್ಟಿಗೆ ಹೋಲಿಸಲಾಗಿದೆ.[೨೮] ಪುರಾಣಗಳ ಕಾಲದಲ್ಲಿ ಹೆಚ್ಚು ಮಾನ್ಯತೆಯನ್ನು ಪಡೆದ ತ್ರಿಮೂರ್ತಿಗಳನ್ನು ಅವರವರ ಪತ್ನಿಯರ ರೂಪದಲ್ಲಿ ಶಕ್ತಿಯನ್ನು ಗುರ್ತಿಸಿರುವುದು ಕಂಡುಬರುತ್ತದೆ. ಶಿಲ್ಪಗಳಲ್ಲಿ ಶಕ್ತಿಯನ್ನು ಶಾಂತ ಮತ್ತು ಘೋರ ರೂಪಗಳಲ್ಲಿ ಕಾಣುತ್ತೇವೆ. ಪತಿಯ ಜೊತೆಯಲ್ಲಿ ಗುರುತಿಸುವಾಗ ಶಾಂತ ರೂಪದಲ್ಲಿ ಮತ್ತು ಎರಡು ಕೈಗಳನ್ನು ಹೊಂದಿರುವಂತೆ ಒಂದು ಕೈಯಲ್ಲಿ ಕಮಲದ ಮೊಗ್ಗನ್ನು ಹಿಡಿದಿರುವಂತೆ ತೋರಿಸಲಾಗುತ್ತದೆ. ಘೋರ ರೂಪದಲ್ಲಿ ಶಿವನ ಶಕ್ತಿಯಾದ ಕಾಳಿಯನ್ನು ಹೆಚ್ಚಾಗಿ ಕಾಣುತ್ತೇವೆ. ಈ ಸಂದರ್ಭಗಳಲ್ಲಿ ಅವಳೊಬ್ಬಳನ್ನೇ ನಾಲ್ಕು, ಆರು, ಎಂಟು ಕೈಗಳಿಂದಲೂ ವಿವಿಧ ಆಯುಧಗಳಿಂದಲೂ ಘೋರ ರೂಪದಲ್ಲಿ ತೋರಿಸಲಾಗುತ್ತದೆ.[೨೯]

**ಲಕ್ಷ್ಮೀ ಶಿಲ್ಪಗಳು**

ತ್ರಿಮೂರ್ತಿಗಳಲ್ಲಿ ಪಾಲಿನ ಕರ್ತನಾದ ವಿಷ್ಣುವಿನ ಪತ್ನಿಯಾಗಿ ಕಂಡುಬರುವ ಲಕ್ಷ್ಮಿ ಅಥವಾ ಶ್ರೀಯು ವೈಭವ, ಸಂಮೃದ್ಧಿ ಮತ್ತು ಸೌಂದರ್ಯದ ಸಂಕೇತ, ಜೊತೆಗೆ ವೈವಿಧ್ಯಮಯ ಶಕ್ತಿ ಬಲ್ಲವಳು ಶಿಲ್ಪಗಳಲ್ಲಿ ಇವಳನ್ನು ಕಮಲದ ಮೇಲೆ ಪರ್ಯಾರ ಆಸನದಲ್ಲಿ ಅಥವಾ ಪದ್ಮಾಸನದಲ್ಲಿ ಕುಳಿತಂತೆ ದ್ವಿಭುಜೆ ಅಥವಾ ಚತುರ್ಭುಜ ಉಳ್ಳವಳನ್ನಾಗಿ ತೋರಿಸಲಾಗಿದೆ. ಕಮಲ, ಶ್ರೀಪಲ, ಶಂಖ, ಅಮೃತಘಟ, ಮಾತುಲಿಂಗಬೇಟಕ, ಗದಾ ಮುಂತಾದ ವಿಶಿಷ್ಟವಾದ ಆಯುಧಗಳನ್ನು ಹೊಂದಿರುತ್ತಾಳೆ ಲಕ್ಷ್ಮೀಯನ್ನು ೮ ರೂಪದಲ್ಲಿ ಕಲ್ಪಿಸಲಾಗಿದೆ. ಮಹಾಲಕ್ಷ್ಮಿ, ಧನಲಕ್ಷ್ಮಿ, ಧಾನ್ಯಲಕ್ಷ್ಮಿ, ಧೈರ್ಯಲಕ್ಷ್ಮಿ, ವೀರಲಕ್ಷ್ಮಿ, ವಿದ್ಯಾಲಕ್ಷ್ಮಿ, ಸಂತಾನಲಕ್ಷ್ಮಿ, ಮತ್ತು ಭಾಗ್ಯಲಕ್ಷ್ಮಿ ಇವರೇ ಅಷ್ಟ ಲಕ್ಷ್ಮೀಯರು [೩೦] ಯಲಬುರ್ಗಾ ಪಟ್ಟಣದ ತೋಪಿನ ಹನುಮಪ್ಪನ ಬಾವಿಯ ಬಿತ್ತಿಯಲ್ಲಿ ಕೋದಂಡ ರಾಮನ ಪಾದದ ಎಡ ಮತ್ತು ಬಲಭಾಗದಲ್ಲಿ ಶಿಲ್ಪಗಳನ್ನು ಕಾಣಬಹುದು. ತನ್ನ ಎರಡು ಕೈಗಳಲ್ಲಿ ಕಮಲದ ಮೊಗ್ಗೆಯನ್ನು ಹಿಡಿದಿದ್ದಾಳೆ. ಕಿರೀಟಧಾರಿಣಿಯಾಗಿದ್ದು ಕಪ್ಪು ಶಿಲೆಯಿಂದ ಕೆತ್ತಲ್ಪಟ್ಟಿದೆ.

**ಪಾರ್ವತಿ ಶಿಲ್ಪ**

ಪಾರ್ವತಿಯನ್ನು ಶಿವನ ಅರ್ಧಾಂಗಿಣಿ ಎಂದು ಕರೆಯುತ್ತಾರೆ. ಭೂಲೋಕದಲ್ಲಿ ಪೂಜೆಗೆ ಅರ್ಹಳಾಗಿದ್ದು ಶಿವದೇವಾಲಯಗಳಲ್ಲಿ ಪಾರ್ವತಿಯ ಮೂರ್ತಿಶಿಲ್ಪಗಳನ್ನು ಕಾಣಬಹುದಾಗಿದೆ. ಅದೇ ರೀತಿ ಯಲಬುರ್ಗ ಪಟ್ಟಣದ ಪಾಂಡರಂಗ ದೇವಾಲಯದ ಒಂದೇನ ಗರ್ಭಗೃಹದ ಶಿವಲಿಂಗದ ಪಕ್ಕದಲ್ಲಿ ಸುಮಾರು ೨ ಅಡಿ ಎತ್ತರದ ಪಾರ್ವತಿಯ ಶಿಲ್ಪವಿದ್ದು ಕಪ್ಪು ಶಿಲೆಯಿಂದ ಕೆತ್ತಲಾಗಿದೆ.

**ಮಹಿಷಮರ್ಧಿನಿ ಶಿಲ್ಪಗಳು**

ಶಿವನ ಶಕ್ತಿಯಾದ ಪಾರ್ವತಿಯ ಅನೇಕ ರೂಪಗಳಲ್ಲಿ ಮಹಿಷ ಮರ್ಧಿನಿಯೂ ಒಂದು, ಇದು ಪಾರ್ವತಿಯ ಉಗ್ರರೂಪ, ಶಾಸ್ತ್ರ ಗ್ರಂಥಗಳಲ್ಲಿ ಉಗ್ರರೂಪದ ಯುವತಿಯಂತೆ ರೂಪಗೊಂಡಿರುವಳು, ಮಹಿಷಮರ್ಧಿನಿಯು ಮಹಿಷಾಸುರನ ಮರ್ಧನಕ್ಕಾಗಿ ಶಿವ, ವಿಷ್ಣು, ಯಮ, ಚಂದ್ರ, ಇಂದ್ರ ಹೀಗೆ ಬೇರೆ ಬೇರೆ ದೇವತೆಗಳ ಒಂದೊಂದು ಶಕ್ತಿಯನ್ನು ಪಡೆದು ಕೊಂಡು ಅವತಾರ ಎತ್ತಿರುತ್ತಾಳೆ. ಶಿಲ್ಪಗಳಲ್ಲಿ ಅವಳ ಪಾದದ ಕೆಳಗೆ ಮಹಿಷನು ಬಿದ್ದಿರುವನು ಕೋಣದ ತಲೆಯು ನೆಲದ ಮೇಲೆ ಬಿದ್ದಿರುತ್ತದೆ. ಅವನ ಕತ್ತಿನ ಭಾಗದಿಂದ ಮನುಷ್ಯ ಮುಖವು ಹೊರಬಂದಿರುತ್ತದೆ. ದೇವಿಯು ತ್ರಿಶೂಲದಿಂದ ಅವನನ್ನು ಸಂಹರಿಸುವಂತೆ ಚಿತ್ರಿಸಲಾಗಿದೆ. (ಸಿಂಹವಾಹನವಾಗಿರುತ್ತದೆ)[೩೧]

ಪಾಂಡುರಂಗ ದೇವಾಲಯದ ಒಂದನೇ ಗರ್ಭಗುಡಿಯಲ್ಲಿ ಮಹಿಷಾಸುರ ಮರ್ಧಿನಿಯ ಒಂದು ಬಿಡಿ ಶಿಲ್ಪವನ್ನು ಕಾಣಬಹುದಾಗಿದೆ. ವಿಶೇಷವಾಗಿ ಈ ಶಿಲ್ಪದಲ್ಲಿ ಎಡಗೈಯಲ್ಲಿ ಬಿಲ್ಲು, ಬಲಗೈಯಲ್ಲಿ ಬಾಣ ಹಿಡಿದಿರುವುದು ವಿಶೇಷ.

**ವಿಜಯ ದುರ್ಗೆ**

ಯಲಬುರ್ಗ ಪಟ್ಟಣದಲ್ಲಿ ವಿಜಯದುರ್ಗೆ ದೇವಾಲಯವು ಪ್ರಮುಖವಾಗಿದ್ದು ಈ ದೇವಾಅಲಯದಲ್ಲಿ ದೇವಿಯ ವಿಗ್ರಹವನ್ನು ಪಾಣಿ ಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ. ಈ ದೇವಿಯು ತನ್ನ ವಾಹನವಾದ ಸಿಂಹದ ಮೇಲೆ ಕುಳಿತಿದ್ದಾಳೆ. ತನ್ನ ಕೈಗಳಲ್ಲಿ ಕತ್ತಿ, ಡಮರು, ಪಾಶು, ಹಿಡಿದುಕೊಂಡಿದ್ದಾಳೆ ಈ ಮೂರ್ತಿಯನ್ನು ಕಪ್ಪುಶಿಲೆಯಿಂದ ಕೆತ್ತಲಾಗಿದೆ.

**ಊರಮ್ಮ (ದುರ್ಗಮ್ಮ)**

ಪಟ್ಟಣದಲ್ಲಿ ಗ್ರಾಮದೇವತೆ ದೇವಾಲಯವಿದ್ದು ಈ ದೇವಾಲಯದಲ್ಲಿ ಮರದ ಕೆತ್ತನೆಯಿಂದ ಮಾಡಿದ ದ್ಯಾಮವ್ವನ ಮರದ ಕೆತ್ತನೆ ಶಿಲ್ಪವನ್ನು ಕಾಣಬಹುದು. ದ್ಯಾಮವ್ವಳು ಸಿಂಹದ ಮೇಲೆ ಕುಳಿತಿದ್ದು ಎಂಟು ಕೈಗಳನ್ನು ಹೊಂದಿದ್ದಾಳೆ ಅಭಯ ಹಸ್ತ, ಹಾಗೂ ಇತರೆ ಕೈಗಳಲ್ಲಿ ಆಯುಧಗಳನ್ನು ಹಿಡಿದುಕೊಂಡಿದ್ದಾಳೆ.

**ಕೆಂಚಮ್ಮ**

ಯಲಬುರ್ಗ ಪಟ್ಟಣದ ಹೊರ ಭಾಗದಲ್ಲಿರುವ ಕಪ್ಪು ಕೆರೆಯ ತೂಬಿನ ಪಕ್ಕದಲ್ಲಿ ಕೆಂಚಮ್ಮನ ಗುಡಿಯನ್ನು ಕಾಣಬಹುದು. ಈ ಕೆಂಚಮ್ಮ ತಾಯಿತು ಶೇಷಶಯನದ ಮೇಲೆ ಆಸಿನಳಾಗಿದ್ದು ಹಾವಿನ ಹೆಡೆ ತೆಲೆಯ ಮೇಲೆ ಹೆಡೆ ಬಿಚ್ಚಿನಿಂತಿದೆ. ಎಡ ಮತ್ತು ಬಲಭಾಗದಲ್ಲಿ ಸೇವಕರನ್ನು ಕಾಣಬಹುದು. ಇದರ ಪಕ್ಕದಲ್ಲಿ ಜ್ಞಾನ ಶಕ್ತನಾಗಿರುವ ಒಂದು ಯತಿಯ ಶಿಲ್ಪ ಕಾಣಬಹುದಾಗಿದೆ. ಈ ವಿಗ್ರಹವು ಬನ್ನಿ ಮರದ ಕಟ್ಟೆಯ ಮೇಲೆ ಇಡಲಾಗಿದೆ.

**ಇತರೆ ಶಿಲ್ಪಗಳು**

ಯಲಬುರ್ಗ ಪಟ್ಟಣದಲ್ಲಿ ಶೈವ, ವೈಷ್ಣವ, ಶಾಕ್ತ, ಇವುಗಳ ಜೊತೆಗೆ ಜೈನ, ನಾಗ, ಮಿಥುನ, ಹಂಸ, ಆಮೆ, ಮೀನು ಶಿಲ್ಪಗಳನ್ನು ಕಾಣಬಹುದಾಗಿದೆ.

**ಜೈನ ತೀರ್ಥಂಕರನ ಶಿಲ್ಪ**

ಪಟ್ಟಣದ ಹೊರಭಾಗದಲ್ಲಿ ಒಂದು ಮರದ ಕೆಳಗಡೆ ಅನಾಥವಾಗಿ ಬಿದ್ದಿರುವ ಜೈನ ತೀರ್ಥಂಕರನಾದ ಮಹಾವೀರನ ಶಿಲ್ಪಕಾಣಬಹುದು ಈ ಶಿಲ್ಪವು ನೋಡಲು ಆಕರ್ಷಿಯಿವಾಗಿದ್ದು, ಜ್ಞಾನಾಶಕ್ತಿಯಲ್ಲಿ ನಿರತನಾಗಿದ್ದಾನೆ. ಈ ಶಿಲ್ಪವು ಸುಮಾರು ೨.೫ ಅಡಿ ಎತ್ತರವಾಗಿದ್ದು ಕಣಶಿಲೆಯಿಂದ ಕೆತ್ತಲ್ಪಟ್ಟಿದೆ.

**ನಾಗ ಶಿಲ್ಪಗಳು**

ಯಲಬುರ್ಗ ಪಟ್ಟಣ ದೇವಾಲಯಗಳಲ್ಲಿ ನಾಗಶಿಲ್ಪಗಳನ್ನು ಕಾಣಬಹುದಾಗಿದೆ. ಈ ನಾಗಶಿಲ್ಪಗಳು ಫಲವಂತಿಕೆಯ ಸಂಕೇತ ಪ್ರಮುಖವಾಗಿ, ನಾಗಬಂಧ/ಸರ್ಪಬಂಧ, ಹಾಗೂ ಬಿಡಿ ನಾಗರ ಹಾವಿನ ಶಿಲ್ಪಗಳನ್ನು ಕಾಣಬಹುದಾಗಿದೆ. ಪ್ರಮುಖವಾಗಿ ದೇವಾಲಯದ ಬಿತ್ತಿಗಳಲ್ಲಿ ಅರಳಿಕಟ್ಟೆಯ ಮೇಲೆ, ಹಾಗೂ ಬಾವಿಯ ಬಿತ್ತಿಗಳಲ್ಲಿ ನಾಗಶಿಲ್ಪಗಳನ್ನು ಕಾಣಬಹುದಾಗಿದೆ.

**೩.೬. ಶಾಸನಗಳು**

ಭಾರತದ ಪ್ರಾಚೀನ ಚರಿತ್ರೆಯನ್ನು ರಚಿಸಲು ಸಾಹಿತ್ಯಾಧಾರಗಳಿಗಿಂತಲೂ ಶಾಸನಗಳು ಉಪಯುಕ್ತವಾಗಿವೆ. ಚರಿತ್ರೆಯ ಅಭಾವದಿಂದ ವಂಶಾವಳಿ ಕಾಲ ಇತ್ಯದಿಗಳನ್ನು ನಿರ್ಧರಿಸಲು ಶಾಸನಗಳನ್ನವಲಂಬಿಸಬೇಕು. “ಶಾಸನ” ಎಂಬ ಪದವು ಸಂಸ್ಕೃತದ ‘ಶಾಸ್’ ಎಂಬ ಧಾತುವಿನಿಂದ ಬಂದಿದ್ದು “ಶಾಸ” ಎಂದರೆ ಅಜ್ಞಾಪಿಸು, ನಿಯಂತ್ರಿಸು, ಶಿಕ್ಷಿಸು ಎಂಬ ಅರ್ಥ ನೀಡುತ್ತದೆ.[೩೨]

ಶಾಸನಗಳನ್ನು ರಾಜಶಾಸನ, ತಾಮ್ರಪಟ ಶಾಸನ, ದಾನಶಾಸನ, ಜಯಪತ್ರ, ಯೂಪಸ್ಥಂಭಶಾಸನ, ಪ್ರತಿಮಾಶಾಸನ, ವಿಜಯಶಾಸನ, ವೀರಗಲ್ಲು ಮಾಸ್ತಿಗಲ್ಲು, ನಿಷಿದಿಗಲ್ಲು ಮತ್ತು ತುರುಗೋಳ ವೀರಗಲ್ಲುಗಳೆಂಬುದಾಗಿ ವಿಭಾಗಿಸಿದ್ದು.[೩೩] ಪಾಕೃತ, ಸಂಸ್ಕೃತ, ಕನ್ನಡ, ಅರೇಬಿಕ್, ಪಾಳಿ ಮೊದಲಾದ ಭಾಷೆಗಳಲ್ಲಿ ರಚಿತಗೊಂಡಿವೆ, ಶಾಸನದ ರಚನೆಯಲ್ಲಿ ಲಿಪಿಯ

ಪಾತ್ರ ಬಹುಮುಖ್ಯವಾದದ್ದು, ಅಶೋಕನು ಬ್ರಾಹ್ಮಿ ಲಿಪಿ ಮತ್ತು ಖರೋಷ್ಠಿ ಲಿಪಿಯಲ್ಲಿ ಶಾಸನಗಳನ್ನು ಹಾಕಿಸಿ ಸಫಲನಾಗಿದ್ದಾನೆ. ತರುವಾಯ ಕಾಲಾವಧಿಯಲ್ಲಿ ಅರಸರು ತಮ್ಮ ಆಡಳಿತಕ್ಕೆ ಅನುಕೂಲವಾಗುವಂತೆ ಅವರದೇ ಆದ ಲಿಪಿಗಳನ್ನು ಮತ್ತು ಭಾಷೆಗಳಲ್ಲಿ ಶಾಸನಗಳನ್ನು ಹಾಕಿಸಿದ್ದಾರೆ, ಪ್ರಸ್ತುತ ಯಲಬುರ್ಗ ಪಟ್ಟಣ, ಅಧ್ಯಯನಕ್ಕೆ ಸಂಬಂಧಿಸಿದಂತೆ ೭ ಶಾಸನಗಳು ಕಂಡುಬಂದಿದ್ದು ಇವು ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩ ಕೊಪ್ಪಳ ಜಿಲ್ಲೆಯಲ್ಲಿ ಪ್ರಕಟಗೊಂಡಿದ್ದು ಇವುಗಳಲ್ಲಿ ಕೆಲವು ಶಾಸನಗಳ ಸಂಕ್ಷಿಪ್ತ ವಿವರವನ್ನು ನೀಡಲು ಇಲ್ಲಿ ಪ್ರಯತ್ನಿಸಿದ್ದೇನೆ.

**ಯಲಬುರ್ಗ ಪಟ್ಟಣದ ಪ್ರಮುಖ ಶಾಸನಗಳು**

**ಸಂಖ್ಯೆ-೧**

ಸ್ಥಳ- ಜಿನ್ನಿಂಗ್ ಫ್ಯಾಕ್ಟರಿ ಹೊರಗೆ ಕಟ್ಟೆಯ ಮೇಲಿನ ಒಡೆದ ಶಿಲಾವಿಗ್ರಹದ ಪೀಠದಲ್ಲಿ.

ಆಧಾರ- ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨

ಭಾಷೆ-ಕನ್ನಡ

ಶಾಸನ ಸಾರಾಂಶ

ಈ ಶಾಸನವು ಆರು ಸಾಲುಗಳಿಂದ ಕೂಡಿದ್ದು ತ್ರುಟಿತವಾಗಿದೆ. ಮಹಾಮಂಡಳೇಶ್ವರ ವಿಕ್ರಮಾದಿತ್ಯದೇವನ ಮಹಾ ಪ್ರಧಾನ ತಂತ್ರುದಿಷ್ಠಾಯಕ ದೇವಣಾರ್ಯನಾಯಕನಿಗೆ ಸಂಬಂಧಿಸಿದ ಸ್ತ್ರೀಯೋರ್ವಳು ಪಾಶ್ವನಾಥ ಬಸದಿಯನ್ನು ಮಾಡಿಸಿದಂತೆ ತಿಳಿಯುತ್ತದೆ.

**ಸಂಖ್ಯೆ-೨**

ಸ್ಥಳ-ಗ್ರಾಮದ ನಖರೇಶ್ವರ ಗುಡಿಯ ಮಂಟಪದ ಕಂಬದಲ್ಲಿ

ಆಧಾರ-ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨

ಸಾರಾಂಶ-ಈ ಶಾಸನವು ಸಂಪೂರ್ಣವಾಗಿ ತೃಟಿತಗೊಂಡಿದ್ದು, ಚನ್ನಕೇಶವ ದೇವರು ಮತ್ತು ಯಲಬುರ್ಗೆಯ ಉಲ್ಲೇಖವಿದೆ.

**ಸಂಖ್ಯೆ-೩**

ಸ್ಥಳ-ಗ್ರಾಮದ ಮಹಿಳಾ ಕಲ್ಯಾಣ ಕೇಂದ್ರದ ಬಳಿ ಇರುವ ಕಂಬದ ತುಂಡಿನ ಮೇಲೆ

ಆಧಾರ-ಕನ್ನಡ ವಿಶ್ವವಿದ್ಯಾಲಯ ಹಾಸನ ಸಂಪುಟ-೨

ಸಾರಾಂಶ-ವಿಳಂಬನಾಮ ಸಂವತ್ಸರದ ಕಾರ್ತಿಕ ಬ-೧೦ರಲ್ಲಿ ದೀಪಮಾಲೆ ಕೆಂಬವನ್ನು ಕೊಪ್ಪಳದ ಭುಜಂಗರಾಯರು ಮಾಡಿಸಿದ ಉಲ್ಲೇಖವಿದೆ.

**ಸಂಖ್ಯೆ-೪**

ಸ್ಥಳ-ಸಾಲಾರ್ ಜಿಂಗ್ ಮ್ಯೂಸಿಯಂನಲ್ಲಿರುವ ಚಾವೀಸ್ ತೀರ್ಥಂಕರ ಪ್ರತಿಮೆಯ ಅಡಿಯಲ್ಲಿ ಆಧಾರ-ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ-೭

ಸಾರಾಂಶ–ಮೂಲ ಸಂಘ ದೇಸಿಯ ಗಣದ ಮಾದಣದಂಡ ನಾಯಕ ಕಟ್ಟಿಸಿದ ಬಸದಿಗೆ ರಾಯರಾಜಗುರು ಮಂಡಳಾಚಾರ್ಯ ಶ್ರೀಮತ್ ಮಾಘನಂದಿಸಿದ್ಧಾಂತ ಚಕ್ರವರ್ತಿಯ ಪ್ರಿಯಶಿಷ್ಯ ಕೊಪಣತೀರ್ಥದ ಎಮ್ಮೆಯರ ಪ್ರಿಥಿಗೌಡ ಮತ್ತು ಅವನ ಹೆಂಡತಿ ಮತಾಪೆಯ ಮಗ ಬೋಪಣ್ಣನು ತಮ್ಮ ನೋಂಪಿ ನಿಮಿತ್ತ ಚಾವೀಸ್ ತೀರ್ಥಂಕರ ಬಿಂಬ ಮಾಡಿಸಿದ ಉಲ್ಲೇಖವಿದೆ.

**ಸಂಖ್ಯೆ–೫**

ಸ್ಥಳ–ಅದೇ ಮ್ಯೂಸಿಯಂನ ಇನ್ನೊಂದು ಜೈನ ತೀರ್ಥಂಕರ ಬಿಂಬದ ಕೆಳಗೆ

ಆಧಾರ– ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೨

ಸಾರಾಂಶ–ಮೂಲಸಂಘ ದೇಸಿಯಗಣ ಪುಸ್ತಕಗಚ್ಛದ ಯಿಂಗಳೇಶ್ವರ ಬಳಿಯ ಮಾಧವ ಚಂದ್ರಭಟ್ಟಾರಕನ ಶಿಷ್ಯ ರಾಜಧಾನಿ ಎರಂಬರಗೆಯ ಕುಳಾಗ್ರಿ ಸೇನಬೋವ ಆಚಣ್ಣನ ಮಗ ದೇವಣನು ಸಿದ್ಧಚಕ್ರದ ನೋಂಪಿ ಶ್ರುತಪಂಚಮಿ ನೋಂಪಿಗಾಗಿ ಪಮಚಪರಮೇಷ್ಠಿಗಳ ಪ್ರತಿಮೆ ಮಾಡಿಸಿದೆ.

**ಸಂಖ್ಯೆ–೬**

ಸ್ಥಳ–ಈಗ ಲಂಡನ್‌ನ ವಿಕ್ಟೋರಿಯಾ ಮತ್ತು ಅಲ್ಬರ್ಟ್ ವಸ್ತುಸಂಗ್ರಹಾಲಯದಲ್ಲಿರುವ ಜಿನಬಿಂಬದ ಪೀಠದಲ್ಲಿ

ಆಧಾರ–ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೨

ಸಾರಾಂಶ–ಕಾಲದ ಉಲ್ಲೇಖ ಈ ಶಾಸನದಲ್ಲಿ ಮುಮ್ಮಡಿಸಿಂಗನ ಉಲ್ಲೇಖ ಬಂದಿರುವುದರಿಂದ ೧೩ನೇ ಶತಮಾನದ ಉತ್ತರಾರ್ಧಕ್ಕೆ ಸೇರಿಸಬಹುದಾಗಿದೆ. ಹೊಯಿಸಳ ದೇಶ ಮತ್ತು ಕುಂತಳ ದೇಶಗಳಲ್ಲಿ ಹೆಸರಾಗಿದ್ದ ದೇಶಿಯ ಗಣದ ರಾಯಾಚಾರ್ಯನು ಮುಮ್ಮಡಿ ಸಿಂಗನ ಬಾಧೆಯಿಂದ ಯರಂಬರಗೆಯಲ್ಲಿ ಹಾಳಾದ ಜೈನಧರ್ಮವನ್ನು ಉದ್ಧರಿಸಿದನು ಮೂಲ ಸಂಘದ ದೇಸಿಯಗಣದ ಪುಸ್ತಕ ಗಚ್ಛದ ಕುಂದಕುಂದಾನ್ವಯದ ರೋಣ ಸಂಬಂಧದ ಎರಂಬರಿಗೆಯ ನಗರ ಜಿನಾಲಯಕ್ಕೆ ಮಿಂಡಗುದುಲಿಯ ಕೇತಿ ಸೆಟ್ಟಿಯ ಮಗ ಮಲ್ಲಿಸೆಟ್ಟಿಯು ಪಾರ್ಶ್ವನಾಥದೇವರ ವಿಗ್ರಹವನ್ನು ಮಾಡಿಸಿದ. ವಿಗ್ರಹವನ್ನು ಮಾಡಿಸಿದವನು ರೂವಾರಿ ಚಕ್ರವರ್ತಿ ಪಾಲೋಜ.

**ಸಂಖ್ಯೆ–೭**

ಸ್ಥಳ–ಗ್ರಾಮದ ಕೆಂಪು ಕೆರೆಯ ತೂಬಿನ ಮೇಲೆ

ಆಧಾರ–ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೨

ಸಾರಾಂಶ–ತ್ರುಟಿತ ವಿವರಗಳು ಸ್ಪಷ್ಟವಿಲ್ಲ ೧೨ನೇ ಶತಮಾನದ ಲಿಪಿ.

## ಅಡಿಟಿಪ್ಪಣಿಗಳು

೧. ಗೋಪಾಲ ಬಾ.ರಾ, ಕರ್ನಾಟಕದ ಕಲೆಗಳು-ವಾಸ್ತು, ಸಂಪುಟ-೪, ೨೦೦೩, ಪುಟ-೧,೨
೨. ಮಹಂತೇಶ್ ಎನ್.ಎಸ್, ಹೊಸದುರ್ಗ ತಾಲೂಕ ಪರಿಸರದ ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ ಪಿಎಚ್.ಡಿ, ಮಹಾಪ್ರಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨, ಪುಟ-೧೩೪,
೩. ಅದೇ, ಪುಟ-೧೪೨
೪. ಶಿರೂರ ಬಿ.ವ್ಹಿ (ಸಂ), ಸಿದ್ಧಶ್ರೀ, ಶ್ರೀ ಸಿದ್ಧರಾಮೇಶ್ವರ ಪ್ರಕಾಶನ, ೨೦೦೦, ಪುಟ-೪೯
೫. ಸೋಮಶೇಖರ್ ಎಸ್.ವೈ (ಸಂ), ಕರ್ನಾಟಕ ದೇವಾಲಯಕೋಶ, ಕೊಪ್ಪಳ ಜಿಲ್ಲೆ, ಪುಟ-೧೬೭
೬. ಶಿರೂರ ಬಿ.ವ್ಹಿ, ಸಿದ್ಧರಾಮ ಸಂಪದ, ಯಲಬುಗಿ, ಪುಟ-೭
೭. ಮಹಂತೇಶ ಎನ್.ಎಸ್, ಹೊಸದುರ್ಗ ತಾಲೂಕ ಪರಿಸರದ ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨, ಪುಟ-೧೬೨
೮. ಕೃಷ್ಣರಾವ್ ಎಂ.ವಿ ಮತ್ತು ಕೇಶವ ಭಟ್ಟ ಎಂ, ಕರ್ನಾಟಕದ ಇತಿಹಾಸ ದರ್ಶನ, ೧೯೭೦, ಪುಟ-೭೨೦
೯. ಕರ್ನಾಟಕ ದೇವಾಲಯ ಕೋಶ, ಕೊಪ್ಪಳ ಜಿಲ್ಲೆ, ಪುಟ-೧೬೭
೧೦. ದತ್ತಾತ್ರೇಯ ಚಿ.ಕುಲಕರ್ಣಿ, ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು, (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪ, ೨೦೦೬, ಪುಟ-೩೬೩
೧೧. ಮಹಂತೇಶ ಎನ್.ಎಸ್, ಪೂರ್ವೋಕ್ತ, ಪುಟ-೧೭೫
೧೨. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ, ಯಲಬುರ್ಗ-೧, ಪುಟ-೧೬೦
೧೩. ಅದೇ, ಯಲಬುರ್ಗ-೪, ಪುಟ-೧೬೧
೧೪. ಅದೇ, ಯಲಬುರ್ಗ-೫, ಪುಟ-೧೬೨
೧೫. ಅದೇ, ಯಲಬುರ್ಗ-೬, ಪುಟ-೧೬೨
೧೬. ಕನ್ನಡ ವಿಷಯ ವಿಶ್ವಕೋಶ, ೨೦೦೯, ಪುಟ-೧೩೮
೧೭. ತಿಪ್ಪೇರುದ್ರಸ್ವಾಮಿ ಎಚ್, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ೨೦೦೭, ಪುಟ-೫೨೩
೧೮. ದತ್ತಾತ್ರೇಯ ಜಿ.ಕುಲಕರ್ಣಿ, ಪೂರ್ವೋಕ್ತ, ಪುಟ-೨೩೦
೧೯. ಕರಗುಂದ ಟಿ.ಪಂಕಜಾಕ್ಷಿ, ಶಿಲ್ಪಸೌಂದರ್ಯ, ೧೯೯೮, ಪುಟ-೫
೨೦. ದತ್ತಾತ್ರೇಯ ಜಿ.ಕುಲಕರ್ಣಿ, ಪೂರ್ವೋಕ್ತ, ಪುಟ-೨೩೮
೨೧. ಅದೇ, ಪುಟ-೨೩೮
೨೨. ಅದೇ, ಪುಟ-೨೩೮
೨೩. ಅದೇ, ಪುಟ-೨೩೬
೨೪. ಅದೇ, ಪುಟ-೨೩೬
೨೫. ಮಹಂತೇಶ ಎನ್.ಎಸ್, ಪೂರ್ವೋಕ್ತ, ಪುಟ-೨೨೦
೨೬. ದತ್ತಾತ್ರೇಯ ಜಿ.ಕುಲಕರ್ಣಿ, ಪೂರ್ವೋಕ್ತ, ಪುಟ-೨೫೮
೨೭. ಅದೇ, ಪುಟ-೨೬೮
೨೮. ಮಹಂತೇಶ ಎನ್.ಎಸ್, ಪೂರ್ವೋಕ್ತ, ಪುಟ-೨೨೫
೨೯. ಅದೇ, ಪುಟ-೨೨೮
೩೦. ಅದೇ, ಪುಟ-೨೨೮
೩೧. ಅದೇ, ಪುಟ-೨೨೯
೩೨. ಮಂಜುನಾಥ ಎಂ.ಜಿ ಮತ್ತು ದೇವರಾಜ ಜಿ.ಕೆ, ಕನ್ನಡ ಲಿಪಿ ವಿಕಾಸ, ೨೦೦೪, ಪುಟ-೩೬
೩೩. ಗೋಪಾಲ್ ಆರ್ (ಸಂ), ಧಾರವಾಡ ಜಿಲ್ಲೆಯ ಇತಿಹಸ ಮತ್ತು ಪುರಾತತ್ವ, ೨೦೦೮, ಪುಟ-೫೦

## ಅಧ್ಯಾಯ - ನಾಲ್ಕು

# ಕೆರೆ ಮತ್ತು ಬಾವಿಗಳು

### ೪.೧. ಕೆರೆಗಳು

ನಮ್ಮ ಸಂಸ್ಕೃತಿಯಲ್ಲಿ ಸಾಗರ, ಸರೋವರ, ನದಿ, ಕೆರೆ ಮತ್ತು ಬಾವಿಗಳ ನೀರು ಅತ್ಯಂತ ಪವಿತ್ರವಾಗಿದ್ದು ಪಂಚಭೂತಗಳಲ್ಲಿ ಒಂದು. ಇದು ವಿಶ್ವದಲ್ಲಿರುವ ಕೋಟ್ಯಾಂತರ ಜೀವರಾಶಿಗಳಾದ ಸಸ್ಯ ಮತ್ತು ಪ್ರಾಣಿವರ್ಗಗಳಿಗೆ ಅತ್ಯಂತ ಅವಶ್ಯಕವಾಗಿದೆ.

ಮಾನವನ ನಾಗರೀಕತೆ ಬೆಳೆದದ್ದು ನೀರಿರುವ ಹತ್ತಿರದ ನದಿ ಪಾತ್ರದಲ್ಲಿ, ಮಳೆಯಾದಾಗ ನೀರು ಹರಿಯುವುದು ಸಹಜ ಸೃಷ್ಠಿ ಎನಿಸಿದರೆ, ಕೆರೆಗಳು ಮಾನವ ನಿರ್ಮಿತ ಎನ್ನಬಹುದು. ಮಳೆಯಾದಾಗ ತಗ್ಗುಗಳಿರುವ ಸಾಕಷ್ಟು ಪ್ರಮಾಣದಲ್ಲಿ ನೀರು ಸಂಗ್ರಹಗೊಳ್ಳುವ ಪ್ರದೇಶವನ್ನೇ ಮಾನವ ಕೆರೆಗಳನ್ನಾಗಿ ನಿರ್ಮಿಸಿಕೊಂಡಿದ್ದುದು ಅವನ ಚಿಂತನಾಶೀಲತೆಗೆ ಸಾಕ್ಷಿಯಾಗಿದೆ. ಬದುಕನ್ನು ಕಟ್ಟಿಕೊಳ್ಳಲು ಆರಂಭಿಸಿದಾಗಿನಿಂದಲೂ ಕೆರೆಗಳ ನಿರ್ಮಾಣಕ್ಕೂ ಮಾನವ ಯೋಚಿಸಿದ ಯೋಜನೆ ಬಹುದೊಡ್ಡದಾಗಿದೆ. ಕೊರತೆಯ ನೀಗುವಿಕೆಯನ್ನು ಈ ರೀತಿಯಲ್ಲಿ ಪ್ರಯತ್ನಿಸಿರುವುದು ಪ್ರಯೋಜನದ ಚಾರಿತ್ರಿಕ ಸಂಗತಿಯಾಗಿದೆ. ವಿಶ್ವ ಸೃಷ್ಠಿಯನ್ನು ಅರಿತು ಕೆರೆಸೃಷ್ಠಿಗೆ ಕಾರಣವಾದ ಈ ಬಗೆಯ ಜಲ ಸೃಷ್ಠಿ ಫಲವಂತಿಕೆಯ ಪ್ರತಿರೂಪ, ಇಂದು ಭಾರತ ದೇಶದ ಭೂಗೋಳ ಕುರಿತು ಆಲೋಚಿಸಿದಾಗ ಪ್ರತಿಗ್ರಾಮ, ಪಟ್ಟಣ ಕೆರೆಗಳನ್ನು ಹೊಂದಿವೆ. ಕೆರೆಗಳಿಲ್ಲದೆ ಊರಿಲ್ಲ ಎಂಬುವಷ್ಟರ ಮಟ್ಟಿಗೆ ಕೆರೆಗಳು ಸೃಷ್ಠಿಯಾಗಿವೆ. ಜನಪದರ ಜೀವನಾಡಿಯಾಗಿರುವ ಕೆರೆಗಳ ನಿರ್ಮಿತಿಗೆ ಕಾಲಕಾಲಕ್ಕೆ ಜನತೆ ತಮ್ಮನ್ನು ಅರ್ಪಿಸಿಕೊಳ್ಳುತ್ತಾ ಬಂದಿರುವ ಇಂದು ನಮ್ಮವರ ಉದಾತ್ತ ಸಂಸ್ಕೃತಿಯ ಬೀಜಮಂತ್ರವೂ ಹೌದು.

ಮಾನವನ ಸಂಸ್ಕೃತಿಯ ವಿಕಾಸದಲ್ಲಿ ನೀರು ಅಮೋಘವಾದ ಪ್ರಭಾವವನ್ನು ಬೀರಿದೆ ಸಕಲ ಜಲಚರ ಜೀವಿಗಳಿಗೆ ನೀರು ಅನಿವಾರ್ಯವಾದ ಮೂಲಧಾತು. ಎಲ್ಲಾ ಜೀವಿಗಳಿಗೂ ಜೀವಪೋಷಕವಾಗಿದ್ದು, ಮಾನವನ ಉಗಮ ಮತ್ತು ವಿಕಾಸದಲ್ಲಿ ನೀರಿನ ಪಾತ್ರ ಪ್ರಮುಖವಾದುದಾಗಿದೆ. ಹೀಗೆ ಪ್ರಕೃತಿಯಲ್ಲಿ ನೀರು ಪ್ರಮುಖ ಪಾತ್ರವಹಿಸಿ ಸಸ್ಯ ಮತ್ತು ಜೀವಿಗಳಿಗೆ ವಿಕಾಸ ಹೊಂದಲು ಸಾಕಷ್ಟು ಅನುಕೂಲ ಮಾಡಿಕೊಟ್ಟಿದೆ ಎನ್ನಬಹುದು.

"ಕೆರೆಯಂ ಕಟ್ಟಿಸು, ಬಾವಿಯಂ ಸವೆಸು ದೇವಗಾರರಮಂ, ಮಾಡಿಸಚ್ಚಿರೆಯೊಳಿಲ್ಕಿದ ನಾಥರಂ ಬಿಡಿಸು ಮಿತ್ರಗ್ಗಿಂಬುಕೆಯನಂದಿರ್ಗ್ಗೆ ರೆವೆಟ್ಟಾಗಿರು ಶಿಷ್ಯರಂ ಪೊರೆಯನ್ನು ತಿಂತಲ್ಲವೆಂಪಿದೆ

ತಾಯೆರದಾಳ್ವಲೆರವೆಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ[೧]

ಈ ಮೇಲಿನ ಶಾಸನದಲ್ಲಿ ವಿಜಯನಗರ ಅರಸ ಪ್ರೌಢಪ್ರತಾಪದೇವರಾಯನ ಮಂತ್ರಿಯಾದ ಲಕ್ಷ್ಮೀಧರನು ಮಗುವಾಗಿದ್ದಾಗ ಅವನ ಮಲತಾಯಿ ಹಾಡಿಹಾಲುಣಿಸುತ್ತ ಬುದ್ಧಿವಾದದ ಮಾತುಗಳನ್ನು ಮಗನ ಕಿವಿಗೆ ಹೇಳುತ್ತಾ, ಕೆರೆ, ಬಾವಿಗಳ ನಿರ್ಮಾಣದ ಮಹತ್ವ ತಿಳಿಸಿಕೊಡಲಾಗಿದೆ.

ಭಾರತದಲ್ಲಿ ಕೆರೆಗಳು ಸುಮರು ಎರಡು ಸಾವಿರ ವರ್ಷಗಳಿಂದಲೂ ಕಂಡುಬಂದಿವೆ ಯಾದರೂ, ಕರ್ನಾಟಕದಲ್ಲಿ ಕೆರೆಗಳ ನಿರ್ಮಾಣಕಾರ್ಯವು ಅಷ್ಟೇನು ಭರದಿಂದ ಸಾಗಿರಲಿಲ್ಲ. ಕಲ್ಯಾಣ ಚಾಲುಕ್ಯರ ಕಾಲದಿಂದ ಕೆರೆಗಳ ಸುವರ್ಣಯುಗವೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿರುತ್ತಾರೆ.[೨]

ವಿಜಯನಗರದ ಕಾಲದಲ್ಲಿ ಅಧಿಕವಾಗಿ ಕೆರೆ, ಕುಂಟೆ ಮತ್ತು ಕಾಲುವೆಗಳನ್ನು ನಿರ್ಮಿಸಲಾಯಿತು. ಇದರೊಂದಿಗೆ ಬೆಳೆಯುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ ಆಹಾರವನ್ನು ಪೂರೈಸುವ ಸಲುವಾಗಿ ಹೆಚ್ಚುವರಿ ಭೂಮಿಯನ್ನು ಕೃಷಿಗೆ ಒಳಪಡಿಸಲಾಯಿತು. ಇವುಗಳಿಗೆ ನೀರನ್ನು ಪೂರೈಸಲು ಕೃತಕ ಜಲಸಂಗ್ರಹಗಳಾದ ಕೆರೆಗಳು ಹೆಚ್ಚು ಬಳಕೆಗೆ ಬಂದವು.

ಈ ಕೆರೆಗಳ ವಿಷಯವಾಗಿ ನಮಗೆ ಪ್ರಥಮವಾಗಿ ಸಿಗುವ ದಾಖಲೆ ಕರ್ನಲ್ ಮೆಕೆಂಜೀ (೧೭೯೯-೧೮೦೬) ಮಾಡಿದ ಮೈಸೂರು ಸಂಸ್ಥಾನದ ಸರ್ವೆಯ ವಿವರಗಳಲ್ಲಿ ಪ್ರತಿಯೊಂದು ಹೋಬಳಿಯಲ್ಲಿ ಅಂದು ಇದ್ದಂತಹ ಕೆರೆ, ಕಟ್ಟೆ, ಮತ್ತು ಬಾವಿಗಳ ಸಂಖ್ಯೆ ನಮಗೆ ಸಿಗುತ್ತದೆ. ಆದರೆ ಅವುಗಳಿಂದ ನೀರಾವರಿಯಾಗುತ್ತಿದ್ದ ಜಮೀನಿನ ವಿವರವಾಗಲಿ, ಕೆರೆಗಳ ವಿವರಗಳಾಗಲಿ ನಿಖರವಾಗಿ ತಿಳಿಯುವುದಿಲ್ಲ.[೩]

ಪ್ರಾನ್ಸಿಸ್ ಬೂಕಾನನ್ ಅವರು ಕೆರೆ ಮತ್ತು ಕಟ್ಟೆಗಳನ್ನು ಹೀಗೆ ಗುರ್ತಿಸಿದ್ದಾರೆ. ಜಾನುವಾರುಗಳಿಗೆ ಕುಡಿಯುವ ನೀರಿಗಾಗಿ ನಿರ್ಮಿಸಲ್ಪಟ್ಟ ಚಿಕ್ಕ ಸರೋವರವನ್ನೇ ಕಟ್ಟೆ ಎಂದು ಕೃಷಿ ಭೂಮಿಗೆ ನೀರುಣಿಸುವ ದೊಡ್ಡ ಸರೋವರವನ್ನು ಕೆರೆಯೆಂದು ಕರೆದಿದ್ದಾರೆ.[೪] ಒಂದು ಕೆರೆಯನ್ನು ನಿರ್ಮಿಸಬೇಕಾದರೆ ಏನೆಲ್ಲಾ ಕ್ರಮ ಮತ್ತು ಮುನ್ನೆಚ್ಚರಿಕೆಗಳನ್ನು ತೆಗೆದುಕೊಳ್ಳಬೇಕೆಂಬ ವಿವರಗಳು ಈ ಕೆಳಕಂಡಂತಿವೆ.

ಕೆರೆಕಟ್ಟಿಸುವ ರಾಜನು ಸಂತೃಪ್ತನಾಗಿಯೂ ಸಂತೋಷದಿಂದ ಕೂಡಿದವನಾಗಿಯೂ ಮತ್ತು ಆಚಂದ್ರಾರ್ಕವಾಗಿ ಹೆಸರುಗಳಿಸಿಕೊಳ್ಳುವನು ಕೆರೆಯ ನಿರ್ಮಾಣಕ್ಕೆ ತೊಡಗಿಕೊಳ್ಳಬೇಕು.

ಜಲಶಾಸ್ತ್ರದಲ್ಲಿ (ಪಯಸ್ ಶಾಸ್ತ್ರ) ನೈಪುಣ್ಯತೆಯನ್ನು ಹೊಂದಿದ ಬ್ರಾಹ್ಮಣನು ಈ ಕಾರ್ಯದಲ್ಲಿ ತೊಡಗಬೇಕು.

ಉತ್ತಮ ಜೇಡಿಮಣ್ಣು ಕೂಡಿರುವಂತಹ ಪ್ರದೇಶವನ್ನು ಕೆರೆಕಟ್ಟುವುದಕ್ಕೆ ಆಯ್ದುಕೊಳ್ಳಬೇಕು.

ನದಿ ನೀರಿನ ಆಶ್ರಯವು ಸುಮಾರು ಮೂರು ಮೈಲಿಗಳಷ್ಟು ದೂರದಲ್ಲಿರಬೇಕು.

ಬೆಟ್ಟಗಳ ಸಾಲುಗಳು ಇದ್ದಲ್ಲಿ ಕೆರೆಯನ್ನು ನಿರ್ಮಿಸಲು ಆಯ್ದುಕೊಳ್ಳಬೇಕು.

ಬೆಟ್ಟಗಳ ನಡುವಿನ (ಕಣಿವೆ) ಪ್ರದೇಶದಲ್ಲಿ ಅತೀ ದೊಡ್ಡದಲ್ಲದ ಮತ್ತು ಸದೃಡವಾದ ಗೋಡೆ (ಏರಿ)ಯನ್ನು ಕಟ್ಟಬೇಕು.

ಕೆರೆಯ ಪ್ರದೇಶದ ಸಮೀಪದಲ್ಲಿ ಫಲ ಕೊಡುವ ಭೂಮಿ ಇರಬೇಕು.

ಕೆರೆಯ ನೀರಿನ ಹರವು ವಿಸ್ತೀರ್ಣವಾಗಿರಬೇಕು. ಹಾಗೆಯೇ ಆಳವಾಗಿಯೂ ಇರಬೇಕು.

ಸಮೀಪದಲ್ಲಿಯೇ ಕಲ್ಲುಗಣಿಗಳು ಇದ್ದು ಅಲ್ಲಿ ಉದ್ದವಾದ ಮತ್ತು ಸಮನಾದ ಕಲ್ಲುಗಳು ದೊರೆಯಬೇಕು.

ಕೆರೆಯ ಸಮೀಪದಲ್ಲಿರುವ ಜಮೀನು ಫಲವತ್ತಾಗಿರಬೇಕು ಹಾಗೂ ಅಲ್ಲಿ ಹಣ್ಣು, ಹಂಪಲುಗಳ ವನಗಳು ಇರಬೇಕು ಮತ್ತು ಜಮೀನು ಸಮನಾಗಿ ಏರಿಳಿತವಿಲ್ಲದೆ ಇರಬೇಕು.

ಕೆರೆಯ ತೂಬುಗಳಲ್ಲಿನ ಕಲ್ಲು ಅಥವಾ ನಿಯಂತ್ರಕಗಳು ಭದ್ರವಾಗಿರಬೇಕು ಮತ್ತು ಇದನ್ನು ನೀರಿನ ಒತ್ತಡದಿಂದ ಕಾಪಾಡುವಷ್ಟು ಸದೃಢವಾಗಿರಬೇಕು.

ಕೆರೆಗಳನ್ನು ಕಟ್ಟುವ ತಂತ್ರಜ್ಞಾನವನ್ನು ಹೊಂದಿರುವಂತಹ ಹನ್ನೆರಡು ಮಂದಿ ಇರಬೇಕು ಮತ್ತು ಅವರೆಲ್ಲರೂ ಮೇಲೆ ಉಲ್ಲೇಖಿಸಿದ ಹನ್ನೊಂದು ಅಂಶಗಳನ್ನು ಅರಿತಿರಬೇಕು.[೫]

ಒಂದು ಕೆರೆಯನ್ನು ನಿರ್ಮಿಸಬೇಕಾದಾಗ ತೆಗೆದುಕೊಳ್ಳಬೇಕಾದ ಅತೀ ಮುಖ್ಯವಾದ ಕೆಲವು ಮುನ್ನೆಚ್ಚರಿಕೆ ಕ್ರಮಗಳನ್ನು ಇದೇ ಶಾಸನದಲ್ಲಿ ತಿಳಿಸುತ್ತದೆ. ಅವುಗಳು ಈ ರೀತಿಯಾಗಿವೆ.

೧. ಕೆರೆಯಿಂದ ನೀರು ಸ್ರವಿಸಬಾರದು.

೨. ಕೆರೆಯ ಪಾತ್ರದಲ್ಲಿನ ಮಣ್ಣು ಉಪ್ಪಿನಂಶದಿಂದ ಕೂಡಿರಬಾರದು.

೩. ಎರಡು ರಾಜ್ಯಗಳ ನಡುವಿನ ಗಡಿ ಪ್ರದೇಶವನ್ನು ಆಯ್ಕೆ ಮಾಡಬಾರದು.

೪. ಕೆರೆಯ ಮಧ್ಯಭಾಗವನ್ನು ಗಮನಿಸಬೇಕು. ಅವು ಎತ್ತರ ಅಥವಾ ಉಬ್ಬಾಗಿರಬಾರದು.

೫. ಸ್ವಲ್ಪ ಜಮೀನಿದ್ದು ಅಧಿಕ ನೀರು ಬರುವಂತಹ ಪ್ರದೇಶವನ್ನು ಆಯ್ಕೆ ಮಾಡಬಾರದು.

ಹೀಗೆ ವಿಜಯನಗರ ಕಾಲದಲ್ಲಿ ತಂತ್ರಜ್ಞಾನವು ಎಷ್ಟರ ಮಟ್ಟಿಗೆ ಬೆಳೆದಿತ್ತು ಎಂಬುದು ನಮಗೆ ಈ ಶಾಸನದಿಂದ ತಿಳಿದುಬರುತ್ತದೆ. ಅವರು ನಿಸರ್ಗವನ್ನು ಉಪಯುಕ್ತವಾಗಿ ಬಳಸಿಕೊಂಡು ಕೆರೆ ಕಟ್ಟುವ ಕಾರ್ಯಕ್ಕೆ ಸಾಕಷ್ಟು ಮಹತ್ವವನ್ನು ನೀಡಿದ್ದರೆಂಬುದು ಮೇಲಿನ ಶಾಸನದಿಂದ ಸ್ಪಷ್ಟವಾಗುತ್ತದೆ. ಕೆರೆಗಳನ್ನು ನಿರ್ಮಿಸುವುದಕ್ಕೆ ಕಲ್ಲು, ಕಲ್ಲಿನ ತೂಬು, ಇಟ್ಟಿಗೆ, ಸುಣ್ಣ ಮತ್ತು ಗಾರೆ ಮುಂತಾದ ಸಾಮಗ್ರಿಗಳನ್ನು ಬಳಸುತ್ತಿದ್ದರು ಎಂದು ಶಾಸನ ತಿಳಿಸುತ್ತದೆ.[೬]

**ಏರಿ ನಿರ್ಮಾಣ**

ಏರಿಯು ಕೆರೆಯ ಒಂದು ಪ್ರಮುಖ ಭಾಗ ಸಾಮಾನ್ಯವಾಗಿ ಯಲಬುರ್ಗ ಪರಿಸರದ ಎಲ್ಲಾ ಕೆರೆಗಳ ಏರಿಗಳು ಮಣ್ಣಿನಿಂದ ನಿರ್ಮಿಸಿದಂತಿವೆ. ಇವು ಕೆರೆಗಳಿಗೆ ಆಧಾರ ಸ್ಥಂಬಗಳಾಗಿ ನೀರನ್ನು ಸಂಗ್ರಹಿಸುತ್ತವೆ. ಈ ಭಾಗವನ್ನು ಅತ್ಯಂತ ಗಟ್ಟಿಯಾಗಿ ಕಟ್ಟಬೇಕಾಗುತ್ತದೆ. ಮಣ್ಣನ್ನು

ಹಾಕಿ, ನೀರಿನಿಂದ ನೆನಸಿ ಗಟ್ಟಿಮಾಡಿ ಅದರ ಮೇಲೆ ಏರಿಯನ್ನು ನಿರ್ಮಿಸಲು ಮಣ್ಣನ್ನು ಹಾಕುತ್ತಾ ಹೋಗುತ್ತಾರೆ. ಈ ರೀತಿ ಪದೇ ಪದೇ ಮಾಡುವುದರಿಮದ ಮಣ್ಣು ಚೆನ್ನಾಗಿ ಕೂಡಿಕೊಂಡು ಗಟ್ಟಿಯಾಗುತ್ತದೆ. ಬಹುತೇಕವಾಗಿ ಕೆರೆಯ ತಳಭಾಗದ ಮಣ್ಣನ್ನು ಅಗೆದು ಏರಿ ಕಟ್ಟಲು ಉಪಯೋಗಿಸುತ್ತಾರೆ. ಇದರಿಂದ ಕೆರೆಯ ತಳಭಾಗ ಹೆಚ್ಚು ನೀರು ಸಂಗ್ರಹಗೊಳ್ಳುತ್ತದೆ.

ಸಾಮಾನ್ಯವಾಗಿ ಕೆರೆಯ ಏರಿಯ ತಳಭಾಗವು ವಿಶಾಲವಾಗಿದ್ದು ಅದು ಮೇಲಕ್ಕೆ ಹೋದಂತೆ ಕಿರಿದಾಗುತ್ತಾ ಹೋಗುತ್ತದೆ. ಕೆರೆಯ ಏರಿಯ ನೀರಿರುವ ಭಾಗಕ್ಕೆ ಸಾಮಾನ್ಯವಾಗಿ ಕಲ್ಲಿನ ಜೋಡಣೆಯನ್ನು ಹೊಂದಿಸಿರುತ್ತಾರೆ. ಇದಕ್ಕೆ ಕಟ್ಟವಾಡ ಅಥವಾ ಕಟುವಾಡವೆಂದು ಹೆಸರು ಕಲ್ಲಿನ ಜೋಡಣೆಯು ಇದ್ದ ಪಕ್ಷದಲ್ಲಿ ಏರಿಗೆ ಆಗುವ ದಕ್ಕೆಯನ್ನು ಮತ್ತು ಮಣ್ಣುಕೊರೆತವನ್ನು ಸಹ ಸಾಕಷ್ಟು ಮಟ್ಟಿಗೆ ತಡೆಯುತ್ತದೆ. ಕೆಲವೊಮ್ಮೆ ಏರಿಯ ಎರಡು ಕಡೆಗಳಲ್ಲಿ ಕಟುವಾಡಗಳನ್ನು ಗಮನಿಸಬಹುದು ಏರಿಯ ಆಯಾ ಕಟ್ಟಿನ ಭಾಗವು ಇಳಿಜಾರಾಗಿರುತ್ತದೆ. ಈ ಇಳಿಜಾರು ರಚನೆಯು ನೀರಿನ ಒತ್ತಡವನ್ನು ವಿರುದ್ಧ ದಿಕ್ಕಿನಿಂದ ತಡೆದು ಏರಿಗೆ ಸಾಕಷ್ಟು ಬಲವನ್ನು ಕೊಡುವಲ್ಲಿ ಸಹಯಕವಾಗಿರುತ್ತದೆ. ಇಳಿಜಾರು ಭಾಗದಲ್ಲಿ ಕೆಲವು ಸಸ್ಯಗಳನ್ನು ಬೆಳೆದು ಅದನ್ನು ಮತ್ತಷ್ಟು ಬಲಪಡಿಸುವ ಪದ್ಧತಿಯು ವಾಡಿಕೆಯಲ್ಲಿ ಇರುವುದನ್ನು ಗಮನಿಸಬಹುದು.

ಕೆರೆಗಳ ಏರಿಯು ಅಂಕು ಡೊಂಕಾಗಿಯೇ ಕಟ್ಟಿರುತ್ತಾರೆ. ಕಾರಣ ನೀರಿನಿಂದ ಏರಿಗೆ ಬೀಳುವ ಒತ್ತಡವು ಸಮನಾಗಿ ಹಂಚಿಕೆಯಾಗುತ್ತದೆ. ಮತ್ತು ಏರಿ ಒಡೆದಲ್ಲಿ ಅದನ್ನು ಸುಲಭವಾಗಿ ಸರಿಪಡಿಸಲು ಸಹಾಯಕವಾಗಿದೆ. ಹಾಗೂ ಏರಿಯ ಮೇಲೆ ಒಂದು ಬಂಡಿ ಜಾಡಿನಷ್ಟು ವಿಸ್ತೀರ್ಣದ ದಾರಿ ಬಿಟ್ಟಿದ್ದು ಒಡಾಟಕ್ಕೆ ಮತ್ತು ರಕ್ಷಣಾ ಸಂಚಾರಕ್ಕೆ ಅನುಕೂಲವಾಗಲು.

**ತೂಬುಗಳ ರಚನೆ**

ತೂಬುಗಳು ಕೆರೆಯ ಒಂದು ಅವಿಭಾಜ್ಯ ಅಂಗ. ತೂಬುಗಳೇ ಕೆರೆಯ ನೀರನ್ನು ಹೊರಗೆ ಹೋಗದಂತೆ ತಡೆ ಹಿಡಿದಿಡುವ ಸಾಧನಗಳಾಗಿವೆ. ಅವುಗಳನ್ನು ನಾವು ಇಂದಿನ ನಲ್ಲಿಗಳಿಗೆ ಹೋಲಿಸಬಹುದು. ತೂಬುಗಳನ್ನು ಸಾಮಾನ್ಯವಾಗಿ ಕಲ್ಲಿನಿಂದ ರಚಿಸಿದ್ದು, ಎರಡು ಅಥವಾ ನಾಲ್ಕು ಕಂಬಗಳಿಂದ ಕೂಡಿರುತ್ತವೆ ಎರಡು ಕಂಬಗಳ ನಡುವಿನಲ್ಲಿ ಒಂದು ಅಡ್ಡ ಕಲ್ಲನ್ನು ಇರಿಸಲಾಗುತ್ತದೆ. ನಂತರ ಉದ್ದವಾದ ಕಲ್ಲುಗಳ ಮೇಲ್ಭಾಗದಲ್ಲಿ ಅಡ್ಡಗಲ್ಲನ್ನು ಹಾಸಲಾಗುತ್ತದೆ. ಈ ಎರಡು ಅಡ್ಡಗಲ್ಲುಗಳ ನಡುವೆ ಸುಮಾರು ೨೫ಸೆಂ.ಮೀ. ವ್ಯಾಸದ ರಂದ್ರವಿರುತ್ತದೆ. ಇದರ ಮೂಲಕವಾಗಿ ರಂಧ್ರದ ಅಳತೆಗೆ ತಕ್ಕ ವ್ಯಾಸವುಳ್ಳ ಮರದ ತುಂಡನ್ನು ಇಟ್ಟು ರಂಧ್ರವನ್ನು ಮುಚ್ಚಲಾಗುತ್ತದೆ. ಈ ಮರದ ದಿಮ್ಮಿಯನ್ನು ಮೇಲಕ್ಕೆತ್ತಿದಾಗ ನೀರು ಕಾಲುವೆಯ ಮುಖಾಂತರ ಹರಿದು ಅಚ್ಚುಕಟ್ಟು ಪ್ರದೇಶಕ್ಕೆ ಹೋಗುತ್ತದೆ. ಮರದ ಒಂದು ವಿಶೇಷ ಎಂದರೆ ಅದು ನೀರಿನಲ್ಲಿ ನೆನೆದಾಗ ನೀರು ಕುಡಿದು ಹಿಗ್ಗುತ್ತದೆ. ಈ ರೀತಿಯಾಗಿ ಹಿಗ್ಗಿದ ಮರದ ತುಂಡು ರಂಧ್ರದಲ್ಲಿ ಬಿಗಿಯಾಗಿ ಕುಳಿತು ಹೊರಕಾಲುವೆ ಮುಖಾಂತರ ನೀರು

ಪರಿಯುವುದನ್ನು ಆದಷ್ಟು ಮಟ್ಟಿಗೆ ತಡೆಯುತ್ತದೆ. ಇಂದು ಸಹ ಅನೇಕ ಕಡೆಗಳಲ್ಲಿ ಮರವನ್ನು ಬಳಸುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಲೋಹವನ್ನು ಬಳಕೆ ಮಾಡಲಾಗುತ್ತಿದೆ. ತೂಬಿನ ಮೇಲ್ಭಾಗದಲ್ಲಿರುವ ಕಲ್ಲಿನ ಮೇಲೆ ಸಾಮಾನ್ಯವಾಗಿ ಗಜಲಕ್ಷ್ಮೀಯ ಉಬ್ಬುಶಿಲ್ಪವಿರುತ್ತದೆ. ಇದರಿಂದ ಆ ಕೆರೆಯನ್ನು ವಿಜಯನಗರ ಕಾಲದ ಕೆರೆಯೆಂದು ಗುರುತಿಸಬಹುದಾಗಿದೆ.[೭]

**ಕೋಡಿಯ ನಿರ್ಮಾಣ**

ಕೋಡಿಯು ಬಹಳ ಮುಖ್ಯವಾದ ಕೆರೆಯ ಭಾಗಗಳಲ್ಲೊಂದು ಕೋಡಿಯ ಪ್ರದೇಶವನ್ನು ಆಯ್ಕೆ ಮಾಡಿ ಅದನ್ನು ಅಳವಡಿಸುವುದರಲ್ಲಿಯೇ ಕೆರೆಯನ್ನು ಕಟ್ಟುವವನಿಗೆ ಇರುವ ಸಾಮರ್ಥ್ಯವನ್ನು ತೋರಿಸಿಕೊಡುತ್ತದೆ. ಸಾಮಾನ್ಯವಾಗಿ ಕೋಡಿಯು ಕೆರೆಯ ನೀರಿರುವ ಯಾವುದಾದರು ಒಂದು ದಿಕ್ಕಿಗೆ ಇರುತ್ತದೆ. ಏರಿಯ ದಿಕ್ಕಿನಲ್ಲಿ ಇರುವುದಿಲ್ಲ ಕೆರೆಯಲ್ಲಿ ನೀರು ಸಂಗ್ರಹವಾಗಿ ಗರಿಷ್ಠ ಮಟ್ಟ ತಲುಪಿದಾಗ ಹೆಚ್ಚುವರಿ ನೀರು ಈ ಕೋಡಿಯ ಮೂಲಕ ಹಾದು ಹೋಗುತ್ತದೆ. ಅತೀ ಹೆಚ್ಚು ನೀರು ಬಂದಾಗ ಕೆರೆ ಏರಿಗೆ ಒತ್ತಡ ಬೀಳುತ್ತದೆ. ಆ ಒತ್ತಡವನ್ನು ತಡೆಯಲು ಕೋಡಿಗಳನ್ನು ಅಳವಡಿಸಲಾಗುತ್ತದೆ. ಒಂದು ಕೆರೆಯ ಕೋಡಿ ಬಿತ್ತೆಂದರೆ ಆ ಕೆರೆಗೆ ಗರಿಷ್ಠ ಮಟ್ಟದ ನೀರು ಬಂದಿದೆ ಎಂದರ್ಥ ಕೆಲವೊಂದು ಕಡೆಯಲ್ಲಿ ಕೋಡಿ ಬಿದ್ದು ನೀರು ಹರಿದುಹೋಗುವ ಪ್ರದೇಶದ ಸಮೀಪದಲ್ಲಿಯೇ ಮತ್ತೊಂದು ಕೆರೆಯನ್ನು ನಿರ್ಮಿಸಿರುತ್ತಾರೆ. ಕೆರೆಯ ಗರಿಷ್ಠ ಮಟ್ಟ ಹಾಗೂ ಕೋಡಿಯ ಮಟ್ಟ ಒಂದೇ ಆಗಿರಬೇಕು. ಕೆರೆಯು ಅತೀ ದೊಡ್ಡದಾಗಿದ್ದರೆ ಎರಡು ಕೋಡಿಗಳಿರುವುದನ್ನು ನೋಡಬಹುದು.

**ಕಾಲುವೆ ವ್ಯವಸ್ಥೆ**

ಕಾಲುವೆಯು ಕೆರೆಯ ಇನ್ನೊಂದು ಭಾಗವಾಗಿದೆ. ಕೆರೆಯ ನೀರನ್ನು ನಿಯಂತ್ರಿಸಿ ಆಯಕಟ್ಟು ಪ್ರದೇಶಕ್ಕೆ ನೀರು ಹಾಯಿಸುವ ಮಾರ್ಗಕ್ಕೆ ಕಾಲುವೆ ಎಂದು ಹೆಸರು, ಕಾಲುವೆಗಳನ್ನು ನಾವು ಎರಡು ರೀತಿಯಾಗಿ ವರ್ಗೀಕರಿಸಬಹುದು. ಅದರಂತೆ ಮೊದಲನೆಯದು ಕೆರೆಗೆ ನೀರು ಬರುವ ಕಾಲುವೆ ಮತ್ತು ಎರಡನೆಯದು ಕೆರೆಯಿಂದ ಆಯಕಟ್ಟು ಪ್ರದೇಶಕ್ಕೆ ನೀರು ಹಾಯಿಸಲಿರುವ ಕಾಲುವೆಗಳು, ನೀರನ್ನು ಕಾಲುವೆಗಳ ಮೂಲಕ ಏರಿಯ ಕೆಳಭಾಗದಿಂದ ಹಾಯಿಸುತ್ತಿದ್ದರು. ಇವುಗಳಿಗೆ ತೂಬುಗಳನ್ನು ಇರಿಸಿ ಕೆರೆಯ ನೀರನ್ನು ಸಮರ್ಪಕವಾಗಿ ನಿಯಂತ್ರಿಸುತ್ತಿದ್ದರು. ಕಾಲುವೆಯು ಕೆರೆಯ ಏರಿಯ ಕೆಳಗಡೆಯಿಂದ ಹಾದು ಬರುತ್ತದೆ. ಇವುಗಳನ್ನು ಸಹ ಕಲ್ಲುಗಳಿಂದ ಕಟ್ಟಲಾಗಿರುತ್ತದೆ. ಹತ್ತಿರದ ದೇವಾಲಯಕ್ಕೆ ನೀರನ್ನು ಹಾಯಿಸುವ ನಾಲೆಗೆ ಮರವನ್ನು ಬಳಸಿದ್ದರೆಂದು ತುಮಕೂರು ಜಿಲ್ಲೆಯ ರಾಮಚಂದ್ರನಹಳ್ಳಿಯ ಶಾಸನವು ತಿಳಿಸುತ್ತದೆ.[೮] ಒಂದು ಕೆರೆಗೆ ಒಂದು ಎರಡೂ, ಮೂರು ಅಥವಾ ನಾಲ್ಕು ಕಾಲುವೆಗಳು ಸಹ ಇರುತ್ತಿದ್ದವು. ಅವುಗಳು ವಿವಿಧ ಎತ್ತರಗಳಲ್ಲಿ ಇರುತ್ತಿದ್ದವು ಕೆರೆಯು ತುಂಬಿದ್ದಾಗ ಮೇಲ್ಮಟ್ಟದಲ್ಲಿದ್ದ ಕಾಲುವೆಯಿಂದ ನೀರನ್ನು ಹಾಯಿಸಿಕೊಳ್ಳಲಾಗುತ್ತಿತ್ತು. ನೀರು ಕೆಳಮಟ್ಟಕ್ಕೆ ಬಂದಾಗ ಕೆಳಮಟ್ಟದ ಕಾಲುವೆಯಿಂದ ನೀರನ್ನು ಹಾಯಿಸಿಕೊಳ್ಳಲಾಗುತ್ತಿತ್ತು. ಈ ವಾಡಿಕೆಯು ಇಂದಿಗೂ ಪ್ರಚಲಿತವಾಗಿದೆ.

**ಜಲಾನಯನ ಪ್ರದೇಶ (Catchment Area)**

ಈ ಪ್ರದೇಶವು ಸಾಮಾನ್ಯವಾಗಿ ಕೆರೆಯ ಭಾಗಕ್ಕಿಂತ ಎತ್ತರದಲಿದ್ದು. ಸಾಮಾನ್ಯವಾಗಿ ಈ ಪ್ರದೇಶದಲ್ಲಿ ಅಧಿಕ ಮಳೆಯಾಗುತ್ತದೆ. ಮತ್ತು ಇಲ್ಲಿ ಬೀಳುವ ಮಳೆಯ ನೀರು ಹರಿದು ಬಂದು ಕೆರೆಯನ್ನು ಸೇರುತ್ತದೆ.

ಸಾಮಾನ್ಯವಾಗಿ ಗುಡ್ಡಗಳ ನಡುವಿನ ಕಣಿವೆ. ಪ್ರದೇಶಕ್ಕೆ ಜಲಾನಯನ ಪ್ರದೇಶವೆಂದು ಹೆಸರು ಇಲ್ಲಿರುವ ಕಾಡುಗಳು ಮತ್ತು ಸಸ್ಯರಾಶಿಗಳು ಮಳೆಯ ನೀರನ್ನು ತಮ್ಮ ಬೇರುಗಳಲ್ಲಿ ಹಾಗೂ ಒಣಗಿದ ಎಲೆಗಳ ನಡುವಿನ ಪದರಗಳಲ್ಲಿ ಮತ್ತು ಮಣ್ಣಿನಲ್ಲಿ ಸಂಗ್ರಹಿಸಿಟ್ಟುಕೊಳ್ಳುತ್ತವೆ. ಕಾಲಕ್ರಮದಲ್ಲಿ ಈ ಪ್ರದೇಶದಲ್ಲಿ ಸಂಗ್ರಹಗೊಂಡ ನೀರು ಸಣ್ಣ ಝರಿಗಳು ಹಳ್ಳಗಳಾಗಿ ಕೆರೆಯ ಪ್ರದೇಶಕ್ಕೆ ಬಂದು ಸೇರುತ್ತವೆ.

ಈ ರೀತಿಯಾಗಿ ಹರಿದುಬರುವಂತಹ ನೀರಿಗೆ ಅಡ್ಡಲಾಗಿ ಕಟ್ಟೆಯನ್ನು ನಿರ್ಮಿಸಿ ಕೆರೆಯನ್ನು ಕಟ್ಟುತ್ತಾರೆ. ಇದರಲ್ಲಿ ಮುಖ್ಯವಾಗಿ ಗಮನದಲ್ಲಿರಿಸಿಕೊಳ್ಳಬೇಕಾದ ಸಂಗತಿಯೆಂದರೆ ಮಳೆ ಬೀಳುವ ಪ್ರದೇಶ ಮತ್ತು ಕೆರೆಗೆ ಹರಿದು ಬಂದು ಸೇರುವ ನೀರಿನ ಪ್ರಮಾಣಗಳು ಪರಸ್ಪರ ಸಂಬಂದವನ್ನು ಹೊಂದಿರುತ್ತೆ.

**ಕೆರೆಯ ತಳ**

ಕೆರೆಯ ತಳ ಎಂದು ಗುರುತಿಸುವ ಭಾಗವು ಸಾಮಾನ್ಯ ಭೂ ಪ್ರದೇಶವಾಗಿದ್ದು, ಇಲ್ಲಿ ನೀರು ಸಂಗ್ರಹಗೊಳ್ಳುತ್ತದೆ. ಕೆರೆಯ ಈ ಭಾಗದಲ್ಲಿ ಚಿಕ್ಕ ಹಳ್ಳಗಳಿಂದ ನೀರು ಹರಿದು ಬಂದು ಶೇಖರಣೆಗೊಳ್ಳುತ್ತದೆ. ಹೆಚ್ಚು ಮಳೆಯಾಗಿ ಅಧಿಕ ನೀರು ಬಂದಂತೆ, ನೀರಿನ ಹರಿವು ವಿಸ್ತಾರಗೊಳ್ಳುವುದರೊಂದಿಗೆ ಕೆರೆಯು ತುಂಬುತ್ತಾ ಹೋಗುತ್ತದೆ. ಭೂ ಮಟ್ಟದಿಂದ ಕೆರೆ ಕಟ್ಟೆಯ ಗರಿಷ್ಠ ಮಟ್ಟ ಮುಟ್ಟಿದೆ ಎನ್ನುತ್ತಾರೆ. ಕನಿಷ್ಠ ಮಟ್ಟದ ನೀರು ನಿಲ್ಲುವ ಕೆರೆಯ ಭೂ ಭಾಗಕ್ಕೆ ಕೆರೆಯ ತಳ ಎಂದು ಹೆಸರು ಕೆರೆಯಲ್ಲಿ ಒಬ್ಬ ವ್ಯಕ್ತಿಯ (ಆಳೆತ್ತರ) ಎತ್ತರದಷ್ಟೇ ನೀರು ಇರಬೇಕು ಮತ್ತು ತುಂಬಬೇಕು ಅದಕ್ಕಿಂತ ಹೆಚ್ಚಿನ ನೀರು ಬಂದ ಪಕ್ಷದಲ್ಲಿ ಆ ನೀರು ಕೋಡಿಯ ಮೂಲಕ ಹರಿದು ಹೋಗಬೇಕು ಎಂದು ತಿಮ್ಮಲಾಪುರದ ಕೆರೆಯ ಸಮೀಪದಲ್ಲಿ ದೊರೆತಿರುವ ಶಾಸನವು ದಾಖಲಿಸಿರುವುದು ಪ್ರಶಂಸನಾರ್ಹ. ಇದರಿಂದ ಒಂದು ಕೆರೆಯಲ್ಲಿ ಗರಿಷ್ಠ ಮಟ್ಟದ ನೀರಿನ ಪ್ರಮಾಣ ಎಷ್ಟಿರಬೇಕು ಎಂಬುದರ ಬಗೆಗೆ ತಿಳಿದುಬರುತ್ತದೆ.

ಮತ್ತೊಂದು ಅಂಶವು ಆ ಗರಿಷ್ಠ ಮಟ್ಟಕ್ಕಿಂತ ಅಧಿಕ ನೀರು ಬಂದಲ್ಲಿ ಕೆರೆಯ ಏರಿಗೆ ಅಪಾಯವಾಗಬಹುದು. ಈ ಪ್ರದೇಶದಲ್ಲಿ ಮೂರು ಕೆರೆಗಳು ಇದ್ದು ಅವುಗಳು ಒಂದಕ್ಕೊಂದು ಹೊಂದಿಕೊಂಡು ಹೆಚ್ಚುವರಿ ನೀರು ಒಂದು ಕೆರೆಗೆ ಹರಿದು ಬಂದರೆ ಆ ನೀರು ಎರಡನೆಯ ಕೆರೆಯಲ್ಲಿ ಸಂಗ್ರಹವಾಗುತ್ತದೆ.

**ಆಯಾಕಟ್ಟು ಅಥವಾ ಅಚ್ಚುಕಟ್ಟು ಪ್ರದೇಶ**

ಕೆರೆಯ ಅಥವಾ ನೀರು ಸಂಗ್ರಹವಾಗುವ ವಿರುದ್ಧ ದಿಕ್ಕಿನ ಪ್ರದೇಶಕ್ಕೆ ಆಯಕಟ್ಟು ಅಥವಾ ಅಚ್ಚುಕಟ್ಟು ಪ್ರದೇಶವೆಂದು ಹೆಸರು ಸಾಮಾನ್ಯವಾಗಿ ಈ ಪ್ರದೇಶದಲ್ಲಿಯೇ ವ್ಯವಸಾಯವನ್ನು

ಮಾಡುತ್ತಾರೆ. ಕೆರೆಯ ನೀರಾವರಿಗೆ ಒಳಪಟ್ಟ ಅಂದರೆ ಕೃಷಿ ಮಾಡಲ್ಪಟ್ಟ ಪ್ರದೇಶಕ್ಕೆ ಆಯಕಟ್ಟು ಅಥವಾ ಅಚ್ಚುಕಟ್ಟು ಪ್ರದೇಶವೆಂದು ಹೆಸರು ಆಯಕಟ್ಟಿನ ಪ್ರದೇಶವನ್ನು ಸಮನಾಗಿರುವ ಕಾರ್ಯದಿಂದ ಕೆರೆಯ ನೀರು ಆಯಕಟ್ಟಿಗೆ ಸಮರ್ಪಕವಾಗಿ ಒದಗುತ್ತದೆ. ಎಂದು ಸಹ ತಿಳಿಯುತ್ತದೆ. ಇದಲ್ಲದೆ ಆಯುಕಟ್ಟಿನ ಪ್ರದೇಶವನ್ನು ಅದರ ಗುಣದಂತೆ ಉತ್ತಮ, ಮಧ್ಯಮ ಮತ್ತು ಅಧಮ ಎಂದು ವಿಂಗಡಿಸಿ ಆ ಕೆರೆಯ ನೀರನ್ನು ಸಮರ್ಪಕವಾಗಿ ಹಂಚಿಕೊಳ್ಳಬೇಕೆಂದು ಕ್ರಿ.ಶ.೧೪೭೯ರ ವಿಜಯನಗರ ಕಾಲದ ಶಾಸನದ ತೇದಿಯು ಹೇಳುತ್ತದೆ.[೯] ಹೀಗೆ ಕೆರೆಯ ನೀರಿನ ಸಂಗ್ರಹದ ಮೇಲೆ ಅಚ್ಚುಕಟ್ಟು ಪ್ರದೇಶವು ಅವಲಂಭಿಸಿರುತ್ತದೆ ಎಂಬುದು ಈ ಮೇಲಿನ ಅಂಶಗಳಿಂದ ತಿಳಿದುಬರುತ್ತದೆ.

**ಕೆರೆಗಳ ನಿರ್ವಹಣೆ**

ನೀರಾವರಿ ಕಾಮಗಾರಿಗಳ ನಿರ್ಮಾಣಕ್ಕಿಂತ ಅವುಗಳ ನಿರ್ವಹಣೆ ಅಥವಾ ಪಾಲನೆ ಮತ್ತು ದುರಸ್ಥಿ ಮಹತ್ವದ ವಿಚಾರವಾಗಿದೆ. ಯಾವುದೇ ನೀರಾವರಿ ಕಾಮಗಾರಿಗಳು ಧೀರ್ಘಕಾಲ ಸುಸ್ಥಿರವಾಗಿರುವುದಿಲ್ಲ ಕೆರೆಗಳು ಕೂಡ ಇದಕ್ಕೆ ಹೊರತಲ್ಲ. ಸೂಕ್ಷ್ಮವೂ, ಸಕಾಲಿಕವೂ, ಆದ ನಿರ್ವಹಣೆ ಹಾಗೂ ದುರಸ್ಥಿಯಿಂದ ಕಾಮಗಾರಿ ಉಪಯುಕ್ತತೆಯ ಅವಧಿಯನ್ನು ಹೆಚ್ಚಿಸಲು ಸಾಧ್ಯವಾಗುತ್ತದೆ.

ಕೆರೆಗಳ ನಿರ್ವಹಣಾ ಕಾರ್ಯವು ಸಾಮಾನ್ಯವಾಗಿ ಈ ಕೆಳಗಿನಂತಿರುತ್ತದೆ.

೧. ಕೆರೆ ಮತ್ತು ಕಾಲುವೆಗಳಲ್ಲಿರುವ ಹೊಳನ್ನು ಕಾಲಕಾಲಕ್ಕೆ ತೆಗೆಸುವುದು.

೨. ಕೆರೆಯ ಏರಿ ಅಥವಾ ದಂಡೆಯನ್ನು ಮಳೆ ಅಥವಾ ಇನ್ನಿತರ ಕಾರಣಗಳಿಂದ ಹಾನಿಗೊಂಡಿದ್ದರೆ ಸರಿಪಡಿಸುವುದು.

೩. ತೂಬು ಮತ್ತು ಕೋಡಿ ಹಾನಿಗೊಂಡರೆ ಕಾಲಕಾಲಕ್ಕೆ ದುರಸ್ತಿ ಮಾಡುವುದು.

೪. ಕೆರೆಯಂಗಳಕ್ಕೆ ಒತ್ತುವರಿಯಾಗದಂತೆ ರಕ್ಷಿಸುವುದು.

೫. ಕೆರೆಯ ಗಾತ್ರ ಅವಶ್ಯವಿದ್ದರೆ ವಿಸ್ತರಿಸವುದು ಮತ್ತು ಮೆಟ್ಟಿಲುಗಳನ್ನು ನಿರ್ಮಿಸುವುದು.

೬. ನೀರಿನ ಬಳಕೆ ಕುರಿತಾದ ವಿವಾದ ಬಗೆಹರಿಸುವುದು.

**ಯಲಬುರ್ಗ ಪಟ್ಟಣ ಪ್ರಮುಖ ಕೆರೆ ಮತ್ತು ಬಾವಿಗಳು**

ಯಲಬುರ್ಗ ಪಟ್ಟಣವನ್ನು ಹೊಂದಿಕೊಂಡಂತೆ ಕೆರೆ ಮತ್ತು ಬಾವಿಗಳನ್ನು ಕಾಣಬಹುದಾಗಿದ್ದು. ಇವು ನಿತ್ಯ ಬಳಕೆಯ ಅನುಕೂಲಕ್ಕಾಗಿ ಕೃಷಿ ಚಟುವಟಿಕೆ, ಪಶುಪಕ್ಷಿಗಳ ಬಳಕೆಗಾಗಿ ನಿರ್ಮಾಣಗೊಂಡಿರುವುದೆಂದು ತಿಳಿದುಬರುತ್ತದೆ. ಅದೇ ರೀತಿ ಯಲಬುರ್ಗ ಪಟ್ಟಣದ ವ್ಯಾಪ್ತಿಯಲ್ಲಿ ಬರುವ ಕೆರೆ ಮತ್ತು ಬಾವಿಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**ಕೆಂಪು ಕೆರೆ**

ಯಲಬುರ್ಗ ಪಟ್ಟಣದ ಉತ್ತರ ಭಾಗದಲ್ಲಿ ಕೆಂಪು ಕೆರೆ ನಿರ್ಮಾಣಗೊಂಡಿದ್ದು ಈ ಕೆರೆ ನಿರ್ಮಾಣದ ಬಗ್ಗೆ ಕೆರೆಯ ತೂಬಿನ ಕಲ್ಲಿನ ಮೇಲೆ ಶಾಸನದ ಉಲ್ಲೇಖವಿದ್ದರು ಸಹ ಶಾಸನ

ತೃಟಿತವಾಗಿದೆ. (ಶಾಸನ ಸಂಪುಟ ಕೊಪ್ಪಳ ಜಿಲ್ಲೆ ೨ರಲ್ಲಿ ಈ ಕೆರೆಯ ಬಗ್ಗೆ ಉಲ್ಲೇಖವಿದ್ದು ಅಲ್ಲಿಯು ಸಹ ಶಾಸನ ತೃಟಿತವಾಗಿದೆ ಎಂದು ಉಲ್ಲೇಖಿಸಿದ್ದಾರೆ) ಆದ್ದರಿಂದ ನಿಖರವಾದ ಮಾಹಿತಿ ಸಿಗುತ್ತಿಲ್ಲ. ಈ ತೂಬಿನ ಕಲ್ಲಿನ ಮೇಲೆ ಗಜಲಕ್ಷ್ಮಿಯ ಶಿಲ್ಪವಿರುವುದರಿಂದ ಬಹುಶಃ ವಿಜಯ ನಗರ ಕಾಲದಲ್ಲಿ ನಿರ್ಮಾಣಗೊಂಡಿದೆ ಎಂದು ಊಹಿಸಬಹುದು.

ಪ್ರಸ್ತುತ ಕೆಂಪು ಕೆರೆಯು ೬೫ ಎಕರೆ ವಿಸ್ತೀರ್ಣ ಹೊಂದಿದೆ. ಬಹುಶಃ ಕೆರೆಯ ಮಣ್ಣು ಕೆಂಪಾದ್ದರಿಂದ ಈ ಕೆರೆಗೆ ಕೆಂಪು ಕೆರೆ ಎಂದೇ ಹೆಸರಿಸಲಾಗಿದೆ. ಈ ಕೆರೆಯು ಒಂದು ತೂಬು ಒಂದು ಕೋಡಿಯನ್ನು ಒಳಗೊಂಡಿದೆ. ಕೆರೆಯ ಹಿಂಭಾಗದಲ್ಲಿ ಆಂಜನೇಯ ದೇವಾಲಯವಿದೆ. ದೇವಾಲಯದ ಪಕ್ಕದಲ್ಲಿ ಪ್ರಾಚೀನ ಬಾವಿಯಿದೆ. ತೂಬಿನ ಹಿಂಭಾಗದಲ್ಲಿ ಒಂದು ಸುಂದರವಾದ ಬಾವಿಯನ್ನು ಕಾಣಬಹುದು. ಅದರ ಅಕ್ಕಪಕ್ಕದಲ್ಲಿ ಒಂದು ವೀರಗಲ್ಲು ಆಂಜನೇಯ ಶಿಲ್ಪ ಮತ್ತು ಬಿಡಿ ಶಿಲ್ಪಗಳನ್ನು ಕಾಣಬಹುದು.

ಪ್ರಸ್ತುತ ೬೫ ಎಕರೆ ವಿಸ್ತಾರವಾಗಿರುವ ಈ ಕೆರೆ ರೈತರ ಜೀವಾಳವಾಗಿದೆ. ಜನ ಕೆರೆಯಿಂದ ಪ್ರಯೋಜನ ಪಡೆದುಕೊಂಡಷ್ಟೇ ಆಯಿತು. ಆದರೆ ಕೆರೆಗೆ ಏನು ಮಾಡಲಿಲ್ಲ. ಏಕೆಂದರೆ ಹೂಳು ತುಂಬಿಕೊಂಡ ಸದಾ ಬರಿದಾದ ಕೆರೆಯನ್ನು ಈಗ ಕಾಣಬಹುದು.

ಕೆಂಪುಕೆರೆ ಹುಳೆತ್ತಬೇಕೆಂದು ಇಲ್ಲಿನ ರೈತ ಸಂಘಟನೆಗಳು ಪ್ರಗತಿಪರ ಹೋರಾಟ ಸಮಿತಿಗಳು, ಯುವಕ ಸಂಘಟನೆಗಳು ಹೋರಾಟಕ್ಕೆ ಇಳಿದಾಗಲೆಲ್ಲ ಮಗು ಅತ್ತಾಗ ಕಣ್ಣೀರು ವರೆಸುವಂತೆ ಸರ್ಕಾರ ಸರ್ವೆ ಮಾಡಿ ಅಷ್ಟಕ್ಕೆ ನಿಲ್ಲಿಸಿಬಿಡುತ್ತಿತ್ತು. ಹೋರಾಟದ ಮುಖಂಡರಿಗೆ ಏನಾದರೂ ಸಬೂಬು ಹೇಳಿ ಸಾಗಹಾಕುವುದು ಅಧಿಕಾರಿಗಳಿಗೆ ನಿತ್ಯ ಕೆಲಸವಾಗಿದೆ. ಸರಕಾರದ ಈ ನಿರ್ಲಕ್ಷ್ಯ ಧೋರಣೆಯಿಂದ ತಾಳ್ಮೆಗೆಟ್ಟ ಜನ ೧೯೮೫ರಲ್ಲಿ ಉಗ್ರ ರೂಪದ ಹೋರಾಟ ನಡೆಸಿದರು. ಹಲವರು ಜೈಲು ಸೇರಿದರು. [೧೦] ೧೯೯೭-೯೮ರಲ್ಲಿ ಬರಗಾಲ ಬಂದಾಗ ಹೆಚ್ಚಿನ ಕೃಷಿ ಕಾರ್ಮಿಕರು ಗುಳೇ ಹೋಗುವ ಪರಿಸ್ಥಿತಿ ಬಂತು. ಜಿಲ್ಲಾಡಳಿತ ಬರಗಾಲ ಪರಿಹಾರ ಕಾಮಗಾರಿ ಯೋಜನೆ ಅಡಿಯಲ್ಲಿ ಎಂಟುಲಕ್ಷ ರೂಪಾಯಿ ಬಿಡುಗಡೆ ಮಾಡಿ ಈ ಕೆರೆಯ ಹೂಳೆತ್ತುವ ಕಾರ್ಯಕ್ಕೆ ಹೊರಟರೂ ಕೆಲಸ ನಡೆಯಲಿಲ್ಲ. ನೀರು ತುಂಬಲಿಲ್ಲ ಆದರೆ ಹಣ ಮಾತ್ರ ಸೋರಿ ಹೋಯಿತು. ಹೀಗೆ ೧೭ ವರ್ಷಗಳ ಹೋರಾಟದ ಫಲವಾಗಿ ಒಂದು ಕೋಟಿ ರೂಪಾಯಿ ವೆಚ್ಚದಲ್ಲಿ ಕೆರೆಯ ಹೂಳು ಎತ್ತಲು ಮುಂದಾಗಿದೆ. ಈ ಹೂಳೆತ್ತುವ ಕೆಲಸವನ್ನು ಹಂತಹಂತವಾಗಿ ಹಣ ಮಂಜೂರು ಮಾಡಲು ಸರ್ಕಾರ ನಿರ್ಧರಿಸಿದೆ. ಸಂಸದರ ಅನುದಾನದಿಂದ ಐದು ಲಕ್ಷ ರೂಪಾಯಿ ಮುಖ್ಯಮಂತ್ರಿ ಪರಿಹಾರ ನಿಧಿಯಿಂದ ೨೦ ಲಕ್ಷ ರೂಪಾಯಿ ಬಿಡುಗಡೆಯಾಗಿ ಕೆಂಪು ಕೆರೆ ಮರುಹುಟ್ಟು ಪಡೆದಿದೆ. ಈಗ ಮಳೆಗಾಲದಲ್ಲಿ ಕೆರೆ ತುಂಬುತ್ತದೆ. ಈ ಕೆರೆಯನ್ನು ನೋಡಲು ಜನ ತಂಡೋಪ ತಂಡವಾಗಿ ಬರುತ್ತಾರೆ.

**ಕರಿ ಕೆರೆ**

ಈ ಕೆರೆಯು ಪಟ್ಟಣದ ಉತ್ತರಭಾಗದಲ್ಲಿ ನಿರ್ಮಾಣಗೊಂಡಿದೆ. ಹೆಸರೇ ಹೇಳುವಂತೆ ಮಣ್ಣು ಕಪ್ಪು, ಹಾಗಾಗಿ ಇದಕ್ಕೆ ಕರಿಕೆರೆ ಎಂದು ಕರೆಯುತ್ತಾರೆ. ಗಜೇಂದ್ರಗಡ ಸಂಸ್ಥಾನದ ವ್ಯಾಪ್ತಿಯಲ್ಲಿ ಈ ಕೆರೆ[೧೧] ವಿಸ್ತೀರ್ಣ ೮೫ ಎಕರೆಯಾಗಿತ್ತು. ರಾಜರ ಕಾಲದಲ್ಲಿ ಕಟ್ಟಿದ್ದ ಒಡ್ಡುಗಳು ಈಗಲೂ ಇವೆ. ಆದರೆ ಕೆರೆ ಪ್ರದೇಶವೆಲ್ಲ ಹೊಲವಾಗಿದೆ.

ಪ್ರಸ್ತುತ ಈ ಕೆರೆಯು ಒಂದು ತೂಬು ಮತ್ತು ಒಂದು ಕೋಡಿಯನ್ನೊಳಗೊಂಡಿದೆ. ಇಂದು ಕಪ್ಪು ಕೆರೆಯು ಸಂಪೂರ್ಣವಾಗಿ ಬತ್ತಿಹೋಗಿದ್ದು ಯಾವುದೇ ಕೃಷಿ ಚಟುವಟಿಕೆಗಳಿಗೆ ಅನುಕೂಲವಾಗದಾಗಿದೆ. ಕೆರೆಯ ತೂಬಿನ ಸಮೀಪದಲ್ಲಿ ಕೆಂಚಮ್ಮನ ಗುಡಿ ಇದೆ. ಹಾಗೂ ತೃಟಿತ ಗೊಂಡ ಅನೇಕ ನಾಗರ ಶಿಲ್ಪಗಳನ್ನು ಕಾಣಬಹುದು.

**ಯಲಬುರ್ಗ ಪಟ್ಟಣದಲ್ಲಿರುವ ಇತರ ಕೆರೆಗಳು**

ಆರಂಭದಲ್ಲಿ ಹೇಳಿದಂತೆ ಯಲಬುರ್ಗ ಪಟ್ಟಣದಲ್ಲಿ ಏಳು ಕೆರೆ ಮತ್ತು ಏಳು ಬಾವಿಗಳನ್ನೊಳಗೂಂಡಿದೆ ಇದರಲ್ಲಿ ಕರಿ ಕೆರೆ ಮತ್ತು ಕೆಂಪುಕೆರೆಯನ್ನು ಹೊರತುಪಡಿಸಿದರೆ ಉಳಿದ ಕೆರೆಗಳೆಂದರೆ.

**ಅಂಗಾತ ಕೆರೆ**

ಪಟ್ಟಣದ ಕೋರ್ಟಿನ ಹಿಂಭಾಗದ ಪ್ರದೇಶದಲ್ಲಿ ೧೫ ಎಕರೆ ಪ್ರದೇಶವನ್ನು ಒಳಗೊಂಡಿತ್ತು. ಆದರೆ ಪ್ರಸ್ತುತ ಈ ಕೆರೆಯ ಪ್ರದೇಶವು ಹೊಲವನ್ನಾಗಿ ಪರಿವರ್ತಿಸಿದ್ದಾರೆ.[೧೨]

**ರಾಮಪ್ಪನ ಕೆರೆ**

ಈ ರಾಮಪ್ಪನ ಕೆರೆಯು ೩ ಎಕರೆ ೧೭ ಗುಂಟೆ ಪ್ರದೇಶವನ್ನೊಳಗೊಂಡಿತ್ತು. ಊರಿನ ಮಧ್ಯಭಾಗದಲ್ಲೇ ಇದ್ದ ಈ ಕೆರೆ ಪ್ರದೇಶದಲ್ಲಿ ಈಗ ರಾಮನಗರವಿದೆ.[೧೩]

**ಸಂಗಪ್ಪನ ಕೆರೆ**

ಈ ಕೆರೆಯು ಪಟ್ಟಣದಿಂದ ಬಳಗೇರಿಗೆ ಹೋಗುವ ದಾರಿಯಲ್ಲಿದೆ ಪ್ರಸ್ತುತ ಈ ಕೆರೆಯ ಪ್ರದೇಶವನ್ನು ಅಲ್ಲಿಯ ಜನರು ಒತ್ತುವರಿ ಮಾಡಿಕೊಂಡಿದ್ದಾರೆ. ಆದ್ದರಿಂದ ಕೆರೆಯ ಅವಶೇಷಗಳು ನಮಗೆ ಸಿಗುವುದಿಲ್ಲ.

**ಫೌಜಿಕೆರೆ**

ಈ ಕೆರೆಯು ಇಂದು ಸಂಪೂರ್ಣವಾಗಿ ಹಾಳುಬಿದ್ದಿದೆ. ದಸರಾ ಸಮಯದಲ್ಲಿ ಈ ಕೆರೆಯ ದಿಬ್ಬದಲ್ಲಿರುವ ಬನ್ನಿಗಿಡಕ್ಕೆ ಬನ್ನಿ ಮುಡಿಯಲು ಜನ ಇಲ್ಲಿಗೆ ಬರುತ್ತಾರೆ.

**ಮಹಾಂತ ಕೆರೆ**

ಪ್ರಸ್ತುತ ಈ ಕೆರೆಯ ಭೂಮಿಯು ವಿಜಯ ಮಹಾಂತೇಶ ಮಠದ ಕೃಷಿ ಭೂಮಿಯಾಗಿ ಮಾರ್ಪಟ್ಟಿದೆ.

**ಯಲಬುರ್ಗ ಪಟ್ಟಣದ ಕೆರೆಗಳ ತಂತ್ರಜ್ಞಾನ**

ಯಲಬುರ್ಗ ಪಟ್ಟಣದ ಕೆರೆಗಳ ನಿರ್ಮಾದಲ್ಲಿ ತಂತ್ರಜ್ಞಾನ ಈ ಕೆಳಗಿನಂತೆ ಕಂಡುಬಂದಿದೆ.

೧. ಏರಿಯನ್ನು ಅಂಕುಡೊಂಕಾಗಿ ನಿರ್ಮಿಸಿದ್ದು, ಇಳಿಜಾರಿಗೆ ಅಡ್ಡಲಾಗಿ ಏರಿ ಕಟ್ಟಿಸಲಾಗಿದೆ. ಇದರಿಂದ ನೀರಿನ ಒತ್ತಡವನ್ನು ವಿರದ್ಧ ದಿಕ್ಕಿನಲ್ಲಿ ತಡೆದು ಏರಿಗೆ ಸಾಕಷ್ಟು ಬಲ ಕೊಡಲು ಸಹಾಯವಾಗಿದೆ.

೨. ಸರಣಿ ಕೆರೆಗಳನ್ನು ನಿರ್ಮಾಣ ಮಾಡಲಾಗಿದೆ. ಇದರಿಂದ ಮಳೆಗಾಲದಲ್ಲಿ ನೀರಿನ ಪ್ರಮಾಣ ಹೆಚ್ಚಾದಾಗ ತುಂಬಿದ ನೀರು ಕೋಡಿಗಳ ಮೂಲಕ ಹೊರಹಾಕಿ ಕೆರೆಗಳನ್ನು ಸಂರಕ್ಷಣೆ ಮಾಡಲು ಅನುಕೂಲವಾಗಿದೆ.

೩. ಕೆರೆಗಳ ವಿಸ್ತೀರ್ಣಕ್ಕೆ ತಕ್ಕಂತೆ ತೂಬು ಮತ್ತು ಕಾಲುವೆಗಳ ನಿರ್ಮಾಣ ಹಾಗೂ ಏರಿಯ ಎತ್ತರವನ್ನು ಕಾಯ್ದುಕೊಂಡಿದ್ದಾರೆ.

೪. ಕಲ್ಲಿನ ಗಣಿಗಳು ಇರುವ ಕಡೆ ಹಾಗೂ ಜಲಾನಯನ ಪ್ರದೇಶವನ್ನು ಗಮನಿಸಿಕೊಂಡು ಕೆರೆಗಳ ನಿರ್ಮಾಣ ಮಾಡಿದ್ದಾರೆ.

೫. ನೀರನ್ನು ನಿಯಂತ್ರಿಸಲು ತೂಬುಗಳನ್ನು ಕಲ್ಲು ಕಂಬಗಳಿಂದ ನಿರ್ಮಿಸಿ, ಕಬ್ಬಿಣದ ಸಲಾಕೆ ಅಳವಡಿಸಿ ನಿಯಂತ್ರಿಸಲಾಗಿದೆ.

೬. ಸಂಚಾರದ ಅನುಕೂಲಕ್ಕಾಗಿ ಏರಿಯನ್ನು ಅಗಲವಾಗಿ ನಿರ್ಮಿಸಲಾಗಿದೆ.

ಈ ಮೇಲ್ಕಂಡ ತಂತ್ರಾಂಶಗಳನ್ನು ಬಳಸಿಕೊಂಡು ಕೆರೆ ನಿರ್ಮಾಣ ಮಾಡಿರುವುದರಿಂದ ಇಂದಿನವರೆಗೂ ಸುಸ್ಥಿಯಲ್ಲಿ ಕೆರೆಗಳಿವೆ.

**೪.೨. ಬಾವಿಗಳು**

**ಯಲಬುರ್ಗ ಪಟ್ಟಣದ ಪ್ರಮುಖ ಬಾವಿಗಳು**

ಬಾವಿಗಳು ವಿಸ್ತೀರ್ಣದಲ್ಲಿ ಚಿಕ್ಕದಾಗಿದ್ದು ಜನರ ಅನುಕೂಲಕ್ಕಾಗಿ ನಿರ್ಮಾಣ ಗೊಂಡಿರುವುದನ್ನು ಕಾಣಬಹುದಾಗಿದ್ದು ಬಾವಿಗಳನ್ನು ಪುಷ್ಕರಣಿ, ಕಲ್ಯಾಣಿ, ಕೊಳ, ತಲಾಕ, ನೀರಿನ ಹೊಂಡ ಎಂದು ಕರೆಯುತ್ತಾರೆ. ಬಾವಿಗಳಲ್ಲಿ ಎರಡು ವಿಧಗಳಿವೆ. ಜನರು ವಾಸವಾಗಿರುವಲ್ಲಿ ಅಗೆಯಲಾದ ಬಾವಿಗಳು ಕುಡಿಯುವ ಮತ್ತು ಬಟ್ಟೆಗಳನ್ನು ಒಗೆಯಲು ಉಪಯೋಗವಾದರೆ ಹೊಲಗಳಲ್ಲಿ ತೆಗೆದ ಬಾವಿಗಳು ನೀರಾವರಿ ಕಾರ್ಯಕ್ಕೆ ಉಪಯೋಗವಾಗುತ್ತವೆ. ಮೊದಲನೆಯ ವಿಧವಾದ ಬಾವಿಗಳ ರಚನೆ ಸಂಕೀರ್ಣತೆಯಿಂದ ಕೂಡಿದ್ದು, ಪೂಜೆ, ಪುನಸ್ಕಾರಗಳಿಗೆ ಮತ್ತು ಸಣ್ಣಪುಟ್ಟ ದೇವತೆಗಳ ಮಂಟಪಗಳಿಂದ ಒಳಗೊಂಡಿರುತ್ತವೆ. ಆದರೆ ಹೊಲಗಳಲ್ಲಿಯ ಬಾವಿಗಳು ತೆರೆದ ಬಾವಿಗಳಾಗಿದ್ದು ನೀರಾವರಿ ಉಪಯೋಗಕ್ಕೆ ದಾರಿಹೊಕ್ಕರ ಬಾಯಾರಿಕೆ ನಿವಾರಸಲೆಂದೇ ಕಟ್ಟಲಾಗಿದೆ.

**ತೋಪಿನ ಹನುಮಪ್ಪನ ಬಾವಿ**

ನಗರದಿಂದ ಕೊಪ್ಪಳ ಮಾರ್ಗವಾಗಿ ಹೊರಟರೆ ಊರಾಚೆ ತಾಲ್ಲೂಕ ಕಚೇರಿ ಹಿಂದುಗಡೆ ಇರುವ ತೋಪಿನ ಹನುಮಪ್ಪನ ಬಾವಿ ಸುಮಾರು ೨೭೩ ವರ್ಷ ಹಳೆಯದು.

ನೆಲ ಅಂತಸ್ತಿನಲ್ಲಿ ನಿರ್ಮಾಣಗೊಂಡ ಈ ಬಾವಿಯು ಪೂರ್ವಕ್ಕೆ ಮುಖಮಾಡಿ ಮುಖ್ಯದ್ವಾರದಲ್ಲಿ ಇರುವ ಒಂಬತ್ತು ಮೆಟ್ಟಿಲುಗಳನ್ನು ಇಳಿದರೆ ಎಡ-ಬಲಕ್ಕೆ ಗೋಡೆಯೊಳಗೆ ಚಿಕ್ಕ ಗುಡಿಗಳಿದ್ದು ಅವು ನಾಶಗೊಂಡಿವೆ. ನಂತರ ಏಳು ಮೆಟ್ಟಿಲುಗಳನ್ನು ಇಳಿದರೆ ನಾಲ್ಕು ಕಂಬಗಳ ಮಧ್ಯದಲ್ಲಿ ಆಂಜನೇಯ ದೇವಾಲಯವಿದೆ. ಆ ವಿಲಾಸ ಮಂಟಪದಿಂದ ದಕ್ಷಿಣಕ್ಕೆ ಮುಖಮಾಡಿ ನೋಡಿದರೆ ೩೨ ಮೆಟ್ಟಿಲುಗಳ ಕಲ್ಲು ಬಾವಿಯ ವಿಹಂಗಮ ದೃಶ್ಯ ಕಾಣುತ್ತದೆ. ಎಂಟೆ ಎಂಟು ಮೆಟ್ಟಿಲು ಹಂತ ಹಂತವಾಗಿ ಇಳಿದರೆ ಈ ಬಾವಿಯ ತಳ ಸಿಗುತ್ತದೆ. ಹಿಂದೆ ಬಾವಿಯ ನೀರು ಊರಿನ ಜನರು ಕುಡಿಯಲು ಉಪಯೋಗಿಸುತ್ತಿದ್ದರು. ಆದರೆ ಈಗ ಅದರ ನೀರು ಯಾವುದಕ್ಕೂ ಉಪಯೋಗವಾಗುತ್ತಿಲ್ಲ ನಾಲ್ಕು ಹಂತಗಳಲ್ಲಿ ೩೨ ಮೆಟ್ಟಿಲುಗಳ ಮಧ್ಯದಲ್ಲಿ ಅಂದರೆ ಗೋಡೆಯೊಳಗೆ ಎದುರು ಬದುರಾಗಿ ಎರಡು ಗುಡಿಗಳಿವೆ. ಅವುಗಳಲ್ಲಿ ವಿಗ್ರಹಗಳಿವೆ ಅಲ್ಲದೆ ಬಾವಿಯ ಗೋಡೆಗಳಲ್ಲಿ ಅಲ್ಲಲ್ಲಿ ಸರ್ಪ ಸರ್ಪಬಂದಗಳು ಮತ್ತು ಮಿಥುನಶಿಲ್ಪ, ಮೀನಿನ, ಆಮೆ, ಮಗುವನ್ನು ಎತ್ತಿಕೊಂಡಿರುವ ಮಹಿಳೆಯ ಶಿಲ್ಪ, ಚಿತ್ರಗಳನ್ನು ಕೆತ್ತಲಾಗಿದೆ.

ಈ ಬಾವಿಗೆ ಮುಖ್ಯದ್ವಾರವನ್ನು ಹೊರತುಪಡಿಸಿ ಮತ್ತೆರಡು ಗುಪ್ತದ್ವಾರಗಳಿವೆ. ಇವು ಒಬ್ಬಬ್ಬರು ಹೋಗುವಷ್ಟು ಅಗಲವಾಗಿವೆ. ಈ ದ್ವಾರದ ಮೂಲಕ ಹೊರಟರೆ ೧೩ ಕಂಬಗಳು ಸಿಗುತ್ತವೆ. ಅವುಗಳನ್ನು ಉಪಯೋಗಿಸಿ ಬಾವಿಯ ದಂಡೆಗೆ ಮಂಟಪವನ್ನು ನಿರ್ಮಿಸಿದ್ದಾರೆ. ಈ ಮಂಟಪದಲ್ಲಿ ನಿಂತು ಬಾವಿಯನ್ನು ವೀಕ್ಷಿಸುವ ಹಾಗೆ ಮಾಡಿದ್ದಾರೆ. ಈ ಕಂಬಗಳಲ್ಲಿ ಆರು ಕಂಬಗಳನ್ನು ಕಪ್ಪು ಕಲ್ಲಿನಲ್ಲಿ ಕನ್ನಡಿಯಂತೆ ನಯವಾಗಿ ಕೆತ್ತಿ ನಿಲ್ಲಿಸಿದ್ದಾರೆ.

ಯಲಬುರ್ಗ ಪಟ್ಟಣದ ಕೆಂಪುಕೆರೆಯ ತೂಬಿನ ಹಿಂಭಾಗದಲ್ಲಿ ಕಲ್ಲಿನಿಂದ ಕಟ್ಟಿ ಸುಂದರವಾದ ಚೌಕಾಕಾರದ ೪೦x೪೦ ಅಡಿ ವಿಸ್ತೀರ್ಣದ ಮತ್ತು ೨೦ ಅಡಿ ಆಳವಾದ ಪುಷ್ಕರಣಿ ಇದೆ. ಅದೇ ರೀತಿ ಕೆರೆಯ ಏರಿಯ ಹಿಂಭಾಗದಲ್ಲಿರುವ ಆಂಜನೇಯನ ದೇವಾಲಯದ ಹತ್ತಿರವು ಪುಷ್ಕರಣಿಯನ್ನು ಕಾಣಬಹುದು.

ಪಾಂಡುರಂಗ ದೇವಾಲಯದ ಉತ್ತರ ಭಾಗದಲ್ಲಿ ಒಂದು ಪುಷ್ಕರಣಿ ಇದೆ. ಅದೇ ರೀತಿ ಊರಿನ ಹೊರವಲಯದಲ್ಲಿರುವ ಆಂಜನೇಯ ದೇವಾಲಯದ ಹಿಂಭಾಗದಲ್ಲಿ ಒಂದು ಸುಂದರವಾದ ಬಾವಿ ಇದೆ, ಈ ಬಾವಿಗೆ ಬಸವನ ಬಾವಿ ಎಂದು ಕರೆಯುತ್ತಾರೆ. ಸು. ೪೦x೪೦ ಅಡಿ ವಿಸ್ತೀರ್ಣದ ಮತ್ತು ೩೦ ಅಡಿ ಆಳವಾದ ಕಲ್ಲಿನಿಂದ ಸುಂದರವಾಗಿ ಕಟ್ಟಿದ ಇಂದಿಗೂ ಸುಸ್ಥಿತಿಯಲ್ಲಿರುವ ಬಾವಿ ಇದು.

ಹಾಗೇಯೆ ಸಂಗಮೇಶ್ವರ ದೇವಾಲಯದ ಪೂರ್ವಭಾಗದಲ್ಲಿ ಸು. ೪೦x೪೦ ಅಡಿ ವಿಸ್ತೀರ್ಣದ ಮತ್ತು ೨೦ ಅಡಿ ಆಳದ ಕಲ್ಲಿನಿಂದ ಕಟ್ಟಿದ ಪುಷ್ಕರಣಿ ಇದೆ. ಈ ಮೇಲ್ಕಂಡ ಬಾವಿಗಳು ಸುಮಾರು ೩೦-೪೦ ಅಡಿ ಆಳವಿದ್ದು. ಸುಮಾರು ೧೦-೨೦ ಅಡಿ ಸುತ್ತಳತೆಯ ವಿಸ್ತೀರ್ಣ ಹೊಂದಿದ್ದು ಕಲ್ಲಿನ ಕಟ್ಟಡ ನಿರ್ಮಿಸಿ ನಾಲ್ಕು ಕಂಬಗಳನ್ನು ನಿಲ್ಲಿಸಿ ಅದರ ಮೇಲೆ

ಒಂದು ಕಂಬವನ್ನು ಮಲಗಿಸಿ ಅದಕ್ಕೆ ೨ ಗಾಲಿಗಳನ್ನು ನೇತುಹಾಕಲಾಗಿದೆ. ಈ ಗಾಲಿಗಳಿಗೆ ಹಗ್ಗವನ್ನು ಕಟ್ಟಿ ಬಿಂದಿಗೆ ಅಥವಾ ಬಕೇಟ್‌ಗಳನ್ನು ಬಳಸಿ ನೀರನ್ನು ಮೇಲಕ್ಕೆ ಎತ್ತಲಾಗುತ್ತದೆ. ಈ ಬಾವಿಗಳು ಕುಡಿಯುವ ನೀರಿಗಾಗಿ ಹಾಗೂ ಸಭೆ ಸಮಾರಂಭಗಳ ಬಳಕೆಗಾಗಿ ಉಪಯೋಗಿಸಲಾಗುತ್ತಿತ್ತೆಂದು ತಿಳಿದುಬರುತ್ತದೆ.

ಯಲಬುರ್ಗ ಪಟ್ಟಣದಲ್ಲಿನ ಬಾವಿಗಳ ನಿರ್ಮಾಣದ ಬಗ್ಗೆ ಯಾವುದೇ ಶಾಸನ ಆಧಾರಗಳು ಇರುವುದಿಲ್ಲ. ಇಲ್ಲಿನ ಬಾವಿಗಳು ಸಾಂಸ್ಕೃತಿಕ ಕೇಂದ್ರವಾಗಿದ್ದು ಎಲ್ಲಾ ಜಾತಿ ಜನಾಂಗದ ಜನರು ತಮ್ಮ ನಿತ್ಯ ಬಳಕೆಗಾಗಿ ದೇವಾಲಯದ ಪೂಜೆ ಪುನಸ್ಕಾರಕ್ಕೆ ಕುಡಿಯಲಿಕ್ಕೆ ಪ್ರಾಣಿ ಪಕ್ಷಿ ಮತ್ತು ವ್ಯವಸಾಯಕ್ಕೆ ಬಳಸಿಕೊಂಡಿರುವುದನ್ನು ಕಾಣಬಹುದಾಗಿದೆ.

**ಕೆರೆ ನೀರಾವರಿ ಆಧಾರಿತ ಬೆಳೆಗಳು**

ಇತಿಹಾಸ ಪೂರ್ವ ಕಾಲದಿಂದಲೂ ಕೃಷಿ ಆರ್ಥಿಕತೆಯ ಬೆನ್ನೆಲುಬಾಗಿದೆ. ಯಲಬುರ್ಗ ತಾಲೂಕಿನ ಜನರು ಕೃಷಿಯನ್ನೇ ಅವಲಂಬಿಸಿದ್ದಾರೆ. ಅಲ್ಲಿನ ಜನರ ಅರ್ಥ ವ್ಯವಸ್ಥೆಯು ವ್ಯವಸಾಯವನ್ನೇ ಅವಲಂಬಿಸಿದೆ. ಒಕ್ಕಲುತನದ ಅಭಿವೃದ್ಧಿಯೆಂದರೆ ಒಂದು ನಾಡಿನ ನಿಜವಾದ ಅಭಿವೃದ್ಧಿ ಎಂಬುದನ್ನು ನಮ್ಮ ಪ್ರಾಚೀನರು ಚೆನ್ನಾಗಿ ಮನಗಂಡಿದ್ದರು ತಾಲ್ಲೂಕಿನ ಜನರ ವ್ಯವಸಾಯವು ಅಲ್ಲಿನ ಕೆರೆ, ಬಾವಿ, ಕಟ್ಟೆ, ಹಳ್ಳ ಕೊಳ್ಳಗಳನ್ನು ಅವಲಂಬಿಸಿದೆ. ಕೆರೆ ನೀರಾವರಿ ಆಧಾರಿತವಾಗಿ ಬೆಳೆಯುವ ಬೆಳೆಗಳು ಈ ಕೆಳಗಿನಂತಿವೆ. ಭತ್ತ, ಕಬ್ಬು, ಜೋಳ, ತೆಂಗು, ಬಾಳೆ, ಮತ್ತು ಇತರೆ ತೋಟಗಾರಿಕೆಯ ಬೆಳೆಗಳನ್ನು ಬೆಳೆಯುತ್ತಾರೆ.

**ಇಟ್ಟಿಗೆ ಉದ್ಯಮ**

ಕೆರೆಯಲ್ಲಿನ ನೀರನ್ನು ಬಳಸಿಕೊಂಡು ಉತ್ತಮ ಗುಣಮಟ್ಟದ ಇಟ್ಟಿಗೆಗಳನ್ನು ತಯಾರಿಸಲಾಗುತ್ತಿದ್ದು ಇದರಿಂದ ನೂರಾರು ಜನರಿಗೆ ಉದ್ಯೋಗ ನೀಡಿದೆ ಜೊತೆಗೆ ಮನೆಗಳನ್ನು ಕಟ್ಟಲು ಅನುಕೂಲವಾಗಿದೆ. ಇಟ್ಟಿಗೆ ಉದ್ಯಮದಿಂದ ಕೆರೆಗಳಲ್ಲಿನ ಹೂಳು ಮಣ್ಣನ್ನು ಹೊರತೆಗೆದಂತಾಗುತ್ತದೆ. ಇದರಿಂದ ಗುಂಡಿಗಳಾಗಿ ಮಳೆ ನೀರು ಭೂಮಿಯಲ್ಲಿ ಇಂಗಲು ಸಹಕಾರಿಯಾಗಿದೆ.

**ಪಶುಪಾಲನೆ**

ಕೆರೆ ಮತ್ತು ಬಾವಿಯ ನೀರಿನಿಂದ ಪಶುಸಂಗೋಪನೆಗೆ ಅನುಕೂಲ ಮಾಡಿಕೊಟ್ಟಿದೆ ಪ್ರಾಚೀನ ಕಾಲದಿಂದಲೂ ಪಶುಸಂಗೋಪನೆ ನೀರಿನ ಆಸರೆಯ ಬಳಿಯೇ ವಿಕಸನಗೊಂಡಿದ್ದು ಸ್ವಾವಲಂಬನೆಗೆ ಅವಕಾಶ ಮಾಡಿಕೊಟ್ಟಿದೆ. ಕುರಿ, ಮೇಕೆ, ದನ, ಕರುಗಳು, ಎಮ್ಮೆ, ಸೀಮೆ ಹಸುಗಳನ್ನು ಸಾಕಾಣಿಕೆ ಮಾಡಿ ಹಾಲಿನ ಉತ್ಪಾದನೆಯಲ್ಲಿ ಪ್ರಗತಿ ಕಾಣಲು ಸಾಧ್ಯವಾಗಿದೆ. ಕೆರೆ ಅಂಗಳವು ಪ್ರಾಣಿಗಳಿಗೆ ಮೇವು, ಕುಡಿಯಲು, ಮೈತೊಳಯಲು ಅನುಕೂಲ ಮಾಡಿಕೊಟ್ಟಿದೆ ಎನ್ನಬಹುದು. ಒಟ್ಟಾರೆ ರೈತನು ಕೃಷಿಯ ಜೊತೆಗೆ ಪಶುಸಂಗೋಪನೆಯನ್ನು ಉಪಕಸುಬಾಗಿ ಮಾಡಿಕೊಂಡು ಸ್ವಾವಲಂಬನೆ ಸಾಧಿಸಲು ಅನುವು ಮಾಡಿಕೊಟ್ಟಿದೆ.

**ಕೆರೆಗಳಿಗೆ ಸಂಬಂಧಿಸಿದ ನಂಬಿಕೆ ಆಚರಣೆಗಳು**

ಪ್ರಾಚೀನ ಮತ್ತು ಮಧ್ಯಕಾಲೀನ ಯುಗದಲ್ಲಿ ನೀರಾವರಿ ಕಾರ್ಯಗಳ ನಿರ್ಮಾಣದಲ್ಲಿ ಕೆರೆಗಳು ಆರ್ಥಿಕಾಭಿವೃದ್ಧಿಗೆ ಪೂರಕವಾದರೂ ಧಾರ್ಮಿಕ ಮಹೋನ್ನತಿಯ ಉದ್ದೇಶಗಳು ಪ್ರಧಾನವಾಗಿದ್ದವು. ಕೆರೆ ಕಾಲುವೆಗಳನ್ನು ನಿರ್ಮಿಸುವುದು ದೇವಾಲಯಗಳನ್ನು ನಿರ್ಮಿಸುವುದು. ಧಾರ್ಮಿಕ ಕಾರ್ಯ ಇಂತಹ ಕಾರ್ಯಗಳನ್ನು ಕೈಗೊಂಡ ವ್ಯಕ್ತಿ ಪುಣ್ಯಕ್ಕೆ ಅರ್ಹರಾಗುತ್ತಾರೆ. ಎಂಬ ನಂಬಿಕೆ ಅಂದಿನಿಂದಲೂ ಜನರಲ್ಲಿ ಬೆಳೆದು ಬಂದಿದೆ. ಯಲಬುರ್ಗ ಪಟ್ಟಣದ ವ್ಯಾಪ್ತಿಯ ಕೆರೆಗಳನ್ನು ಕುರಿತಂತೆ ಕೆಲವು ನಂಬಿಕೆ ಅಚರಣೆಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಯಲಬುರ್ಗಿ ಪಟ್ಟಣದ ವ್ಯಾಪ್ತಿಯಲ್ಲಿ ಮಳೆ ಬಾರದ ಸಂದರ್ಭದಲ್ಲಿ ಊರಿನ ಎಲ್ಲಾ ಯುವಕರು ಒಟ್ಟಿಗೆ ಸೇರಿ ಜೇಡಿ ಮಣ್ಣಿನ ಮಳೆರಾಯನ ಮೂರ್ತಿಯನ್ನು ಮಾಡಿ ಮರದ ಹಲಗೆ ಮೇಲಿಟ್ಟು ಅರಿಶಿನ, ಕುಂಕುಮವಿಟ್ಟು ಹೂ ಪೂಜಿಸಿ ನಂತರ ಬೆತ್ತಲೆ ಇರುವ ಬಾಲಕನು ಮಳೆರಾಯನ ವಿಗ್ರಹವನ್ನು ತಲೆಯ ಮೇಲೆ ಹೊತ್ತುಕೊಳ್ಳುತ್ತಾನೆ. ಇವನ ಹಣೆಗೆ ಅರಿಶಿಣ ಕುಂಕುಮ ಹಚ್ಚಿ ಕೊರಳಿಗೆ ಹೂಮಾಲೆ ಹಾಕಿರುತ್ತಾರೆ. ಹುಡುಗರೆಲ್ಲರೂ ಸೇರಿಕೊಂಡು ಗ್ರಾಮದ ಪ್ರತಿ ಮನೆ ಮನೆಗೆ ತೆರಳಿ ಹಾಡನ್ನು ಹೇಳುತ್ತಾರೆ.

ಹುಯ್ಯೋ ಹುಯ್ಯೋ ಮಳೆರಾಯ ಹೂವಿನ ತೋಟಕ್ಕೆ ನೀರಿಲ್ಲ
ಹುಯ್ಯೋ ಹುಯ್ಯೋ ಮಳೆರಾಯ ಬಾಳೇ ತೋಟಕ್ಕೆ ನೀರಿಲ್ಲ
ಹುಯ್ಯೋ ಹುಯ್ಯೋ ಮಳೆರಾಯ ತೆಂಗಿನ ತೋಟಕ್ಕೆ ನೀರಿಲ್ಲ
ಬಾರಪ್ಪೋ ಮಳೆರಾಯ....

ಪ್ರತಿ ಮನೆಯ ಹೆಣ್ಣುಮಕ್ಕಳು ಒಂದು ಕೊಡ ನೀರನ್ನು ಮಳೆರಾಯನ ಮೂರ್ತಿ ಹೊತ್ತ ಹುಡುಗನ ಮೇಲೆ ಸುರಿಯುತ್ತಾರೆ. ಅವನಿಗೆ ಅರಿಶಿಣ ಕುಂಕುಮವಿಟ್ಟು ಪೂಜಿಸಿ ಗ್ರಾಮಕ್ಕೆ ಮಳೆ ಬರುವಂತೆ ಪ್ರಾರ್ಥಿಸುತ್ತಾರೆ. ಪ್ರತಿ ಮನೆಯವರು ದವಸ ಧಾನ್ಯ ನೀಡುತ್ತಾರೆ ಕೆಲವರು ಕಾಣಿಕೆ ನೀಡುತ್ತಾರೆ. ಊರೆಲ್ಲಾ ಪೂಜೆ ಮುಗಿದ ನಂತರ ಮಳೆರಾಯನ ಮೂರ್ತಿಯನ್ನು ಕೆರೆಯಲ್ಲಿ ವಿಸರ್ಜಿಸುತ್ತಾರೆ. ದವಸ ದಾನ್ಯಗಳನ್ನು ಮಾರಾಟ ಮಾಡಿ ಬಂದಂತಹ ಹಣದಿಂದ ಗ್ರಾಮದ ದೇವಸ್ಥಾನದಲ್ಲಿ ಪೂಜೆ ಮಾಡಿಸಿ ಪ್ರಸಾದವನ್ನು ಎಲ್ಲರಿಗೂ ಹಂಚಲಾಗುತ್ತದೆ. ಈ ಆಚರಣೆಯು ಯಲಬುರ್ಗ ಪಟ್ಟದಲ್ಲಿ ಪ್ರತಿವರ್ಷವವು ಮಳೆ ಬಾರದೆ ಇದ್ದಾಗ ತಪ್ಪದೆ ಆಚರಿಸುತ್ತಾರೆ.

ಕೆಂಪು ಕೆರೆಯ ಏರಿಯ ಹಿಂಭಾಗದಲ್ಲಿ ಆಂಜನೇಯ ದೇವಾಲಯವಿದ್ದು. ಕೆರೆಯ ಕೋಡಿಯನ್ನು ಕಾಯುವ ರಕ್ಷಕ ಎಂಬ ನಂಬಿಕೆ ಇದೆ. ಈ ದೇವಾಲಯಕ್ಕೆ ಊರ ಹೊರಗಿನ ಆಂಜನೇಯ ದೇವಾಲಯವೆಂದು ಹೆಸರು ಪ್ರತಿದಿನ ಪೂಜೆ ಪುನಸ್ಕಾರಗಳು ನಡೆಯುತ್ತಿವೆ. ಕರಿ ಕೆರೆ ಏರಿಯ ಮೇಲೆ ಕೆಂಚಮ್ಮನ ಗುಡಿ ಇದೆ. ಇಲ್ಲಿ ಮಕ್ಕಳು ಇಲ್ಲದವರು ಚರ್ಮದ ಕಾಯಿಲೆ ಇರುವವರು, ಭೂಮಿಯಿಂದ ಒಳ್ಳೆಯ ಫಸಲು ಬರಲೆಂದು ಮಡಿಯಿಂದ ಹೊಸ

ಸೀರೆ ಅರಿಶಿಣ ಕುಂಕುಮ ಹೋಳಿಗೆ ನೈವೇದ್ಯ ಮಾಡಿ ಭಕ್ತಿಯಿಂದ ಪೂಜೆ ಸಲ್ಲಿಸುತ್ತಾರೆ. ವಿಶೇಷವಾಗಿ ಮಂಗಳವಾರ ಮತ್ತು ಶುಕ್ರವಾರ ಶುಭದಿನವಾಗಿದ್ದು ಇದನ್ನು ಪೂಜಿಸುತ್ತಾರೆ.

ಗಣಪತಿ ಉತ್ಸವವನ್ನು ಭರ್ಜರಿಯಾಗಿ ಆಚಣೆ ಮಾಡಿ ೫-೯ ದಿನಗಳ ಕಾಲ ಪೂಜಿಸುತ್ತಾರೆ. ಕೊನೆಯ ದಿನ ಪಟ್ಟಣದ ತುಂಬ ಮೆರವಣಿಗೆ ಮಾಡಿಸಿ ಯಲಬುರ್ಗ ಪಟ್ಟಣದ ಕೆಂಪು ಕೆರೆಗೆ ತಂದು ವಿಸರ್ಜಿಸುತ್ತಾರೆ. ಪ್ರತಿವರ್ಷ ಸುಮಾರು ೮೦ ರಿಂದ ೧೦೦ ಗಣಪತಿಯ ಮೂರ್ತಿಗಳನ್ನು ವಿಸರ್ಜಿಸಲಾಗುತ್ತದೆ.

ಕೆಂಪುಕೆರೆ ಮತ್ತು ಕರಿ ಕೆರೆಯ ಏರಿಯ ಮೇಲೆ ನಾಗರಕಲ್ಲುಗಳು ಹೇರಳವಾಗಿದ್ದು ಹೆಣ್ಣು ಮಕ್ಕಳು ನಾಗರ ಕಲ್ಲುಗಳಿಗೆ ಪೂಜೆ ಪುನಸ್ಕಾರ ಕೈಗೊಂಡು ನಾಗದೋಷವನ್ನು ನಿವಾರಣೆ ಮಾಡಿಕೊಳ್ಳುತ್ತಾರೆ.

ಕೆರೆಯು ಪವಿತ್ರವಾದುದೆಂಬ ಭಾವನೆಯು ಜನರಲ್ಲಿರುವುದನ್ನು ಕಾಣಬಹುದು. ಏಕೆಂದರೆ ಕೆರೆಗೆ, ಪಂಚಕನ್ಯೆಯರು, ಅಪ್ಸರಾಸ್ತ್ರೀಯರು, ದೇವಾನುದೇವತೆಗಳು ಜಲವಿಹಾರಕ್ಕಾಗಿ ಆಗಮಿಸುತ್ತಾರೆಂಬ ನಂಬಿಕೆ ಇದೆ. ಹಾಗಾಗಿ ಈ ಕೆರೆಗಳ ಸುತ್ತಮುತ್ತಲಿನ ದೇವತೆಗಳು ಶಿವರಾತ್ರಿಯಿಂದ ಪ್ರಾರಂಭ ಮಾಡಿ ಯುಗಾದಿಯವರೆಗೆ ಗಂಗಾ ಸ್ನಾನಕ್ಕೆ ಆಗಮಿಸುತ್ತಾರೆ. ಕೆಲವು ಗ್ರಾಮದ ದೇವತೆಗಳು ಶ್ರಾವಣ ಮತ್ತು ಕಾರ್ತಿಕ ಮಾಸದಲ್ಲಿ ಬರುತ್ತವೆ. ಇಲ್ಲಿಗೆ ಗ್ರಾಮದೇವತೆಗಳನ್ನು ಅರ್ಚಕ ವೃಂದ ಮತ್ತು ದೇವತೆಗಳ ಆರಾಧಕರು ಭಕ್ತಿ ಭಾವದಿಂದ ಕರೆತಂದು ಅವುಗಳಿಗೆ ಗಂಗಾಸ್ನಾನ ಮಾಡಿಸಿ ಪೂಜಾ ಸಾಮಗ್ರಿಗಳನ್ನು ಮತ್ತೆ ಅಲಂಕರಣ ಸಾಮಗ್ರಿಗಳನ್ನು ಸ್ವಚ್ಚಗೊಳಿಸುತ್ತಾರೆ. ಅನಂತರ ಪುರೋಹಿತರು ದೇವತೆಗಳಿಗೆ ಪುಣ್ಯೋಜನ್ಯ ಮಾಡಿಸಿ. ಗೋವಿನ ಗಂಜಲದಿಂದ ಶುದ್ಧೀಕರಿಸುತ್ತಾರೆ. ಅನಂತರ ಕುಂಭಾಭಿಷೇಕ ಮಾಡಿ ಅಲಂಕರಣ ಮಾಡಿ ಅಭಿಷೇಕಕ್ಕೆ ಕೊನೆಯಲ್ಲಿ ಅಷ್ಟಗಂಧವನ್ನು ಬಳಸಿ ವಿಶೇಷ ಪೂಜೆ ನೆರೆವೇರಿಸುತ್ತಾರೆ.

ಈ ಮೇಲ್ಕಂಡ ಅಂಶಗಳು ಯಲಬುರ್ಗ ಪಟ್ಟಣದ ಕೆರೆಗಳಿಗೆ ಮತ್ತು ಬಾವಿಗಳಿಗೆ ಸಂಬಂಧಿಸಿದ ನಂಬಿಕೆ ಆಚರಣೆಗಳಾಗಿದ್ದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದುಬಂದಿದೆ.

**ಕೋಟೆಕೊತ್ತಲಗಳು**

ಸಾಮಾನ್ಯವಾಗಿ ಕೋಟೆ ಎಂದರೆ ರಕ್ಷಣೆ ಆವರಣವುಳ್ಳ ಪ್ರದೇಶ ಎಂದರ್ಥ. ಅಂದರೆ ರಾಜರು ತನ್ನ ಪರಿವಾರ ಹಾಗೂ ಪ್ರಜೆಗಳ ಸಂಪತ್ತಿನ ರಕ್ಷಣೆಗಾಗಿ ನಿರ್ಮಿಸಿಕೊಂಡ ಭದ್ರವಾದ ಗೋಡೆ ಮತ್ತು ಬಾಗಿಲುಳ್ಳ ಕೋಟೆಯಾಗಿದೆ ಎಂದು ರಾಜನೀತಿ ಪ್ರಕಾಶನದ ಬೃಹಸ್ಪತಿಯ ವಚನವು ಉಲ್ಲೇಖಿಸಿದೆ.[೧೪]

ಕೋಟೆಗಳು ರಾಜಮನೆತನಗಳ ರಕ್ಷಣೆಯಲ್ಲಿ ಪಾತ್ರವಹಿಸುವುದಲ್ಲೆ ಪ್ರಮುಖವಾಗಿ ಜೀವಸಲಿಕ್ಕೆ ಆಧಾರವಾಗಿದ್ದವು. ಆಯಕಟ್ಟಿನ ಪ್ರದೇಶಗಳಲ್ಲಿ ವಿಶಾಲವಾಗಿ ಹಾಗೂ ಬಲಿಷ್ಠವಾಗಿ ನಿರ್ಮಾಣಗೊಂಡ ಗೋಡೆಗಳ ಆವರಣಕ್ಕೆ ಕೋಟೆಗಳೆಂದು ಕರೆಯಲಾಗಿದೆ.[೧೫]

ಕೋಟೆ ಎಂಬ ಪದಕ್ಕೆ ದುರ್ಗ, ಪುರಗಳೆಂಬ ಪದಗಳು ಬಳಕೆಯಾಗುತ್ತಿವೆ. "ದುರ್ಗ" ಎಂದರೆ ಅರಸ, ಆತನ ಸಂಬಂಧಿಕರು ಸರದಾರರು, ರಾಜಪುರೋಹಿತರು ವಾಸಮಾಡುವ ಸ್ಥಳವೆಂದೂ, ಪುರ ಎಂದರೆ ಅರಸ ವಾಸಮಾಡುವ ಸ್ಥಳವೆಂದು ಕರೆಯುತ್ತಾರೆ.[೧೭]

ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ರಾಜನು ತನ್ನ ರಾಜ್ಯದ ಎಲ್ಲೆಯ ನಾಲ್ಕು ದಿಕ್ಕುಗಳಲ್ಲಿ ಶತ್ರುಗಳನ್ನು ತಡೆಗಟ್ಟಲು ಸೂಕ್ತವಾದ ಕೋಟೆಯನ್ನು ಕಟ್ಟಬೇಕೆಂದು ಹೇಳಿದ್ದಾನೆ.[೧೮] ಶುಕ್ರನ ನೀತಿಸಾರ, ಕೆಳದಿ ನೃಪವಿಜಯ, ಚನ್ನಪುರಾಣ, ಮೋಹನತರಂಗಿಣಿ ಮೊದಲಾದ ಸಾಹಿತ್ಯ ಕೃತಿಗಳು ಕೋಟೆಯ ನಿರ್ಮಾಣದ ಬಗ್ಗೆ ಮಾಹಿತಿಯನ್ನು ನೀಡುತ್ತದೆ.[೧೯]

ದುರ್ಗಗಳಲ್ಲಿ ಹಲವು ವಿಧಗಳಿದ್ದು ಅವು ಜಲದುರ್ಗ, ಸ್ಥಳದುರ್ಗ, ಪಾಷಾಣದುರ್ಗ, ವನದುರ್ಗ, ಇಷ್ಟಕ ದುರ್ಗ, ಮೈತ್ರಿಕ ದುರ್ಗ, ನರದುರ್ಗ, ಮದುದುರ್ಗ, ಪ್ರಮುಖವೆನಿಸಿದೆ.[೨೦]

**ಯಲಬುರ್ಗ ಕೋಟೆ**

ಹನ್ನೊಂದರಿಂದ ಹದಿಮೂರನೇ ಶತಮಾನದವರೆಗೆ ಸಿಂದರು ಈ ಪ್ರದೇಶವನ್ನು ಮೊದಲು ಕಲ್ಯಾಣ ಚಾಲುಕ್ಯರ ಸಾಮಂತರಾಗಿ ನಂತರ ಕಲಚೂರಿಯರ ಸಾಮಂತರಾಗಿ ಆಳುತ್ತಿದ್ದರು. ಈ ಭಾಗವನ್ನು ಸಿಂದ ನಾಡು ಎಂದು ಕರೆಯುತ್ತಿದ್ದರು. ಇದರಲ್ಲಿ ಕಿಸುಕಾಡು ೭೦, ಕೆಳವಡಿ ೩೦೦ ಮತ್ತು ನರೆಯಂಗಲ್ಲ ೧೨, ವಿಭಾಗಗಳಿದ್ದವು ಕೆಲವೊಮ್ಮೆ ಕಿರಿವಿದಿ ೩೦, ಕುಂಟಿಗೆ ೭೦, ಮತ್ತು ಕುಕನೂರು ೩೦, ವಿಭಾಗಗಳು ಇದರಲ್ಲಿ ಸೇರಿದ್ದವು ಮೊದಲು ಇವರು ಪಟ್ಟದ ಕಲ್ಲಿನಿಂದ ನಂತರ ಯಲಬುರ್ಗಿಯಿಂದ ಆಳಿದರು. ಈ ಮನೆತನ ಯಲಬುರ್ಗಿಸಿಂದ ವಂಶವೆಂದೇ ಪ್ರಸಿದ್ಧವಾಯಿತು. [೨೧]

ಚಾಲುಕ್ಯರ ಅರಸ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ಹೊಯ್ಸಳ ಅರಸ ಒಂದನೇ ಬಲ್ಲಾಳನು ತುಂಗಭದ್ರವನ್ನು ದಾಟಿ ಚಾಲುಕ್ಯ ರಾಜ್ಯವನ್ನು ವಶಪಡಿಸಿಕೊಂಡನು. ಆಗ ವಿಕ್ರಮಾದಿತ್ಯನ ಸಾಮಂತನಾದ ಸಿಂದವಂಶದ ಎರಡನೇ ಆಚುಗಿ (ಕ್ರಿ.ಶ.೧೧೧೩–೧೧೨೫)ಯು ಬಲ್ಲಾಳನನ್ನು ಸೋಲಿಸಿದನು.[೨೨] ಬಲ್ಲಾಳನ ನಂತರ ಆಳ್ವಿಕೆಯನ್ನು ಕೈಗೆತ್ತಿಕೊಂಡ ವಿಷ್ಣುವರ್ಧನನು. ತುಂಗಭದ್ರವನ್ನು ದಾಟಿ ಕಮ್ಮಟ ದುರ್ಗವನ್ನು ವಶಪಡಿಸಿಕೊಂಡನು[೨೩] ವಿಕ್ರಮಾದಿತ್ಯನ ಆದೇಶದ ಮೇರೆಗೆ ಸಿಂದ ಆಚುಗಿ ಮತ್ತು ಅವನ ಮಗ ಪೆರ್ಮಾಡಿ ಹೊಯ್ಸಳರೊಂದಿಗೆ ಹೋರಾಡಿದರು ಕ್ರಿ.ಶ.೧೧೨೨ ಪೆರ್ಮನು ದ್ವಾರಸಮುದ್ರವನ್ನು ವಶಪಡಿಸಿಕೊಂಡು ವಿಷ್ಣುವರ್ಧನನ್ನು ಬೇಲೂರುವರೆಗೆ ಅಟ್ಟಿಸಿಕೊಂಡು ಹೋಗಿ ಅದನ್ನು ವಶಪಡಿಸಿಕೊಂಡನು.[೨೪]

ಹೊಯ್ಸಳ ಅರಸ ಬಲ್ಲಾಳನು ಗೆದ್ದ ಕುರುಗೋಡು, ದೇರವಡಿ, ಬಳ್ಳಾರಿ, ಹಾಲವಿ, ಮಾನವಿ, ಲೊಕ್ಕಿಗುಂಡಿ ಮುಂತಾದ ಕೋಟೆಗಳ ಪಟ್ಟಿಯಲ್ಲಿ ಯಲಬುರ್ಗವೂ ಕಾಣುತ್ತದೆ.[೨೫] ಆದುದರಿಂದ ಇಲ್ಲಿದ್ದ ಕೋಟೆಯು ಬಲಿಷ್ಠವು ಮತ್ತು ಪ್ರಸಿದ್ದಪಡೆದದ್ದೂ ಆಗಿದ್ದಿತು. ಈ ಕೋಟೆಯನ್ನು ವಶಪಡಿಸಿಕೊಂಡ ನಂತರ ಕ್ರಿ.ಶ.೧೧೯೫–೯೬ರಲ್ಲಿ ಬಲ್ಲಾಳನು ಇಲ್ಲಿಂದಲೇ ಆಳುತ್ತಿದ್ದನೆಂದು ಶಾಸನಗಳು ಉಲ್ಲೇಖಿಸುತ್ತವೆ[೨೬] ಇಂತಹ ಪ್ರಸಿದ್ಧಿವಾದ ಕೋಟೆಯ ಅವಶೇಷಗಳು ಈಗ ಉಳಿದಿಲ್ಲ.

## ಅಡಿಟಿಪ್ಪಣಿಗಳು

೧. ವಾಸುದೇವನ್ ಸಿ.ಎಸ್, ಹಂಪಿ ಪರಿಸರದ ಕೆರೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪುಟ-೪
೨. ಅದೇ, ಪುಟ-೨೦
೩. ಸೂರ್ಯನಾಥ ಕಾಮತ್, ದೇವರ ಕೊಂಡಾರೆಡ್ಡಿ ಮತ್ತು ಜಗನ್ನಾಥ್ ಎಸ್, ಇತಿಹಾಸ ದರ್ಶನ, ಸಂಪುಟ-೭, ೧೯೯೨, ಪುಟ-೯೩
೪. ರಾಜಾರಾಮ್ ಹೆಗಡೆ (ಸಂ), ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ, ೨೦೦೨, ಪುಟ-೧೦೨
೫. ವಾಸುದೇವನ್ ಸಿ.ಎಸ್, ಪೂರ್ವೋಕ್ತ, ಪುಟ-೨೨
೬. ಅದೇ, ಪುಟ-೨೩
೭. ಅದೇ, ಪುಟ-೪೬
೮. ಅದೇ, ಪುಟ-೪೩
೯. ಅದೇ, ಪುಟ-೪೦
೧೦. ಪ್ರಜಾವಾಣಿ ದಿನ ಪತ್ರಿಕೆ, ಜುಲೈ ೧ ೨೦೦೦, ಕೊಪ್ಪಳ ಜಿಲ್ಲೆ
೧೧. ಅದೇ, ಜುಲೈ ೧ ೨೦೦೦
೧೨. ಅದೇ, ಜುಲೈ ೧ ೨೦೦೦
೧೩. ಅದೇ, ಜುಲೈ ೧ ೨೦೦೦
೧೪. ರಾಜಪ್ರಕಾಶನ, ವಾರಣಾಸಿ, ೧೯೧೬, ಪುಟ-೨೦೨
೧೫. ಲಕ್ಷ್ಮಣ ಅಳವಾದಿ, ಇತಿಹಸ ಕೋಶ-೩, ೧೯೯೮, ಪುಟ-೪೪
೧೬. ಗಿಲ್ಬರ್ಟ್ ಸಿಕ್ವೇರ್, ಪೂರ್ವ ಪ್ರಾಚೀನ ಇತಿಹಾಸ, ೨೦೦೪, ಪುಟ-೫೨
೧೭. ತಿಪ್ಪೇಸ್ವಾಮಿ ಎ.ಎಸ್.ರಕ್ಷಣಾವಾಸ್ತುಶಿಲ್ಪ ಚಿತ್ರದುರ್ಗ ಜಿಲ್ಲೆ, ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪುಟ-೧೧೧
೧೮. ಅದೇ, ಪುಟ-೧೧೧
೧೯. ಅದೇ, ಪುಟ-೧೧೨
೨೦. ಶಿರೂರ ಬಿ.ವ್ಹಿ, ಯಲಬುರ್ಗಿ ಸಿಂದರು, ೧೯೭೭ Gopal B.R, Minor Dynasties of South India Karnataka, p-109-116
೨೧. Desai P.B, Shrinivas H.Ritti and Gopal, A History of Karnataka, 1981, p-184
೨೨. ಅದೇ, ಪುಟ-೨೬೬
೨೪. ಅದೇ, ಪುಟ-೨೬೭
೨೫. ECV (Rev) Channaraypattana, 179, ii (Rev), S.B.457i MAr 1937, No-26, p-153-158
೨೬. MAR, 1939, No-17, ECV, Belur-204, Arsikere-5

ಅಧ್ಯಾಯ : ಐದು

# ಸಮಾಜ ಮತ್ತು ಸಂಸ್ಕೃತಿ

೫.೧. ಸಾಮಾಜಿಕ, ಧಾರ್ಮಿಕ, ಆರ್ಥಿಕ ಸ್ಥಿತಿಗತಿ
೫.೨. ಜಾತ್ರೆ ಮತ್ತು ಉತ್ಸವಗಳು
೫.೩. ಹಬ್ಬ-ಹರಿದಿನಗಳು
೫.೪. ನಂಬಿಕೆ ಮತ್ತು ಆಚರಣೆಗಳು

## ಅಧ್ಯಾಯ – ಐದು

# ಸಮಾಜ ಮತ್ತು ಸಂಸ್ಕೃತಿ

### ೫.೧. ಸಾಮಾಜಿಕ ವ್ಯವಸ್ಥೆ

ಪ್ರಾಣಿಗಳಂತೆ ಕಾಡು–ಮೇಡುಗಳಲ್ಲಿ ಅಲೆಯುತ್ತಿದ್ದ ಮಾನವ ಸಂಘಟಿತ ಬದುಕನ್ನು ಕಲಿತು ಒಂದೆಡೆ ನಿಂತ ನೆಲೆಯೇ ಸಮಾಜ. ಇದು ಮಾನವನ ಆಧ್ಯಾತ್ಮಿಕ ಪ್ರಗತಿ ಮತ್ತು ಸಾಂಸ್ಕೃತಿಕ ವಿಕಾಸಕ್ಕೆ ಬೇಕಾದ ಅಡಿಪಾಯ ಸ್ವಸ್ಥ್ಯ ಸಮಾಜಕ್ಕೆ ಪರಸ್ಪರ ಅರಿವು, ಸಹಕಾರ, ಸಹಬಾಳ್ವೆ, ಸಹನೆ, ಸಹಿಷ್ಣತೆ, ಕರುಣೆ, ನಿರ್ಮತ್ಸರದಂತಹ ಉದಾತ್ತ ಮಾನವೀಯ ಮೌಲ್ಯಗಳ ನಿರಂತರ ಅರಿವು, ಅನುಕೂಲದ ಉಳಿವಿಗೆ ನೆರವು, ಇದನ್ನೇ ಹಂಬಲಿಸಿದ ನಮ್ಮ ಪ್ರಾಚೀನ ಋಷಿ ಮುನಿಗಳು ವಿಶ್ವದ ಬಗ್ಗೆ ಕಳಕಳಿಯಿಂದ ಹೇಳಿದ ಮಾತೇ "ವಸುಧೈವಕ ಕುಟುಂಬಂ" ಎಂದಿದ್ದಾರೆ. ಈ ಮಾತು ಸಮಾಜದಲ್ಲಿ ಜೀವಂತಿಕೆ ಪಡೆಯುವುದು ಸುಲಭವೇನಲ್ಲ ಏಕೆಂದರೆ ಸಮಾಜ ಎಂಬುವುದು ಅಧ್ಯಯನಕ್ಕೂ ನಿಲುಕದ, ಅಳತೆಗೂ ಬಾರದ, ಅಂತರಾಳದ ಅನನ್ಯ ಜಟಿಲ ಪದರಗಳಿಂದಾಗಿರುವ ಸಂಕೀರ್ಣ ವ್ಯವಸ್ಥೆಯೇ ಸಾಮಾಜಿಕ ವ್ಯವಸ್ಥೆಯಾಗಿದೆ.[೧] ಇಂತಹ ಸಂಕೀರ್ಣವಾದ ಸಾಮಾಜಿಕ ವ್ಯವಸ್ಥೆಯ ಅಧ್ಯಯನವನ್ನು ಯಲಬುರ್ಗ ಪಟ್ಟಣದ ಚೌಕಟ್ಟಿಗೆ ಒಳಪಡಿಸುವ ಮೂಲಕ ತಿಳಿಯಬಹುದಾಗಿದೆ. "ಜನ್ಮತಾಜಾಯತೇ ಶೂದ್ರಃ ಸಂಸ್ಕಾರತ ದ್ವಿಜ ಉಚ್ಚತಾ" ಎಂಬಂತೆ ಮೂಲತಃ ಹುಟ್ಟಿನಲ್ಲಿ ಎಲ್ಲರೂ ಶೂದ್ರರಾಗಿಯೇ ಹುಟ್ಟುತ್ತಾರೆ. ಅನಂತರ ಜೀವನದಲ್ಲಿ ಸಂಸ್ಕಾರ ಹೊಂದಿದವರು ಬ್ರಾಹ್ಮಣತ್ವ (ದ್ವಿಜತ್ವ) ಪಡೆಯುತ್ತಾರೆ. ಇದು ಭಗವದ್ಗೀತೆಯ ಶ್ರೀಕೃಷ್ಣನ ವಾಣಿ, ಅಂದರೆ ಹುಟ್ಟಿನಿಂದ ಎಲ್ಲರೂ ಸರಿಸಮಾನರು ಕ್ರಮೇಣ ತಮ್ಮ ಗುಣ ಹಾಗೂ ವೃತ್ತಿಗನುಗುಣವಾಗಿ ವಿವಿಧ ವರ್ಗಗಳಾಗಿ ರೂಪಗೊಳ್ಳುತ್ತವೆ.[೨]

ಪ್ರಾಚೀನ ಭಾರತದ ಸಂದರ್ಭದಲ್ಲಿ ವ್ಯಕ್ತಿಗಳನ್ನು ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಅವರು ಕೈಗೊಳ್ಳುತ್ತಿದ್ದ ಉದ್ಯೋಗ ಮತ್ತು ವೃತ್ತಿಗಳ ಹಿನ್ನೆಲೆಯಲ್ಲಿ ಬ್ರಾಹ್ಮಣ, ಕ್ಷತ್ರೀಯ, ವೈಶ್ಯ, ಶೂದ್ರ ಎಂಬ ಸಾಹಿತ್ಯಿಕ ಕುರುಹುಗಳಿಂದ ಮನದಟ್ಟಾಗುತ್ತದೆ.[೩]

### ಬ್ರಾಹ್ಮಣರು

ಬ್ರಾಹ್ಮಣರು ವೇದಾಧ್ಯಯನಗಳಿಂದ ನಿಷ್ಕಲ್ಮಷವಾದ ಮನಸ್ಸಿನಿಂದ ಪರಮಾತ್ಮನ ಸೃಷ್ಠಿಯ ರಹಸ್ಯವನ್ನು ಪರಿಚಯ ಮಾಡಿಕೊಡುತ್ತ ತನ್ನ ತಪಸ್ಸಿನ ಜ್ಞಾನವನ್ನು ಲೋಕಹಿತಕ್ಕಾಗಿ ವಿನಿಯೋಗಿಸುತ್ತಿದ್ದ ಅವನನ್ನು ಪರಮಾತ್ಮನ ಮುಖದಿಂದ ಬಂದವನೆನ್ನುವರು. ಗುಲಬರ್ಗ ಪಟ್ಟಣದಲ್ಲಿ ಬ್ರಾಹ್ಮಣರು ಸಮಾಜದಲ್ಲಿ ಇತರ ವರ್ಗಗಳಿಗಿಂತಲೂ ಉನ್ನತವಾದ ಸ್ಥಾನವನ್ನು ಪಡೆದುಕೊಂಡಿದ್ದರು. ಅಲ್ಲದೇ ಸಮಾಜದಲ್ಲಿ ಗೌರವ ಮತ್ತು ಪೂಜನೀಯ ಸ್ಥಾನವನ್ನು ಹೊಂದಿದ್ದರು.

ಇವರು ಷಟ್ಕರ್ಮ ನಿರತರಾಗಿದ್ದು ಅಧ್ಯಯನ, ಇವುಗಳನ್ನು ಕಟ್ಟುನಿಟ್ಟನಿಂದ ಆಚರಿಸುತ್ತಿದ್ದರು. ಯಲಬುರ್ಗ ಪಟ್ಟಣದಲ್ಲಿ ಆಳ್ವಿಕೆ ಮಾಡಿದ ರಾಜಮನೆತನಗಳ ಕಾಲದಲ್ಲಿ ರಾಜರು, ಅಧಿಕಾರಿಗಳು, ಶ್ರೀಮಂತರು, ಬ್ರಾಹ್ಮಣರಿಗೆ ಭೂಮಿಯನ್ನು ದಾನ ನೀಡಿದ ಬಗ್ಗೆ ಶಾಸನಗಳು ಈ ಕೆಳಗಿನಂತಿವೆ.

ಕ್ರಿ.ಶ.೧೨೫೩ರಲ್ಲಿ ಸೇವಣ ಕನ್ನರ ದೇವನ ಪ್ರಧಾನಿಯಾಗಿದ್ದ ಚಾವುಂಡರಾಯ ಕುಕ್ಕನೂರನ್ನು ಅಗ್ರಹಾರವನ್ನಾಗಿ ಮಾಡಿ ಅಲ್ಲಿಯ ಬ್ರಾಹ್ಮಣರಿಗೆ ಸರ್ವಭಾದಾಪರಿಹಾರವಾಗಿ ದಾನ ಕೊಟ್ಟರು.[೩]

ಕ್ರಿ.ಶ.೧೧೨೭ರಂದು ಗಂಗಾಧರಯ್ಯ ನಾಯಕನ ಮಗ ಶ್ರೀಪತಿ ನಾಯಕನು ಕುಕ್ಕನೂರು ಅಗ್ರಹಾರದ ಸಾವಿರ ಮಹಾಜನರ ಕೈಯಲ್ಲಿ ಸರ್ವಸಮಸ್ಯವಾಗಿ ಪಡೆದು ಶ್ರೀ ಮೂಲಸ್ಥಾನ ದೇವರ ಸ್ಥಾನದಲ್ಲಿ ಬ್ರಾಹ್ಮಣರ ಭೋಜನಕ್ಕಾಗಿ ಅಲ್ಲಿನ ಸತ್ರಕ್ಕೆ ತಮ್ಮ ಭಾಗದ ೫ ಮತ್ತರನ್ನು ಭೂಮಿಯನ್ನು ಬಿಡುತ್ತಾರೆ.[೪]

ಕ್ರಿ.ಶ.ಸು.೧೧೫೭ರ ಮಂಗಳವಾರಲ್ಲಿ ೩.೬. ಶಾಸನಗಳು ಮೂಲಸ್ಥಾನ ದೇವರ ಅಗ್ರಾಸನ ಭೋಜನದಲ್ಲಿ ನಿತ್ಯವೂ ನಾಲ್ವರೂ ಬ್ರಾಹ್ಮಣರಿಗೆ ಊಟ ಮಾಡಲು ಹೆಗ್ಗೆರೆಯಲ್ಲಿ ೬ ಮತ್ತರು ಹಾಗೂ ೪೫೦ ತಮ್ಮ ಭೂಮಿಯನ್ನು ದಾನ ಮಾಡುತ್ತಾರೆ.[೫]

### ಕ್ಷತ್ರಿಯರು

ಕ್ಷತ್ರಿಯರು ಧೈರ್ಯ-ಸ್ಥೈರ್ಯ, ಸಾಹಸ, ತೇಜಸ್ಸು ಗುಣಗಳಿಗೆ ಪ್ರಸಿದ್ಧರಾಗಿದ್ದರು. ಭುಜ ಬಲದ ಪರಾಕ್ರಮಗಳಿಗೆ ಸುಪ್ರಸಿದ್ದರಾದವರು. ತಮ್ಮ ಶಕ್ತಿ ಸಾಮರ್ಥ್ಯಗಳಿಂದ ಸಮಾಜವನ್ನು ರಕ್ಷಿಸಿ ಎಲ್ಲೆಯನ್ನು (ಗಡಿ) ವಿಸ್ತರಿಸಿಕೊಳ್ಳುತ್ತ ತಮ್ಮ ಪ್ರಾಣವನ್ನು ಪಣಕಿಟ್ಟು ಹೋರಾಟ ಮಾಡುತ್ತಿದ್ದರು. 'ಸತ್ತರೆ ಸ್ವರ್ಗ-ಗೆದ್ದರೆ ರಾಜ್ಯ' ಎಂಬ ವೀರ ಉಕ್ತಿಯಂತೆ ನಡೆಯುವವರಾಗಿದ್ದರು. ಇವರು ಅಂದಿನ ಸಮಾಜದ ಬೆನ್ನೆಲುಬಾಗಿದ್ದರು. ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ರಕ್ಷಿಸುವುದು, ಅಶಕ್ತರಿಗೆ ಆಶ್ರಯ ನೀಡುವುದು, ಕಷ್ಟಸಹಿಷ್ಣುತೆಗಳಲ್ಲಿ ಬಾಗಿಯಾಗುವುದು ಕ್ಷತ್ರಿಯರ ಮಾನವೀಯ ಅಂಶಗಳಾಗಿದ್ದವು.

### ವೈಶ್ಯರು

ಪ್ರಾಚೀನ ಕಾಲದಲ್ಲಿ ವೈಶ್ಯರು ಸಮಾಜದ ವರ್ಣವ್ಯವಸ್ಥೆಯಲ್ಲಿ ಮೂರನೇ ಸ್ಥಾನವನ್ನು ಪಡೆದಿದ್ದರು. ವೈಶ್ಯರು ವ್ಯಾಪಾರಿಗಳಾಗಿದ್ದುಕೊಂಡು ಆರ್ಥಿಕ ವ್ಯವಸ್ಥೆಯನ್ನು ನಿಯಂತ್ರಿಸುತ್ತಿದ್ದರು.

ವ್ಯಾಪಾರವೇ ಇವರ ಪ್ರಮುಖ ವೃತ್ತಿಯಾಗಿದ್ದು, ವ್ಯಾಪಾರಿಗಳ ಬಗ್ಗೆ ಶಾಸನ. ಉಲ್ಲೇಖಿಸುತ್ತದೆ. ತಾಲೂಕಿನಲ್ಲಿ ದೊರೆತ ಶಾಸನದಲ್ಲಿ ಮಿಂಡಗುದಲಿಯ ಕೇತಿಸೆಟ್ಟಿಯ ಮಗ ಮಲ್ಲಿಸೆಟ್ಟಿಯು ಪಾರ್ಶ್ವನಾಥ ದೇವರ ವಿಗ್ರಹವನ್ನು ಮಾಡಿಸಿ ಎರಂಬರಿಗೆಯ ನಗರ ಜಿನಾಲಯಕ್ಕೆ ಕೊಟ್ಟದ್ದನ್ನು ತಿಳಿಸುತ್ತದೆ.[೬]

ಪ್ರಸ್ತುತವಾಗಿ ಈಗಲು ಸಹ ಯಲಬುರ್ಗಪಟ್ಟಣದಲ್ಲಿ ವೈಶ್ಯರು (ವ್ಯಾಪಾರಿ ವರ್ಗ) ಹೆಚ್ಚಿನ ಸಂಖ್ಯೆಯಲ್ಲಿ ವರ್ತಕರ ಸಂಘವನ್ನು ಸ್ಥಾಪಿಸಿಕೊಂಡಿದ್ದಾರೆ. ಇವರಲ್ಲಿ ಗಾಣಿಗಶೆಟ್ಟರು, ಬಣಜಿಗರ ಶೆಟ್ಟರು, ಬಂಜಾರಶೆಟ್ಟರು, ಕೆಮ್ಮಶೆಟ್ಟರು ಎಂಬುದಾಗಿ ಸಮಾಜದಲ್ಲಿ ಗುರ್ತಿಸಿಕೊಂಡಿದ್ದಾರೆ.

**ಶೂದ್ರರು**

ಪ್ರಾಚೀನ ಸಮಾಜದಲ್ಲಿ ಕಂಡು ಬರುವ ನಾಲ್ಕನೇ ವರ್ಗವೇ ಶೂದ್ರರು ಈ ವರ್ಗವು ಬಹುದೊಡ್ಡ ಗುಂಪಾಗಿತ್ತು. ವರ್ಣಗಳಲ್ಲೇ ಶ್ರೇಷ್ಠರೆಂದು ಗುರುತಿಸಿಕೊಂಡಿದ್ದ ಬ್ರಾಹ್ಮಣವರ್ಗ, ಸಮಾಜದಲ್ಲಿ ಆಳ್ವಿಕೆಯ ಸೂತ್ರವನ್ನೇ ಕೈಯಲ್ಲಿ ಹಿಡಿದ ಕ್ಷತ್ರೀಯರು ಮತ್ತು ವೈಶ್ಯರೆಂದು ಕರೆದುಕೊಳ್ಳುತ್ತಿದ್ದ ವ್ಯಾಪಾರ ವರ್ಗಗಳನ್ನು ಬಿಟ್ಟರೆ ಉಳಿದ ಎಲ್ಲಾ ಜಾತಿಗಳನ್ನು ಶೂದ್ರರು ಎಂದು ಕರೆಯುತ್ತಿದ್ದರು.

ಉದಾ:- ಅಕ್ಕಸಾಲಿಗರು, ಮಡಿವಾಳರು, ಕುಂಬಾರರು, ಕಮ್ಮಾರರು, ಬಡಿಗಿಗಳು, ಚಮ್ಮಾರರು, ನೇಕಾರರು, ಕೃಷಿಕರು ಮುಂತಾದವರು ಶೂದ್ರ ವರ್ಗಕ್ಕೆ ಸೇರುತ್ತಾರೆ. ಶೂದ್ರರು ಸಾಮಾಜಿಕವಾಗಿ ಕೆಳಸ್ತರದಲ್ಲಿದ್ದು, ಉಳಿದ ವರ್ಣದವರು ಮಾಡದೇ ಬಿಟ್ಟ ಕೆಲಸಗಳನ್ನು ನಿರ್ವಹಿಸುತ್ತಿದ್ದರು. ಇವರು ಇನ್ನೊಬ್ಬರ ಆಶ್ರಯದಲ್ಲೇ ಇದ್ದುದ್ದರಿಂದ ಸ್ವತಂತ್ರವಾದ ಆಸ್ತಿ ಅಂತಸ್ತು ಇಲ್ಲದೆ ಬಡವರಾಗಿದ್ದರು. ಆದರೂ ಕೂಡ ತಮ್ಮ ಕೆಲಸವನ್ನು ಕೀಳೆಂದು ಪರಿಗಣಿಸಿರಲಿಲ್ಲ. ಶೂದ್ರರಿಗೆ ವೇದಗಳನ್ನು ಓದುವುದಕ್ಕಾಗಲಿ ಯಜ್ಞಯಾಗಗಳಲ್ಲಿ ಪಾಲ್ಗೊಳ್ಳುವುದಕ್ಕಾಗಲೀ ಅನುಮತಿ ಇರಲಿಲ್ಲ.

ಪ್ರಸ್ತುತ ಯಲಬುರ್ಗ ಪಟ್ಟಣದಲ್ಲಿ ಪ್ರಾಚೀನ ವರ್ಣ ವ್ಯವಸ್ಥೆ ಬದಲಾವಣೆಗೊಂಡಿದ್ದು, ಬ್ರಾಹ್ಮಣರು, ಲಿಂಗಾಯತರು ಮೇಲ್ವರ್ಗಕ್ಕೆ ಸೇರಿದ್ದು, ವೃತ್ತಿ ಪರ ಜನಾಂಗಗಳಾದ ಕಮ್ಮಾರರು, ಕುಂಬಾರರು, ಗಾಣಿಗರು, ಅಕ್ಕಸಾಲಿಗರು, ಉಪ್ಪಾರರು, ಅಗಸರು, ನೇಕಾರರು, ಗೊಲ್ಲರು, ಕುರುಬರು ಮತ್ತು ತಿಗಳರು ಸಮಾಜದಲ್ಲಿ ಮೇಲ್ವರ್ಗದವರೊಂದಿಗೆ ಹೊಂದಾಣಿಕೆಯಾಗಿದ್ದರು. ಕೆಳಸ್ತರದಲ್ಲಿ ವಡ್ಡರು, ಮಾದಿಗರು, ಹೊಲೆಯರು ಎಂಬ ಜನಾಂಗಗಳಿದ್ದು, ಇವರನ್ನು ಅಸ್ಪೃಶ್ಯರು ಎಂದು ಪರಿಗಣಿಸಿದ್ದಾರೆ.

**ಕುಟುಂಬ ವ್ಯವಸ್ಥೆ**

ಯಾವುದೇ ಒಂದು ಪ್ರದೇಶದಲ್ಲಿನ ಸಾಮಾಜಿಕ ಸ್ಥಿತಿಗತಿ ಅಥವಾ ವ್ಯವಸ್ಥೆಯನ್ನು ತಿಳಿಯಬೇಕಾದರೆ, ಅಲ್ಲಿನ ಕುಟುಂಬ ವ್ಯವಸ್ಥೆಯನ್ನು ತಿಳಿಯಬೇಕಾಗುತ್ತದೆ.

ಇಂತಹ ಕುಟುಂಬ ವ್ಯವಸ್ಥೆಯಲ್ಲಿ ತಂದೆ–ತಾಯಿ, ಸಹೋದರರು, ಅವರ ಪತ್ನಿಯರು, ಮಕ್ಕಳು, ಸೊಸೆಯರು, ಮೊಮ್ಮಕ್ಕಳು, ಅಜ್ಜ–ಅಜ್ಜಿ ಹೀಗೆ ಮೂರು ಇಲ್ಲವೆ ನಾಲ್ಕು ತಲೆಮಾರಿನ ಜನರು ಒಂದೇ ಮನೆಯಲ್ಲಿ ವಾಸಿಸುತ್ತಿದ್ದರು. ಪುರುಷ ಕುಟುಂಬದಲ್ಲಿ ಪ್ರಧಾನ ಪಾತ್ರವಹಿಸುತ್ತಿದ್ದನು. ಕುಟುಂಬದ ಸರ್ವ ಸದಸ್ಯರನ್ನು ಸಾಕಿಸಲುವುದು ಯಜಮಾನನ ಕರ್ತವ್ಯವಾಗಿತ್ತು. ಕುಟುಮಬದ ಹಿರಿಯರಿಗೆ ಎಲ್ಲರೂ ಗೌರವದಿಂದ ನಡೆಸಿಕೊಳ್ಳುತ್ತಿದ್ದರು. ಹಿರಿಯರು ಕಿರಿಯರಿಗೆ ಅಷ್ಟೇ ಪ್ರೀತಿ ವಾತ್ಸಲ್ಯ ತೋರಿಸುತ್ತಿದ್ದರು. ಪ್ರಸ್ತುತ ಯಲಬುರ್ಗ ಪಟ್ಟಣದಲ್ಲಿ ಅವಿಭಕ್ತ ಕುಟುಂಬಗಳು ಕಂಡುಬಂದರೂ ಅವುಗಳು ಹೆಚ್ಚಿನ ಸಂಖ್ಯೆಯಲ್ಲಿಲ್ಲಾ. ಇತ್ತೀಚಿನ ನಗರೀಕರಣದಿಂದ ಅವಿಭಕ್ತ ಕುಟುಂಬಗಳು ಕಣ್ಮರೆಯಾಗುತ್ತಿದ್ದು ಹೆಚ್ಚಾಗಿ ವಿಭಕ್ತ ಕುಟುಂಬಗಳೇ ಕಂಡುಬರುತ್ತವೆ. ಒಂದು ಮನೆಯಲ್ಲಿ ಗಂಡ–ಹೆಂಡ್ತಿ ಮಕ್ಕಳು ಸೇರಿ ೪–೫ ಜನ ಸದಸ್ಯರಿರುತ್ತಾರೆ. ಆದರೆ ಹಿಂದಿನ ಅವಿಭಕ್ತ ಕುಟುಂಬಗಳಲ್ಲಿ ೧೫–೨೦ಜನ ಸದಸ್ಯರಿಂದ ತುಂಬಿ ತುಳುಕುತ್ತಿತ್ತು. ಆದರೆ ಇತ್ತೀಚೆಗೆ ಅವಿಭಕ್ತ ಕುಟುಂಬಗಳು ಕಣ್ಮರೆಯಾಗುತ್ತಿವೆ.

**ಸ್ತ್ರೀಯರ ಸ್ಥಾನಮಾನ**

ಭಾರತೀಯ ಸಮಾಜದ ಸಾಮಾಜಿಕ ವ್ಯವಸ್ಥೆ ವೈವಿಧ್ಯತೆಯಿಂದ ಕೂಡಿದ್ದು, ವೈದಿಕ ಯುಗದಲ್ಲಿ ಸ್ತ್ರೀಯರ ಗೌರವಯುತವಾದ ಪೂಜ್ಯನೀಯ ಸ್ಥಾನವನ್ನು ಪಡೆದಿದ್ದರು. ಎಲ್ಲಿ ಸ್ತ್ರೀಯರನ್ನು ಪೂಜಿಸುತ್ತಾರೋ ಅಲ್ಲಿ ದೇವತೆಗಳು ವಾಸಿಸುತ್ತಾರೆ ಎಂಬ ಭಾವನೆಯಿದೆ. ಪುರುಷರಂತೆಯೇ ವಿದ್ಯಾರ್ಜನೆಗೂ ಅರ್ಹಳು. ಋಗ್ವೇದದಲ್ಲಿ ಹಲವು ಸ್ತ್ರೀಯರ ಹೆಸರುಗಳು ಕೇಳಿಬರುತ್ತವೆ. ಅಪಲಾ, ಲೋಪ, ಮುದ್ರ, ವಿಶ್ವಾವರಾ, ಘೋಷಾ, ಜುಷ್ಕಿ, ಗಾರ್ಗಿ ಮತ್ತು ಮೈತ್ರಿಯರು ವಿದ್ಯಾರ್ಜನೆಯಲ್ಲಿ ಪಾರಂಗತರಾಗಿದ್ದರು.

ಪ್ರಾಚೀನ ಕರ್ನಾಟಕದ ಸಾಂಸ್ಕೃತಿಕ ಸಮಾಜದ ಆದರ್ಶ ಸಂಸಾರಗಳಲ್ಲಿ ಒಳ್ಳೆಯ ಹೆಂಡತಿ ಮತ್ತು ಒಳ್ಳೆಯ ಸೊಸೆಗೂ ಉತ್ತಮ ಸ್ಥಾನವಿದ್ದರೂ ಹೆಣ್ಣು ಮಗು ಬಯಸಿ ಪಡೆಯುವ ಮಗುವಾಗಿರಲಿಲ್ಲ. ಏಕೆಂದರೆ ಹೆಣ್ಣು ಹೇಗಿದ್ದರೂ ಮನೆಯನ್ನು ಬಿಟ್ಟು ಹೋಗುವವಳು, ಗಂಡು ಮಕ್ಕಳು ಮನೆಯಲ್ಲಿಯೇ ಇದ್ದುಕೊಂಡು ತಮ್ಮ ದುಡಿಮೆಯಿಂದ ತಂದೆ–ತಾಯಿಗಳನ್ನು ಪೋಷಿಸುವವರು ಎಂಬ ಬಲವಾದ ನಂಬಿಕೆ ಇತ್ತು. ಆದರೆ ಮಗಳು ವಿಧವೆಯಾದಾಗ ಮಾಡಬೇಕಾದ ಸಹಗಮನ ಮಾಡುವ ಭಯವೂ ತಂದೆ ತಾಯಿಗಳಿಗೆ ಇತ್ತು, ಸ್ತ್ರೀಯರು ಶಿಕ್ಷಣ ಪಡೆಯಲು ಅನರ್ಹರೆಂದು ತಮ್ಮ ಜೀವನದುದ್ದಕ್ಕೂ ಪೋಷಕರಾಗಿಯೇ ಬಾಳಬೇಕೆಂದು ಸ್ಮೃತಿಗಳು ತಿಳಿಸಿಕೊಟ್ಟಿವೆ. ಯಲಬುರ್ಗದಲ್ಲಿ ದೊರೆತ ಕಾಲ ಉಲ್ಲೇಖವಿಲ್ಲದ ಶಾಸನದಲ್ಲಿ[೭] ಸ್ತ್ರೀಯೋರ್ವಳು ಪಾರ್ಶ್ವನಾಥ ಬಸದಿಯನ್ನು ಮಾಡಿಸಿದಂತೆ ತಿಳಿದುಬರುತ್ತದೆ.

ಚಾವುಂಡರಸನ ಪಟ್ಟದ ರಾಣಿ. ರಾಣಿದೇಮಲ ದೇವಿಯು ಮತ್ತು ಈಕೆಯ ಮಗ ಆಚರಸನು ಕುಮಾರ ವೃತ್ತಿಯಾಳ್ವಿಕೆಯ ಪಟ್ಟಣ ಪಟ್ಟದಕಿಸುವೊಳಲನ್ನಾಳುತ್ತಿದ್ದಾಗ ಕಿಸುವೊಳಲು ಶ್ರೀಮದು ವಿಜಯೇಶ್ವರ ದೇವರ್ಗೆ ಆಚಾರ್ಯರಿಗೆ ದಾನವಿತ್ತುದಾಗಿ ತಿಳಿದುಬರುತ್ತದೆ.[೮]

ಇನ್ನೊಂದೆಡೆಗ್ ಈಕೆಯನ್ನು "ತದೆರ್ದ್ಧಾಂಗ ರಾಜ್ಯ... ಭ್ಯುದಯ ಸಹಸ್ರ ಫಳಭೋಗಭಾಗಿನಿ" ಎಂದು ಕರೆಯಲಾಗಿದೆ. ಇದರಿಂದ ಈಕೆ ರಾಜ್ಯಭಾರದಲ್ಲಿ ಪ್ರತ್ಯಕ್ಷ ಭಾಗವಹಿಸಿದುದು ತಿಳಿದುಬರುತ್ತದೆ. ಮತ್ತು ಈಕೆ ಚಾವುಂಡರಾಯನಿಗೆ ಭಿನ್ನಹಮಾಡಿಕೊಂಡು ನೇಮಿಚಂದ್ರದೇವರಿಗೆ ಎರಂಬರಿಗೆ ಪಟ್ಟಣದೊಳು ದಾನವಿತ್ತುದಾಗಿ ತಿಳಿಯುತ್ತದೆ.

ಚಾವುಂಡರಸನ ಇನ್ನೊಬ್ಬ ಹೆಂಡತಿ ಲಕ್ಷ್ಮೀದೇವಿಯು ಕೂಡ ಸೊಂಡಿಹೊಸರು ಭಾಗವನ್ನು ಆಡಳಿತ ಮಾಡುತ್ತಿದ್ದ ಮತ್ತು ಆಡಳಿತದ ಅನುಕೂಲಕ್ಕಾಗಿ ಚಾಂವುಂಡರಸನು ತನ್ನ ಸಾಮ್ರಾಜ್ಯವನ್ನು ವಿವಿಧ ಭಾಗಗಳನ್ನಾಗಿ ಮಾಡಿ ತನ್ನ ಹೆಂಡಂದಿರಿಗೆ ಆಳ್ವಿಕೆ ಮಾಡಲು ಕೊಟ್ಟಿದ್ದನು ಎಂದು ತಿಳಿಯುತ್ತದೆ.

**ಧಾರ್ಮಿಕ ವ್ಯವಸ್ಥೆ**

ಯಾವುದೇ ಒಂದು ಪ್ರದೇಶದ ಅಧ್ಯಯನ ಮಾಡಬೇಕಾದರೆ ಅಲ್ಲಿನ ಧಾರ್ಮಿಕ ಸ್ಥಿತಿಗತಿ ಬಗ್ಗೆ ತಿಳಿದುಕೊಳ್ಳಬೇಕಾಗುತ್ತದೆ. ಧಾರ್ಮಿಕ ವ್ಯವಸ್ಥೆಯು ಆ ಪ್ರದೇಶದ ಸಂಸ್ಕೃತಿಯ ಅವಿಭಾಜ್ಯ ಅಂಗವೂ ಮತ್ತು ಜನರ ಜೀವನದ ಸಂಸ್ಕೃತಿಯ ಜೀವಾಳವೂ ಹೌದು, ಒಂದು ಸಮಾಜದಲ್ಲಿ ನೈತಿಕ ಜೀವನ ನಡೆಸುವಲ್ಲಿ ಧರ್ಮದ ಪಾತ್ರ ಬಹಳ ಪ್ರಮುಖವಾಗಿರುತ್ತದೆ. ಸಾಂಸ್ಕೃತಿಕ ಕೇಂದ್ರವಾಗಿದ್ದ ದೇವಾಲಯಗಳು ಮಾನವನ ಧಾರ್ಮಿಕ ಶ್ರದ್ಧೆ ಭಕ್ತಿ ಹಾಗೂ ಮತಧರ್ಮಗಳ ಕೇಂದ್ರಬಿಂದುಗಳಾಗಿ ಬೆಳೆದು ಬಂದಿವೆ. ಮಾನವ ಧರ್ಮವನ್ನು ಬಿಟ್ಟು ಬದುಕಲಾರ ಬೇರೆ ಬೇರೆ ಮತ ಧರ್ಮಗಳ ಸಮಾಜವನ್ನು ಪೋಷಿಸುತ್ತಾ ಮತ್ತು ಸಮಾಜದಿಂದ ಪೋಷಿಸಲ್ಪಡುತ್ತಾ ಬೆಳೆದು ಬಂದಿರುವುದನ್ನು ಎಲ್ಲಾ ಪ್ರದೇಶಗಳಲ್ಲಿ ಗಮನಿಸಿದಂತೆ ಯಲಬುರ್ಗಾ ಪಟ್ಟಣದ ವ್ಯಾಪ್ತಿಯಲ್ಲಿಯೂ ಕಾಣಬಹುದು. ಈ ಪ್ರದೇಶದಲ್ಲಿ ಶೈವಧರ್ಮ, ವೈಷ್ಣವ ಧರ್ಮವಿದ್ದರೂ, ಶೈವ ಧರ್ಮದ ಪ್ರಾಬಲ್ಯ ಹೆಚ್ಚು ಎಂಬುದನ್ನು ಇಲ್ಲಿ ಕಟ್ಟಲಾಗಿರುವ ದೇವಾಲಯಗಳಿಂದ ತಿಳಿದುಕೊಳ್ಳಬಹುದು. ಅಲ್ಲದೆ ಧಾರ್ಮಿಕ ತಿಕ್ಕಾಟಗಳು, ವಿರಸಗಳು ನಡೆದಿದ್ದವು ಎನ್ನುವುದಕ್ಕೆ ಈ ಪ್ರದೇಶದಲ್ಲಿ ಕಣ್ಮರೆಯಾಗಿರುವ ಜೈನ ಬಸದಿಗಳು ಸಾಕ್ಷಿ ಈ ಪ್ರದೇಶದಲ್ಲಿ ಮುಖ್ಯವಾಗಿ ಶೈವ ಮತ್ತು ವೈಷ್ಣವ ಧರ್ಮದ ಪ್ರಾಬಲ್ಯ ಕಾಣಬಹುದಾಗಿದೆ.

**ಶೈವ ಧರ್ಮ**

ಶೈವ ಧರ್ಮ ಎಂದರೆ ಶಿವನ ಆರಾಧನೆ ಮಾಡುವವರಾಗಿದ್ದು ಭರತ ಖಂಡದಲ್ಲಿ ಶೈವಧರ್ಮವು ಅತ್ಯಂತ ಪ್ರಾಚೀನವಾದ ಧರ್ಮಗಳಲ್ಲೊಂದು ಕರ್ನಾಟಕದಲ್ಲಿಯೂ ಪ್ರಾಚೀನ ಕಾಲದಿಂದಲೂ ಶೈವಧರ್ಮ ಆಚರಣೆಯಲ್ಲಿತ್ತು. ಶಿವನನ್ನು ಸ್ಥಿರವಾಗಿ ಪೂಜಿಸುವುದು ಮುಖ್ಯವಾಗಿ ಕಂಡು ಬರುತ್ತಿದ್ದು, ಪ್ರಸ್ತುತ ಅಧ್ಯಯನವಾದ ಯಲಬುರ್ಗಾ ಪಟ್ಟಣದಲ್ಲಿ ಶೈವಧರ್ಮ ತನ್ನ ಅಸ್ಥಿತ್ವವನ್ನು ಉಳಿಸಿಕೊಂಡು ಬಂದಿದೆ. ಇದಕ್ಕೆ ಈ ಪ್ರದೇಶದಲ್ಲಿ ಕಂಡುಬರುವ ಹೆಚ್ಚು ಶೈವ ಸಂಬಂಧಿ ದೇವಾಲಯಗಳೇ ಸಾಕ್ಷಿಯಾಗಿದೆ.

ಯಲಬುರ್ಗ ಪಟ್ಟಣದಲ್ಲಿ ಶಿವನ ಆರಾಧಕರು ಶಿವನನ್ನು ನಾನಾ ಹೆಸರುಗಳಿಂದ ಪೂಜಿಸುತ್ತಿರುವುದನ್ನು ಕಾಣಬಹುದು. ಅವುಗಳಲ್ಲಿ ಹುಲಿಕಂತಿಮಠ, ಮುತ್ತಿನ ಪೆಂಡೇಶ್ವರ, ಸಂಗಮೇಶ್ವರ, ಚೌಕಿಮಠ, ವೀರಭದ್ರೇಶ್ವರ, ಸಿದ್ಧೇಶ್ವರ ಮುಂತಾದ ಹೆಸರುಗಳಿಂದ ಕೂಡಿದ ಶೈವ ದೇವಾಲಯಗಳನ್ನು ಕಾಣಬಹುದು. ಶೈವಧರ್ಮದ ಮುಖ್ಯಕೇಂದ್ರ ಶಿವಾಲಯ ಇಂತಹ ಶಿವಾಲಯ ಮತ್ತು ಅದರ ಆಚಾರ್ಯರಿಗೆ ಸಿಂದ ವಂಶದ ೨ನೇ ಆಚರಸ ಕ್ರಿ.ಶ.೧೧೧೩–೧೧೨೨ ದೇವರಾಸಿ ಪಂಡಿತರಿಗೆ ಅಬ್ಬಿಗೇರಿಯ ಸೋಮೇಶ್ವರ ದೇವರಿಗಾಗಿ ಮಲ್ಲಿಕಾರ್ಜುನ ಪಂಡಿತರಿಗೆ ಕಿರಿಯ ನರಗದಲ್ಲಿನ ಮಲ್ಲೇಶ್ವರ ದೇವರಿಗಾಗಿ ದಾನವಿತ್ತುದಾಗಿ ಶಾಸನಗಳು ತಿಳಿಸುತ್ತವೆ.[೧೨]

ಕ್ರಿ.ಶ.೧೧೨೫–೧೧೪೪ರವರೆಗೆ ಆಳ್ವಿಕೆ ಮಾಡಿದ ಸಿಂದ ವಂಶದ ೧ನೇ ಪೆರ್ಮಾಡಿ ಇಲ್ಲಿಯ ಕಾಳಾಮುಖ ಯತಿಯಾದ ಕಳೇಶ್ವರ ಯತಿಯು ಯರಂಬರಗೆಯ ಚೌಂಡೇಶ್ವರ, ಸಿಂಗೇಶ್ವರ, ರಾಚೇಶ್ವರ, ವಿಕ್ರಮೇಶ್ವರ ದೇವಾಲಯಗಳ ಮದ್ವಾಚಾರ್ಯರಾಗಿದ್ದರು ಅವರಿಗೆ ೧ನೇ ಪೆರ್ಮಾಡಿ ದೇವ ಹಲವಾರು ದಾನದತ್ತಿ ನೀಡಿದನು ಎಂದು ತಿಳಿಯುತ್ತದೆ.[೧೩] ಈ ಮೇಲ್ಕಂಡ ಅಂಶಗಳನ್ನು ಗಮನಿಸಿದರೆ. ಯಲಬುರ್ಗ ಪಟ್ಟಣದಲ್ಲಿ ಶೈವಧರ್ಮದ ಬೆಳವಣಿಗೆ ರಾಜಮನೆತನದವರು ಹಾಗೂ ಜನ ಸಾಮಾನ್ಯರು ಪ್ರೋತ್ಸಾಹ ನೀಡಿದ್ದಾರೆಂದು ತಿಳಿದುಬರುತ್ತದೆ.

**ವೈಷ್ಣವ ಧರ್ಮ**

ಶೈವರು ಶಿವನನ್ನು ಆರಾಧಿಸಿದರೆ ವೈಷ್ಣವರು ವಿಷ್ಣುವನ್ನು ಆರಾಧಿಸುತ್ತಾರೆ. ಜಗತ್ತಿನ ರಕ್ಷಣೆಯು ಇವನ ಕಾರ್ಯವಾಗಿದೆ. ವೈದಿಕ ಧರ್ಮವು ವರ್ಣಾಶ್ರಮ ಧರ್ಮವನ್ನು ಯಜ್ಞಯಾಗಾದಿ ಪ್ರಕ್ರಿಯೆಗಳನ್ನು ಪುರಸ್ಕರಿಸಿದಷ್ಟೇ ಅದರ ಜೊತೆಗೆ ಬೆಳೆದು ಬಂದ ಇನ್ನೊಂದು ಧರ್ಮ ಭಾಗವತ, ಋಗ್ವೇದ ಕಾಲದಲ್ಲಿ ಅಪ್ರಧಾನ ದೇವತೆಯಾಗಿದ್ದ ವಿಷ್ಣುವು ಭಾಗವತ ಕಾಲದಲ್ಲಿ ಭಗವಂತನ ಸ್ಥಾನಕ್ಕೇರಿದ ಮೇಲೆ ಭಾಗವತ ಧರ್ಮಕ್ಕೆ ವೈಷ್ಣವ ಧರ್ಮ ಎಂಬ ಹೆಸರು ಪ್ರಾಪ್ತವಾಯಿತು.

ವಿಜಯನಗರ ಅರಸ ೨ನೇ ಹರಿಹರನು ಕುಕನೂರ ಅಗ್ರಹಾರವನ್ನು ಪುನಃ ಜೀರ್ಣೋದ್ಧಾರಗೊಳಿಸಿದ ಮತ್ತು ಹಲವಾರು ದಾನದತ್ತಿ ಬಿಟ್ಟನು[೧೪] ಇಟಗಿಯು ತಾಮ್ರಶಾಸನವೊಂದರಲ್ಲಿ ಕ್ರಿ.ಶ.೧೧೮೩ರಲ್ಲಿ ಕಲಚೂರಿ ಸಿಂಘಣದೇವ ಕುಕನೂರಿನ ಜೇಷ್ಠ ದೇವಿಗೆ ಬೆಳ್ವೊಲದಲ್ಲಿದ್ದ ಕುಕನೂರನ್ನು ಎಲ್ಲ ತೆರಿಗೆಗಳಿಂದ ಮುಕ್ತಗೊಳಿಸಿದ.[೧೫]

ಮುಧೋಳ ೧೦೦೦ ಮಹಾಜನರ ಒಂದು ಮಹಾ ಅಗ್ರಹಾರವಾಗಿತ್ತು ಇಲ್ಲಿ ೫೦೦ ಜನ ವ್ಯಾಪಾರಿಗಳು ಗವಿರೇಶ್ವರ ದೇವಾಲಯ ಕಟ್ಟಿಸಿ ಅದರ ಪೂಜಾ ಕಾರ್ಯಕ್ಕೆ ದಾನವನ್ನು ನೀಡಿದ್ದಾರೆ.[೧೬]

ಕ್ರಿ.ಶ.೧೧೦೮ರಲ್ಲಿ ಇಟಗಿಯು ೪೦೦ ಮಹಾ ಜನರಿರುವ ಅಗ್ರಹಾರವಾಗಿತ್ತು. ಮಹಾದೇವ ದಂಡನಾಯಕನು ದ್ರವ್ಯದಾನ ಪೂರ್ವಕವಾಗಿ ಬಿಟ್ಟ ದಾನದ ವಿವರವಿದೆ.[೧೭]

ಬಳಗೇರಾ ೩೦೦ ಜನ ಮಹಾಜನರಿರುವ ಅಗ್ರಹಾರವಾಗಿತ್ತು. ಇದನ್ನು ಬ್ರಹ್ಮಪುರಿ ಎಂತಲು ಕರೆಯಲಾಗಿದೆ. ಕ್ರಿ.ಶ.೧೦೦೨ರಲ್ಲಿ ಅಹವಮಲ್ಲನ ಸಾಮಂತನಾದ ಸೋಬನೇಶ್ವರ ಸೋಬನೇಶ್ವರ ದೇವಾಲಯ ಕಟ್ಟಿಸಿ ದೇವಾಲಯದ ಪೂಜಾಕಾರ್ಯಗಳಿಗೆ ದಾನದತ್ತಿ ಬಿಟ್ಟಿದ್ದನು[೮] ಇದರಿಂದ ಯಲಬುರ್ಗ ಪಟ್ಟಣದಲ್ಲಿಯು ವೈಷ್ಣವ ಪಂಥದ ಬೆಳವಣಿಗೆಗೆ ಕಾರಣವಾಗಿದೆ ಎನ್ನಬಹುದು.

**ಜೈನ ಧರ್ಮ**

ಪ್ರಾಚೀನ ಕಾಲದಲ್ಲಿ ಜೈನಧರ್ಮ ಈ ಪ್ರದೇಶದಲ್ಲಿ ನೆಲೆಯೂರಿರುವುದು. ಕೊಪ್ಪಳ ನಾಡನ್ನು ಎರಡನೇ ಜೈನಕಾಶಿ ಎಂದು ಕರೆಯುತ್ತಿರುವುದು. ಈ ನಾಡಿನಲ್ಲಿರುವ ಹಲವಾರು ಜೈನತೀರ್ಥಂಕರ ಮೂರ್ತಿಶಿಲ್ಪ, ಬಸದಿ ಮತ್ತು ಈ ಪ್ರದೇಶದಲ್ಲಿ ದೊರೆತಿರುವ ಶಾಸನಗಳು ಸ್ಪಷ್ಟಪಡಿಸುತ್ತವೆ. ಪ್ರಾಚೀನ ಕರ್ನಾಟಕದಲ್ಲಿ ಜೈನ ಧರ್ಮವು ಒಂದು ಪ್ರಬಲವಾದ ಧರ್ಮವಾಗಿತ್ತು. ದಕ್ಷಿಣ ಭಾರತದ ಜೈನ ಧರ್ಮ ಕರ್ನಾಟಕದ ಇತಿಹಸದೊಂದಿಗೆ ಬೆಳೆಯುತ್ತಾ ತನ್ನದೇ ಆದ ಇತಿಹಸವನ್ನು ನಿರ್ಮಿಸಿದೆ. ಸಾಹಿತ್ಯಗ್ರಂಥಗಳು ಮತ್ತು ಪುರಾತತ್ವ ಆಕರಗಳು ಜೈನಧರ್ಮವು ಸಾಂಸ್ಕೃತಿಕ ಕ್ಷೇತ್ರಕ್ಕೆ ಕೊಟ್ಟ ಕೊಡುಗೆಗಳನ್ನು ತಿಳಿಸುತ್ತದೆ. ಕರ್ನಾಟಕದಲ್ಲಿ ಜೈನಧರ್ಮವು ಉತ್ತರ ಭಾರತದಿಂದ ಬಂದ ಜೈನ ಗುರು ಭದ್ರಬಾಹು ಹಾಗೂ ಚಂದ್ರಗುಪ್ತ ಮೌರ್ಯನಿಂದ ಆರಂಭವಾಗುತ್ತದೆ. ಜೈನ ಧರ್ಮಕ್ಕೆ ಗಂಗರು ಮತ್ತು ಹೊಯ್ಸಳರು ಹೆಚ್ಚಿನ ಮಹತ್ವ ನೀಡುತ್ತಾರೆ. ಕಾರಣ ಜೈನಧರ್ಮದಲ್ಲಿ ಉತ್ತಮ ಗುಣಗಳಾದ ಶಾಂತಿ, ಮತ್ತು ಅಹಿಂಸೆ ಕರ್ನಾಟಕದಲ್ಲಿ ಪ್ರಮುಖ ಜೈನಧರ್ಮದ ಕೇಂದ್ರಗಳೆಂದರೆ ಶ್ರವಣಬೆಳಗೊಳ, ಕಾರ್ಕಳ, ಮೂಡಬಿದಿರೆ, ತುಮಕೂರು, ಹಾಸನದಲ್ಲಿ ಕಾಣಬಹುದಾಗಿದೆ. ಪ್ರಸ್ತುತ ಕೊಪ್ಪಳ, ಯಲಬುರ್ಗದಲ್ಲಿಯೂ ಜೈನರ ಸ್ಮಾರಕ ಮತ್ತು ಜೈನರ ಸಂತತಿ ಇದ್ದು, ಯಲಬುರ್ಗದಲ್ಲಿ ೫೦-೧೦೦ ಜನರಿದ್ದಾರೆ. ಜೈನರು ಶಾಖಾಹಾರಿಗಳು ಅವರ ಪ್ರಮುಖ ಉದ್ಯೋಗ ವ್ಯಾಪಾರವಾಗಿದ್ದು, ಸಮಾಜದ ಎಲ್ಲರೊಂದಿಗೂ ಹೊಂದಿಕೊಂಡು ಜೀವನ ನಡೆಸುತ್ತಿದ್ದಾರೆ.

ಯಲಬುರ್ಗದ ಶಾಸನ ಮಹಾಮಂಡಳೇಶ್ವರ ವಿಕ್ರಮಾದಿತ್ಯ ದೇವನ ಮಹಾಪ್ರಧಾನಿ ತಂತ್ರಾಧಿಷ್ಠಾಯಕ ದೇವಣಾರ್ಯ ನಾಯಕನು ಹಾಗೂ ಪುಣ್ಯಕಾಂತಿ ಚಲದಂಕರಾಮ ಸುಹಾದ್ರಿ ಮೂಲಸಂಘ ದೇಶಿ ದೇಶಿಯಗಣ ಚಿಂತಾಮಣಿ ಸಜ್ಜನ ಚೂಡಾಮಣಿ ನಾಯಕಿತಿ ಎಂಬ ಸಸ್ತ್ರೀಯು ಪ್ರಾಶ್ವನಾಥ ಚೈತ್ಸದ್ವಯಮನೆತಸಿದಳೆಂದು ಹೇಳಿದೆ.[೯] ಇದೇ ಸ್ಥಳದ ಕಾಲದ ಉಲ್ಲೇಖವಿಲ್ಲದ ಶಾಸನ ಮೂಲಸಂಘು ದೇಸಿಯ ಗಣದ ಮಾದಣದಂಡನಾಯಕ ಕಟ್ಟಿಸಿದ ಬಸದಿಗೆ ರಾಯರಾಜಗುರು ಮಂಡಳಾಚಾರ್ಯ ಮಾಹಾನಂದಿ ಸಿದ್ಧಾಂತಿ ಚಕ್ರವರ್ತಿಯ ಶಿಷ್ಯ ಕೊಪಣದ ತೀರ್ಥದ ಎಮ್ಮೆಯರ ಪ್ರಿಥಿಗೌಡ ಮತ್ತು ಆತನ ಪ್ರಿಯಾಂಗನೆ ಮೌತಾವ್ವೆಗೆ ಪುಟ್ಟಿದ ಬೋಪಣ್ಣನು ನೊಂಪಿನಿಮಿತ್ತ ಚಾವೀಸ್ (೪೨೦) ತೀರ್ಥಂಕರ ಬಿಂಬ ಮಾಡಿಸಿದಂತೆ ತಿಳಿಸುತ್ತದೆ.[೨೦]

ಕಾಲದ ಉಲ್ಲೇಖವಿಲ್ಲದ ಯಲಬುರ್ಗದ ಶಾಸನವು ಹೊಯ್ಸಳ ದೇಶ ಮತ್ತು ಕುಂತಳ ದೇಶದಗಳಲ್ಲಿ ಹೆಸರಾಗಿದ್ದ ದೇಶಿಯ ಗಣದ ರಾಮಾಚಾರ್ಯನು ನಲಮ್ಮಡಿ ಸಿಂಪುನ ಬಾಧೇಯಿಂದ ಎರಂಬರಗೆನಗರದಲ್ಲಿ ಹಾಳಾದ ಜಿನಾಲಯವನ್ನು ಜೀರ್ಣೋದ್ಧಾರ ಮಾಡಿ ಜೈನಧರ್ಮ ಉದ್ಧರಿಸಿದನು.[೨೧]

**ವೀರಶೈವ ಧರ್ಮ**

ಯಲಬುರ್ಗ ಪಟ್ಟಣದಲ್ಲಿ ಸುಮಾರು ೨೦ ಮಠಗಳಿವೆ, ಲಕುಲೀಶ ಪಾಶುಪತ, ಕಾಳಾಮುಖ ಪಂಥಕ್ಕೆ ಸೇರಿದ ರಾಜಗುರುಗಳ ಪರಂಪರೆ ಇಂದಿಗೂ ಇದೆ.

ಸಿಂದ ಅರಸು ಮನೆತನದ ರಾಜರಿಗೆ ಶಿಕ್ಷಾ ದೀಕ್ಷಾಚಾರ್ಯರೆಂದು ಕಳೇಶ್ವರ ಸಿದ್ಧಾಂತ ಚಕ್ರವರ್ತಿಗಳನ್ನು ಕರೆದಿರುವುದು.[೨೨]

ಸಿಂದರ ೨ನೇ ಆಚರಸ (ಕ್ರಿ.ಶ.೧೧೧೩-೧೧೨೫) ದೇವರಾಸಿ ಪಂಡಿತರಿಗೆ ಅಬ್ಬೀಗೇರೆಯ ಸೋಮೇಶ್ವರ ದೇವರಿಗಾಗಿ, ಮಲ್ಲಿಕಾರ್ಜುನ ಪಂಡಿತರಿಗೆ ನರೇಗಲ್ಲನ ಮಲ್ಲೇಶ್ವರ ದೇವಾರಿಗಾಗಿ ದಾನವಿತ್ತಿದ್ದು.[೨೩]

ಇಂದಿಗೂ ಕೂಡ ಸಂಸ್ಥಾನ ಹಿರೇಮಠ ಮತ್ತು ಶ್ರೀ ಧರಮುರುಡಿ ಮಠಗಳು ವೀರಶೈವ ಧರ್ಮವನ್ನು ಪಟ್ಟಣದ ಸುತ್ತಮುತ್ತ ಅನೇಕ ಗದ್ದಿಗೆಗಳು ಮಠಗಳನ್ನು ಸ್ಥಾಪಿಸುವುದರ ಮೂಲಕ ಧರ್ಮ ಪ್ರಚಾರ ಮಾಡುತ್ತಿವೆ.

**ಇಸ್ಲಾಂ ಧರ್ಮ**

ಯಲಬುರ್ಗ ಪಟ್ಟಣದಲ್ಲಿ ಇಸ್ಲಾಂ ಧರ್ಮವು ವ್ಯಾಪಕವಾಗಿ ಬೆಳೆದಿದ್ದು. ಹಿಂದುಗಳನ್ನು ಬಿಟ್ಟರೆ ಮುಸಲ್ಮಾನ ಬಾಂದವರೆ ಹೆಚ್ಚಾಗಿದ್ದಾರೆ. ತಮ್ಮ ಧಾರ್ಮಿಕ ವಿಧಿವಿಧಾನಗಳನ್ನು ಆಚರಣೆ ಮಾಡಲು ಮಸೀದಿಗಳು, ದರ್ಗಾಗಗಳನ್ನು ಕಟ್ಟಿಕೊಂಡು ಹಲವಾರು ನಂಬಿಕೆ ಆಚರಣೆಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ. ಯಲಬುರ್ಗ ಪಟ್ಟಣದಲ್ಲಿ ಹಿಂದೂ ಮತ್ತು ಮುಸಲ್ಮಾನ ಬಾಂಧವರು ಯಾವುದೇ ಕೋಮುಗಲಬೆ ಇಲ್ಲದೆ ಅನ್ಯೋನ್ಯವಾಗಿದ್ದು, ಯಾವುದೇ ಬೇಧಭಾವ ಇಲ್ಲದೆ ಮೋಹರಂ, ಉರುಸ್ ಆಚರಣೆಯಲ್ಲಿ ಭಾಗವಹಿಸುತ್ತಾ ಧಾರ್ಮಿಕ ಸೌಹಾರ್ದತೆಯಿಂದಿದ್ದಾರೆ..

**ಕ್ರಿಶ್ಚಿಯನ್ ಧರ್ಮ**

ಬ್ರಿಟೀಷರು ಕ್ರೈಸ್ತ ಮಿಷನರಿಗಳಿಗೆ ನೀಡಿದ ಪ್ರೋತ್ಸಾಹ ಮತ್ತು ಸಹಕಾರದಿಂದ ಭಾರತದ ನಾನಾ ಕಡೆಗಳಲ್ಲಿ ಚರ್ಚ್ ಮತ್ತು ಕ್ರೈಸ್ತ ಮಿಷನ್‌ಗಳನ್ನು ಆರಂಭಿಸುವಲ್ಲಿ ಯಶಸ್ವಿಯಾದರೂ ಮುಖ್ಯವಾಗಿ ಕರ್ನಾಟಕದಲ್ಲಿ ಕ್ರೈಸ್ತ ಮಿಷನರಿಗಳು ಶಾಲಾ ಕಾಲೇಜುಗಳನ್ನು ತೆರೆದು ಇಂಗ್ಲೀಷ್ ಶಿಕ್ಷಣವನ್ನು ಜನಪ್ರಿಯಗೊಳಿಸಿ ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ವಲಯದಲ್ಲಿ ಸಂಚಲನ ಮೂಡಿಸಿವೆ. ಪ್ರಸ್ತುತ ಯಲಬುರ್ಗ ಪಟ್ಟಣದಲ್ಲಿಯ ಕ್ರೈಸ್ತ ಧರ್ಮ ಎಳಿಗೆಯಲ್ಲಿದ್ದು

ಶಿಕ್ಷಣ ಕೇಂದ್ರಗಳನ್ನು ಆಸ್ಪತ್ರೆಗಳನ್ನು ತೆರೆದು ಜನಯುತ ಕಾರ್ಯಗಳಲ್ಲಿ ತೊಡಗಿದ್ದು, ಕ್ರಿಶ್ಚಿಯನ್ ಧರ್ಮವನ್ನು ವ್ಯಾಪಕವಾಗಿ ಬೆಳೆಸುತ್ತಿದೆ.

**ಆರ್ಥಿಕ ವ್ಯವಸ್ಥೆ**

ಯಲಬುರ್ಗಪಟ್ಟಣದ ಶಾಸನಗಳಲ್ಲಿ ಆರ್ಥಿಕ ಅಂಶಗಳ ಬಗ್ಗೆ ಉಲ್ಲೇಖವಿದ್ದು, ಅಂದಿನ ಕಾಲದ ಆರ್ಥಿಕ ಸ್ಥಿತಿಗತಿಯ ಮೇಲೆ ಬೆಳಕು ಚೆಲ್ಲುತ್ತವೆ. ಇಲ್ಲಿನ ಬಹುತೇಕ ಶಾಸನಗಳೆಲ್ಲವೂ ಭೂ ಧಾನಕ್ಕೆ ಸಂಬಂಧಿಸಿವೆ. ಇದರಿಂದ ದಾನವಾಗಿ ಕೊಡುವ ವಸ್ತುಗಳಲ್ಲಿ ಭೂಮಿ ಶ್ರೇಷ್ಠವಾದ ವಸ್ತುವಾಗಿತ್ತೆಂದು ಮನದಟ್ಟಾಗುತ್ತದೆ. ಅಲ್ಲದೇ ಅಂದು ವ್ಯವಸಾಯವೇ ಜೀವನೋಪಾಯದ ಪ್ರಮುಖ ಉದ್ಯೋಗವಾಗಿತ್ತೆಂಬ ವಿಚಾರ ಸ್ಪಷ್ಟವಾಗುತ್ತದೆ. ವ್ಯವಸಾಯ ಮಾಡುತ್ತಿದ್ದ ರೈತನನ್ನು ಒಕ್ಕಲು ಮಕ್ಕಳು ಎಂದು ಕರೆಯಲಾಗುತ್ತಿತ್ತು. ಮಳೆಯಾಶ್ರಯದಲ್ಲಿ ಬೆಳೆಯುತ್ತಿದ್ದ ಖುಷ್ಕಿ ಭೂಮಿಯನ್ನು ಹೊಲ, ಬದಲು ದೇವಮಾತೃಕೆ ಎಂತಲೂ, ನದಿ, ಕೆರೆ, ಕಟ್ಟೆ, ಕಾಲುವೆ ನೀರಿನಿಂದ ಬೆಳೆಯುತ್ತಿದ್ದ ನೀರಾವರಿ ಅಥವಾ ನಿರಾರಂಭ ಎಂತಲೂ ತರಿಭೂಮಿಯನ್ನು ಗದೆ ಎಂದು ಕರೆಯಲಾಗಿದೆ. ಎತ ಗೊಡಗೊಯ್ಯಲು ಕಪಿಲೆ ಸಹಾಯದ ನೀರಿನಿಂದ ಬೆಲೆಯುತ್ತಿದ್ದ ಭಾಗಾಯ್ತು ಭೂಮಿಯನ್ನು ತೋಟ ತುಡಿಕೆಯ ಭೂಮಿ ಎಂದು ಕರೆಯಲಾಗಿದೆ.

**ಅಳತೆ ಮತ್ತು ತೂಕ**

ಪ್ರಾಚೀನ ಕಾಲದಿಂದಲೂ ಶಾಸನಗಳಲ್ಲಿ ಅಳತೆ ಮತ್ತು ತೂಕದ ಬಗ್ಗೆ ಉಲ್ಲೇಖ ಸಿಗುತ್ತದೆ. ಯಲಬುರ್ಗ ಪ್ರದೇಶವು ಪ್ರಾಚೀನ ಕಾಲದಿಂದಲೂ ವ್ಯಾಪಾರ ಕೇಂದ್ರವಾಗಿತ್ತು. ಯಾವುದೇ ವಸ್ತುವನ್ನು ಮಾರಾಟ ಮಾಡಲು ಮತ್ತು ಕೊಂಡುಕೊಳ್ಳಲು ಒಂದು ನಿರ್ದಿಷ್ಟ ಸ್ಥಳದಲ್ಲಿ ಸಂತೆಗಳು ನಡೆಯುತ್ತಿದ್ದವು. ಇಂತಹ ಸಂತೆಗಳಲ್ಲಿ ವಸ್ತುಗಳನ್ನು ಮಾರಾಟ ಮಾಡಲು ಕೊಂಡುಕೊಳ್ಳಲು ವಿವಿಧ ಅಳತೆ ಮಾಪನಗಳಿದ್ದವು ಖಂಡಗ, ಪಂಚಕ, ಕೊಳಗ, ಬಳ್ಳ, ಮಾನ, ಸೊಲ್ಲಿಗೆ, ಭಾಗ, ತೊಲ, ಬಡಸುಗೆ, ಫಲ, ಕರ್ಷ ಮುಂತಾದ ಮಾನೆಗಳ ಬಗ್ಗೆ ಶಾಸನಗಳು ತಿಳಿಸುತ್ತದೆ.

**ದಾನ್ಯದ ಅಳತೆ**

೧ ಖಂಡಗ–೪ಪಂಚಕ, ೧ಪಂಚಕ–೫ಕೊಳಗ, ೧ಕೊಳಗ–೪ಬಳ್ಳ, ೪ಬಳ್ಳ–೪ಮಾನ, ೧ಮಾನ–೪ಸೊಲ್ಲಿಗೆ, ೧ಸೊಲ್ಲಿಗೆ–೪ಗದ್ದಿಗೆ, ೧ಭಾಗ–೨೦ತೊಲ, ೧ತೊಲ–೫ಬೆಸುಗೆ, ೧ಬೆಸುಗೆ–೨೦ಫಲ, ೧ ಫಲ–೪ಕರ್ಷ, ೧ಕರ್ಷ–೪ಸುವರ್ಣ.[೨೪]

**ನಾಣ್ಯ ಪದ್ಧತಿ**

ಪ್ರಾಚೀನ ಕಾಲದಿಂದ ಎಲ್ಲಾ ಪ್ರದೇಶದಲ್ಲಿಯೂ ವಸ್ತು ವಿನಿಮಯ ಪದ್ಧತಿ ಕಂಡುಬರುತ್ತಿತ್ತು. ತಮ್ಮಲ್ಲಿ ಇರುವ ವಸ್ತುಗಳನ್ನು ತಮಗೆ ಬೇಕಾದ ವಸ್ತುಗಳು ಇರುವವರಿಗೆ ನೀಡಿ ಅವರಲ್ಲಿ ಇದ್ದಂತಹ ವಸ್ತುಗನ್ನು ವಿನಿಮಯ ಮಾಡಿಕೊಳ್ಳುತ್ತಿದ್ದರು. ನಂತರ ಕಾಲಮಾನದಲ್ಲಿ ನಾಣ್ಯಪದ್ಧತಿ, ಕಾಣಿಸಿಕೊಂಡಿತು. ಒಂದು ಪ್ರದೇಶದಲ್ಲಿ ಬಳಕೆಯಾಗುತ್ತಿದ್ದ ನಾಣ್ಯಗಳಿಂದ ಆ ಪ್ರದೇಶದ ಆರ್ಥಿಕ ಪ್ರಗತಿಯ ಪ್ರತಿಬಿಂಬವನ್ನು ತಿಳಿಯಬಹುದಾಗಿದೆ.

ಪ್ರಾಚೀನ ಕಾಲದಿಂದ ಬೆಳ್ಳಿ, ಚಿನ್ನ, ತಾಮ್ರದ ಲೋಹದಿಂದ ಅಚ್ಚು ಹಾಕಿಸುತ್ತಿದ್ದರು. ಅಂದಿನ ಕಾಲದ ಚಲಾವಣೆಯ ನಾಣ್ಯಗಳೆಂದರೆ, ಕಾಣಿ, ಮೀಸ, ಹಾಗ, ಪಣ, ವರಹ ಹೊನ್ನು ಗದ್ಯಾಣಗಳು ಚಲಾವಣೆಯಲ್ಲಿದ್ದು, ನಾಣ್ಯಗಳು ಅಂದಿನ ಕಾಲದ ಆರ್ಥಿಕ ಸ್ಥಿತಿಗತಿಯ ಬಗ್ಗೆ ಸ್ಪಷ್ಟ ಮಾಹಿತಿಯನ್ನು ನೀಡುತ್ತದೆ.[೨೫]

**ಸಾರಿಗೆ ಮತ್ತು ಸಂಪರ್ಕ**

ಯಲಬುರ್ಗ ಪ್ರದೇಶದ ಬಯಲು ಸೀಮೆಯಾಗಿದ್ದರಿಂದ ಸಾರಿಗೆ ಸಂಪರ್ಕ ಸುಗುಮವಾಗಿತ್ತು. ವಸ್ತುಗಳನ್ನು ಸಾಗಿಸಲು ಎತ್ತಿನಗಾಡಿ ಮತ್ತು ಪ್ರಾಣಿಗಳನ್ನು ಬಳಸುತ್ತಿದ್ದರು. ಹಾಗೂ ಇಲ್ಲಿನ ಜನರು ಹೆಚ್ಚು ಕಾಲುನಡಿಗೆಯ ಮೂಲಕವೇ ಸಂಚರಿಸುವ ಜನರಾಗಿದ್ದರು. ಬಂಡಿ ಅಥವಾ ಎತ್ತಿನ ಗಾಡಿಗಳು ಉತ್ತಮ ಸಂಚಾರಿ ವಾಹನವಾಗಿದ್ದಂತೆ ಸರಕು ಸಾಗಾಣಿಕೆಯ ಸಾಧನವಾಗಿ ಪ್ರಾಚೀನ ಕಾಲದಿಂದಲೂ ಕಂಡುಬರುತ್ತದೆ. ಯಲಬುರ್ಗ ಪಟ್ಟಣವು ವ್ಯಾಪಾರ ಕೇಂದ್ರವಾಗಿದ್ದರಿಂದ ಸಂಪರ್ಕ ಕಲ್ಪಿಸುವ ಅನೇಕ ರಸ್ತೆಗಳು ಕಂಡು ಬರುತ್ತವೆ.

**೫.೪. ನಂಬಿಕೆ ಮತ್ತು ಆಚರಣೆಗಳು**

ಪ್ರಾಚೀನ ಕಾಲದಿಂದಲೂ ಮಾನವ ತನ್ನ ಬದುಕಿನ ಉನ್ನತ ಶ್ರೇಯಸ್ಸಿಗಾಗಿ ಅಥವಾ ರೋಗ ನಿವಾರಣೆಗಾಗಿ ಇಲ್ಲವೆ ತನ್ನ ದಿನನಿತ್ಯದ ಕಾರ್ಯಚಟುವಟಿಕೆಗಳು ಸುಗಮವಾಗಿ ನಡೆಯುವಂತೆ ತನಗೆ ಸಂಬಂಧಿಸಿದ ಅಗೋಚರ ಶಕ್ತಿ ಆರಾಧನೆಯಲ್ಲಿ ಪೂಜಾ ವಿಧಿವಿಧಾನಗಳು, ಜಾತ್ರೆ-ಉತ್ಸವಗಳು, ನಂಬಿಕೆ ಮತ್ತು ಆಚರಣೆಗಳನ್ನು ಮಾಡುತ್ತ ಬಂದಿದ್ದಾನೆ.

ನಂಬಿಕೆ ಮತ್ತು ಆಚರಣೆಗಳು ಮಾನವನ ಆರೋಗ್ಯವನ್ನು ಕಾಪಾಡುವುದಲ್ಲದೇ ಪ್ರತಿಯೊಂದು ಗುಂಪು ತನ್ನ ಹತೋಟಿಯಲ್ಲಿ ಇಟ್ಟುಕೊಂಡು ಕೊಂಡೊಯುತ್ತದೆ. ಅದೇ ರೀತಿ ಮಾನವನ ನಿತ್ಯ ಜೀವನಕ್ಕೆ ಪ್ರಕೃತಿ ನೀಡುವ ಬೆಳಕು, ಗಾಳಿ, ನೀರು, ಆಹಾರ, ಬಟ್ಟೆ, ಬರೆಗಳು ಎಷ್ಟು ಅವಶ್ಯವೋ ನಂಬಿಕೆಗಳು ಕೂಡ ಅಷ್ಟೇ ಪ್ರಮುಖ ಪಾತ್ರವಹಿಸುತ್ತವೆ. ಯಲಬುರ್ಗ ಪಟ್ಟಣದ ಜನರಲ್ಲಿ ಅನೇಕ ನಂಬಿಕೆಗಳಿರುವುದನ್ನು ಈ ಕೆಳಗಿನಂತೆ ಕಾಣಬಹುದಾಗಿದೆ.

ಗ್ರಹಣದ ಕಾಲದಲ್ಲಿ ಅಡುಗೆ ಮಾಡಿಟ್ಟಿದ್ದನ್ನು ಊಟ ಮಾಡಬಾರದು ಮಾಡಿದರೆ ಹುಟ್ಟುವ ಮಗುವು ಸಹ ಅಂಗವಿಕಲರಾಗುತ್ತಾರೆಂಬ ನಂಬಿಕೆ ಇದೆ. ಶುಕ್ರವಾರ ದಿನ ಯಾರಿಗೂ ಹಣವನ್ನು ಸಾಲವಾಗಿ ನೀಡಬೇಡ ನೀಡಿದರೆ ಲಕ್ಷ್ಮಿ ಮನೆಯಿಂದ ಹೊರಗೆ ಹೋಗಿಬಿಡುತ್ತಾಳೆಂಬ ನಂಬಿಕೆ ಇದೆ. ಅದೇ ರೀತಿ ಮುಸ್ಸಂಜೆಯಾದ ಮೇಲೆ ಮನೆಯ ಕಸವನ್ನು ಗುಡಿಸಿ ಹೊರಗೆ ಚೆಲ್ಲಬೇಡ ಚೆಲ್ಲದರೆ ಲಕ್ಷ್ಮೀ ನಮ್ಮ ಮೇಲೆ ಮುನಿಸಿಕೊಂಡು ಬೇರೆಯವರ ಮನೆಗೆ ಹೋಗಿಬಿಡುತ್ತಾಳೆ ಎಂಬ ನವಂಬಿಕೆ ಇಟ್ಟುಕೊಂಡಿದ್ದಾರೆ. ಮನೆಯ ಮುಂದೆ ಕಾಗೆಗಳು ಕೂಗುತ್ತಿದ್ದರೆ ಯಾರೋ ನೆಂಟರು ಬರುತ್ತಾರೆಂಬ ನಂಬಿಕೆ. ಅದೇ ಕಾಗೆ ಮನೆಯನ್ನು ಪ್ರವೇಶಿಸಿದರೆ ಏನೋ ಕಾಟ ಇದೆ ಎಂದು ೩ ತಿಂಗಳು ಕಾಲ ಮನೆ ಬಿಡುತ್ತಾರೆ. ಅದರಲ್ಲಿ ಯಾರು ವಾಸ ಮಾಡುವುದಿಲ್ಲ. ರಾತ್ರಿ ವೇಳೆಯಲ್ಲಿ ಗೂಬೆ ಮತ್ತು

ನಾಯಿಗಳು ಒಂದೇ ಸಮನೆ ಅಳುತ್ತಿದ್ದರೆ ಗ್ರಾಮದಲ್ಲಿ ಯಾರೋ ಸಾಯುತ್ತಾರೆಂಬ ಖಚಿತವಾದ ನಂಬಿಕೆ ಇದೆ.

ಪ್ರಯಾಣಿಸುವಾಗ ಬೆಕ್ಕು ಅಥವಾ ಹಾವು ಅಡ್ಡ ಬಂದರೆ ಇವತ್ತಿನ ದಿನ ಸರಿಯಿಲ್ಲಾ ಏನು ಕೆಲಸಗಳು ಆಗುವುದಿಲ್ಲವೆಂಬ ನಂಬಿಕೆ ಇದೆ. ದೇವರಿಗೆ ಒಡೆದ ಕಾಯಿ ತೊಟ್ಟಿಲಂತೆ ಉದ್ದುದ್ದು ಒಡೆದರೆ ಮನೆಯಲ್ಲಿ ಹೆಣ್ಣುಮಗು ಹುಟ್ಟುತ್ತದೆ. ಅಥವಾ ಸಂತಾನಭಾಗ್ಯ ದೊರೆಯುತ್ತದೆ ಎಂಬ ನಂಬಿಕೆ ಇದೆ. ಎಕ್ಕಯ ಗಿಡದಲ್ಲಿ ಚೌಡಮ್ಮ ಇರುತ್ತಾಳೆ, ಲಕ್ಕಿಗಿಡದಲ್ಲಿ ಲಕ್ಕಮ್ಮ ಇರುತ್ತಾಳೆ. ಬ್ಯಾಬೆ ಗಿಡದಲ್ಲಿ ಭೂತಪ್ಪನಿರುತ್ತಾನೆ ಎಂಬ ನಂಬಿಕೆಗಳಿವೆ. ಬಿಲ್ವ ಪತ್ರೆಮರ, ಬೆಂಬಿಮರ, ಧೂಪದರಮರ, ಅರಳಿಮರ, ಮತ್ತೆ ತುಳಸಿ ಗಿಡಗಳು ದೇವರ ಪುಷ್ಪವಾಗಿ ಬಳಸಲ್ಪಡುತ್ತವೆ. ಮತ್ತು ಅವುಗಳಲ್ಲಿ ದೇವಾನುದೇವತೆಗಳು ನೆಲೆಸಿರುತ್ತಾರೆ ಎಂಬ ನಂಬಿಕೆಗಳು ಗಿಡ ಮರಗಳ ಸಂರಕ್ಷಣೆಗೆ ಕಾರಣವಾಗಿದೆ. ಅದೇ ರೀತಿ ಪ್ರತಿದಿನ ಮಲಗುವಾಗ ದೇವತೆಯನ್ನು ಧ್ಯಾನಿಸಿ ಮಲಗಿದರೆ ದುಃಸ್ವಪ್ನ ಬೀಳುವುದಿಲ್ಲ. ಬೆಳಗ್ಗೆ ಎದ್ದೇಳುವಾಗ ಬಲಗಡೆ ಎದ್ದು ದೇವರ ಪೋಟೋ ನೋಡುವುದು ದೇವಿಯು ಬಲಭಾಗದ ಪ್ರಸಾದ ಕೊಟ್ಟರೆ ಶುಭದ ಸಂಕೇತ ಎಡಭಾಗದ ಪ್ರಸಾದ ಕೊಟ್ಟರೆ ಅಶುಭ ಸಂಕೇತಗಳೆಂಬ ನಂಬಿಕೆ ಗ್ರಾಮೀಣ ಜನರಲ್ಲಿರುವುದನ್ನು ಕಾಣಬಹುದಾಗಿದೆ. ದೇವಸ್ಥಾನದಿಂದ ಬರುವಾಗ ಸ್ವಲ್ಪ ಹೊತ್ತು ಕುಳಿತಿದ್ದು ಬರಬೇಕು ಕಾಲನ್ನು ತೊಳೆದುಕೊಂಡು ದೇವಾಲಯ ಅಥವಾ ಮನೆಗೆ ಬರಬೇಕು ಹುಣಸೇಮರದ ಕೆಳಗೆ ಮಲಗಬಾರದು ಅಲ್ಲಿ ಪಿಶಾಚಿಗಳಿರುತ್ತವೆ ಎಂಬ ನಂಬಿಕೆ ಯಲಬುರ್ಗ ಪಟ್ಟಣದಲ್ಲಿ ಕಾಣಬಹುದಾಗಿದೆ.

**ಆಚರಣೆಗಳು**

ಜನರು ದೈನಂದಿನ ಹಾಗೂ ವೈಯಕ್ತಿಕ ಜೀವನಕ್ಕೆ ಸಂಬಂಧಿಸಿದಂತೆ ವಿಧಿಗಳು, ಆಚರಣೆಗಳು, ಸಮಾರಂಭಗಳು ನಡೆಯುತ್ತವೆ. ಅವುಗಳನ್ನು ಈ ಕೆಳಗೆ ನಮೂದಿಸಲಾಗಿದೆ.

**ಗರ್ಭಾವಸ್ಥೆ ಮತ್ತು ಜೀವನ**

ಗರ್ಭಾವಸ್ಥೆಯಲ್ಲಿರುವಾಗ ಹಾಗೂ ಮಗು ಜನನವಾದಾಗ ಅನೇಕ ಧಾರ್ಮಿಕ ಸಂಪ್ರದಾಯ ರೂಢಿಯಲ್ಲಿವೆ. ಹಿಂದೂಗಳಲ್ಲಿ ಗರ್ಭಿಣಿಯರಿಗೆ ತಿಮಡಿ ತಿನಿಸುಗಳ ಬಯಕೆಯನ್ನು ಪೂರೈಸುವುದು ಗರ್ಭಿಣಿಯಾದವರಿಗೆ ಏಳು, ಎಂಟನೇ ತಿಂಗಳಲ್ಲಿ ಸೀಮಂತ ಮಾಡುವುದು ವಿಶೇಷ ಆಚರಣೆ ಆಗಿದೆ. ಸಾಮಾನ್ಯವಾಗಿ ಮೊದಲ ಹೆರಿಗೆಗೆ ಹೆಣ್ಣು ತವರು ಮನೆಗೆ ಹೋಗುತ್ತಾಳೆ. ಮಗು ಜನಿಸಿದಾಗ ೧೦ ದಿನಗಳವರೆಗೂ ಮೈಲಿಗೆ ಆಚರಿಸುವುದು ೧೧ನೇ ದಿನ ಸ್ನಾನ ಮಾಡಿ ಶುದ್ಧಿ ಮಾಡಿ ಸೂತಕ ಕಳೆದುಕೊಳ್ಳುತ್ತಾರೆ. ಅದೇ ದಿನ ಮಗುವನ್ನು ತೊಟ್ಟಿಲಿಗೆ ಹಾಕಿ ನಾಮಕರಣ ಮಾಡುತ್ತಾರೆ. ಕೆಲವು ಸಂದರ್ಭಗಳಲ್ಲಿ ಇದನ್ನು ೩ ತಿಂಗಳೊಳಗಾಗಿ ಆಚರಿಸುತ್ತಾರೆ.

ಬ್ರಾಹ್ಮಣರು, ಜೈನರು ಹಾಗೂ ವಿಶ್ವಕರ್ಮರು ಮಕ್ಕಳಿಗೆ ಉಪನಯನ ಮಾಡಿಸುತ್ತಾರೆ. ಲಿಂಗಾಯತರಲ್ಲಿ ಲಿಂಗದೀಕ್ಷೆ ಕೊಡಿಸುತ್ತಾರೆ. ಮುಸಲ್ಮಾನರು ಮಗು ಹುಟ್ಟಿದಾಗ ಕಿವಿಯಲ್ಲಿ

ಬಾಂಗ್ ನಮಾಜ್ ಮಾಡುತ್ತಾ ತಕ್ಷಣವೇ ಹೆಸರನ್ನು ಇಡುತ್ತಾರೆ. ಅದೇ ರೀತಿ ಮಕ್ಕಳಿಗೆ ಮುಂಜಿ ಮಾಡಿಸುತ್ತಾರೆ.

**ವಿವಾಹ ಆಚರಣೆ**

ವಿವಾಹ ಹಿಂದೂಗಳಲ್ಲಿ ವಯಸ್ಸಿಗೆ ಬಂದ ಮದುಮಗಳನ್ನು ಮಧುಮಗನಿಗೆ ಕನ್ಯಾಧಾನವೆಂದು ಕೊಡುಗೆಯ ರೂಪದಲ್ಲಿ ಮದುವೆ ಮಾಡಿ ಕೊಡುವ ಸಂಪ್ರದಾಯವಿದೆ. ಹಿಂದಿನ ಕಾಲದಲ್ಲಿ ೭ ದಿನಗಳ ಕಾಲ ವಿವಾಹ ನಡೆಯುತ್ತಿದ್ದು, ಆದರೆ ಇಂದು ೨ ದಿನಕ್ಕೆ ಸೀಮಿತವಾಗಿದೆ. (ಪ್ರಥಮಶಾಸ್ತ್ರ ಮತ್ತು ದಾರೆಮಹೂರ್ತ) ಇತ್ತೀಚೆಗೆ ಗಂಡಿನ ಅಥವಾ ಹೆಣ್ಣಿನ ಮನೆಗಳಲ್ಲಿ ಮದುವೆ ಆಗುವುದು ಕಡಿಮೆ ಬದಲಾಗಿ ದೇವಸ್ಥಾನ, ಮಠ ಮತ್ತು ಕಲ್ಯಾಣ ಮಂಟಪದಲ್ಲಿ ಅದ್ದೂರಿಯಾಗಿ ವೈಭವ ಪೂರಿತವಾಗಿ ನಡೆಸಿಕೊಡುತ್ತಾರೆ. ಒಂದೇ ಗೋತ್ರ ಅಥವಾ ಬೆಡಗುಗಳಲ್ಲಿ ವಿವಾಹ ನಿಷಿದ್ಧ ವಿಳ್ಯಾದ ಶಾಸ್ತ್ರ, ವರಪೂಜೆ, ಕಂಕಣ, ಮಾಂಗಲ್ಯ ಧಾರಣೆ, ವಧುವರರ ಕೈಗೆ ಹಾಲೆರೆದು ತಲೆಮೇಲೆ ಅಕ್ಷತೆ ಹಾಕುತ್ತಾರೆ. ಹೋಮ, ಸಪ್ತಪದಿ ಇವೆಲ್ಲ ಧಾರ್ಮಿಕ ವಿಧಿಗಳಲ್ಲಿ ಮುಖ್ಯವಾದವು. ಇತ್ತೀಚೆಗೆ ಕೆಲವರಿಗೆ ದುಬಾರಿವೆಚ್ಚದಿಂದ ಪ್ರೇಮವಿವಾಹ, ಅಂತರ್ ಜಾತಿ ವಿವಾಹದಿಂದ ಶಾಸ್ತ್ರ ಸಂಪ್ರದಾಯಗಳು ಕಣ್ಮರೆಯಾಗುತ್ತಿವೆ.

ಅದೇ ರೀತಿ ಮುಸಲ್ಮಾರಲ್ಲಿ ವಿವಾಹ ಕಯ್ದೆಯಂತೆ ವಿಧಿವತ್ತಾಗಿ ನಡೆಯುತ್ತದೆ. ಖಾಜಿಯು ಗಂಡು ಮತ್ತು ಹೆಣ್ಣಿನ ಒಪ್ಪಿಗೆ (ಕಬೂಲ್) ಪಡೆದು ಸಾಕ್ಷಿಗಳ ಸಮ್ಮುಖದಲ್ಲಿ ದಪ್ತರದಲ್ಲಿ ದಾಖಲು ಆಗುತ್ತದೆ. ಇವರಿಗೆ ಶವಾಯ್ ಎಂದು ಕರೆಯುತ್ತಾರೆ, ಖಾಜಿಯು ನಿಖಾ ಓದುತ್ತಾರೆ, ಮಾಂಗಲ್ಯಧಾರಣೆ ಇರುವುದಿಲ್ಲ ಹಿಂದೂಗಳ ಸಂಪ್ರದಾಯದಂತೆ ಲಚ್ಛ (ಕರಿಮಣಿ) ಧರಿಸುತ್ತಾರೆ.

**ಕೃಷಿಗೆ ಸಂಬಂಧಿಸಿದ ಆಚರಣೆಗಳು**

ಯಲಬುರ್ಗ ಪಟ್ಟಣದ ವ್ಯಾಪ್ತಿಯಲ್ಲಿನ ಜನರು ಒಕ್ಕಲುತನ ಕೃಷಿ ವ್ಯವಸಾಯ ರೈತಾಪಿವರ್ಗ ಎಂಬ ಹೆಸರಿನಿಂದ ಕರೆಯುಲ್ಪಡುವ ಕೃಷಿ ಬದುಕನ್ನು ತಮ್ಮ ಜೀವಂತವಾಗಿಸಿಕೊಂಡಿದ್ದಾರೆ. ಇದು ಸಕಲ ಜೀವರಾಶಿಗೆ ಅನ್ನ ನೀಡುವ ಪವಿತ್ರ ಕಾಯಕವಾಗಿದೆ. ರಾಗಿ, ಭತ್ತ, ಜೋಳ, ನವಣೆ ಮುಂತಾದವನ್ನು ಬೆಳೆಯುವ ಜನರು ನೀರಾವರಿ ಸೌಲಭ್ಯ ಮತ್ತು ಮಳೆಯ ನೀರನ್ನೇ ಅವಲಂಬಿಸಿರುವ ರೈತರು ಭೂಮಿ ತಾಯಿಯನ್ನು ನಂಬಿ ಬದುಕುವ ಅನಿವಾರ್ಯತೆ ಈ ಪ್ರದೇಶದಲ್ಲಿ ಕಂಡುಬಂದಿದ್ದು, ಈ ಕೆಳಗಿನ ಆಚರಣೆಗಳು ಕಂಡುಬರುತ್ತವೆ.

**ಮುಂಗಾರು**

ಸಾಮಾನ್ಯವಾಗಿ ಬೇಸಿಗೆ ಕಾಲ ಕಳೆದು ಮಳೆಗಾಲ ಪ್ರಾರಂಭವಾಗಿ ಮೊದಲ ಹನಿ ನೆಲಕ್ಕೆ ಬಿದ್ದು ಮಳೆಯು ಚೆನ್ನಾಗಿ ಬಂದರೆ ಉಳುಮೆ ಮಾಡಲು ಪ್ರಾರಂಭಿಸುವ ಮುನ್ನ ರೈತರು ಹಲವು ಆಚರಣೆಗಳನ್ನು ಮಾಡುತ್ತಾರೆ. ರೈತನು ಮಡಿಯಿಂದ ಮಡಿಬಟ್ಟೆ ಉಟ್ಟು ನೇಗಿಲು,

ನೊಗ, ಕುಂಟೆ ಮುಂತಾದ ಕೃಷಿ ಉಪಕರಣಗಳನ್ನು ತೊಳೆದು ಎತ್ತು ಹಾಗೂ ಹಸುಗಳ ಮೈ ತೊಳೆದು ಶೃಂಗಾರ ಮಾಡಿ ಪೂಜೆ ಮಾಡುತ್ತಾರೆ. ಸಗಣಿ ಉಂಡೆಗೆ ಗರಿಕೆ ಹುಲ್ಲನ್ನು ಸಿಗಿಸಿ ವಿಘ್ನೇಶ್ವರನನ್ನು ಮಾಡಿ ಅನಂತರ ನೇಗಿಲನ್ನು ಹೂಡಿ ವರ್ಷದ ಮೊದಲ ಬೇಸಾಯವನ್ನು ಪ್ರಾರಂಭಿಸುತ್ತಾರೆ. ಇದು ಹಿಂದಿನಿಂದಲೂ ನಡೆದುಕೊಂಡು ಬಂದಿರುವ ಆಚರಣೆಯಾಗಿದೆ.

**ಬಿತ್ತನೆ ಪೂಜೆ**

ಭೂಮಿಯನ್ನು ಉಳುಮೆ ಮಡಿ ಬೀಜವನ್ನು ಬಿತ್ತುವ ಮೊದಲು ಬಿದಿರಿನಿಂದ ತೈಯಾರಿಸಿದ ಬಿದಿರಿನ ಬುಟ್ಟಿಗಳಲ್ಲಿ ಬಿತ್ತುವ ಬೀಜ ತುಂಬಿ ವಿಭೂತಿ, ಅರಿಶಿನ, ಕುಂಕುಮ ಇಟ್ಟು, ಸಗಣಿಯಲ್ಲಿ ವಿಘೇಶ್ವರನನ್ನು ಮಾಡಿ ಹೊಲದ ಮೂಲೆಯಲ್ಲಿಟ್ಟು ಪೂಜೆ ಮಾಡಿ ಒಂದು ನೂರಾಗಲಿ, ನೂರು ಸಾವಿರವಾಗಲಿ, ಸಾವಿರ ಲಕ್ಷವಾಗಲಿ ಹೀಗೆ ಮುಂದುವರಿಯಲಿ, ಹೆಚ್ಚಲಿ ಎಂದು ಹೇಳಿ ಬಿತ್ತನೆ ಕಾರ್ಯ ಪ್ರಾರಂಭಿಸುತ್ತಾರೆ.

**ಕೊಯ್ಯುವ ಪೂಜೆ**

ಭೂಮಿಯನ್ನು ಉತ್ತಿ, ಬಿತ್ತಿ ಸಮೃದ್ಧಿಯಾಗಿ ಬೆಳೆದ ಬೆಳೆಯನ್ನು ಕಟಾವಿನ ಹಂತಕ್ಕೆ ಬಂದಾಗ ಕೊಯ್ಲು ಮಾಡುವ ಮೊದಲು ಒಳ್ಳೆಯ ದಿನವನ್ನು ನೋಡಿ ಕಟಾವು ಮಾಡುನ ಕುಡುಗೋಲನ್ನು ಹೊಲದ ಬದುವಿನಲ್ಲಿಟ್ಟು ಪೂಜೆ ಮಾಡಿ ಬೆಳೆಯನ್ನು ಕಟಾವು ಮಾಡುತ್ತಾರೆ. ನಂತರ ಒಂದು ಕಡೆ ಸಂಗ್ರಹಿಸಿ ಬಣವೆ ಮಾಡುತ್ತಾರೆ.

**ವಕ್ಕಣೆ ಮಾಡುವುದು**

ರೈತ ಸಮೃದ್ಧಿಯಾಗಿ ಬೆಳೆದಿರುವ ಆಹಾರ ಧಾನ್ಯಗಳನ್ನು ಹುಲ್ಲಿನಿಂದ ಬೇರ್ಪಡಿಸಿ ಕಾಳುಗಳನ್ನು ಪ್ರತ್ಯೆಕ ಮಾಡುವುದು ಅತ್ಯವಶ್ಯಕ ಕೋಯ್ಲು ಮಾಡಿರುವ ಜೋಳ, ಭತ್ತ, ನವಣೆ, ಹುಲ್ಲನ್ನು ವಕ್ಕಣೆ ಮಾಡಲು ವೃತ್ತಾಕಾರದ ಆವರಣ ಮಾಡಿ ಹುಲ್ಲನ್ನು ಸಮತಟ್ಟಾದ ಭೂಮಿಯ ಮೇಲೆ (ಕಣ) ತೆಳ್ಳಗೆ ಹರಡಿ ಹುಲ್ಲಿನ ಮೇಲೆ ವೃತ್ತಾಕಾರದ ಕಲ್ಲನ್ನು ಎತ್ತು ಅಥವಾ ಧನಗಳಿಗೆ ಕಟ್ಟಿ ಎಳೆಸುತ್ತಾರೆ. ವಕ್ಕಣೆ ಮಾಡುವ ಮುನ್ನ ಸಗಣಿ ಬಗುಡದಿಂದ ಸಾರಿಸಿ ರಂಗೋಲಿ ಬಿಟ್ಟು ಪೂಜೆ ಮಾಡಿದ ನಂತರ ವಕ್ಕಣೆ ಕಾರ್ಯ ಪ್ರಾರಂಭಿಸುತ್ತಾರೆ.

**ರಾಶಿ ಪೂಜೆ**

ಹುಲ್ಲಿನಿಂದ ಬೇರ್ಪಟ್ಟ ಧಾನ್ಯಗಳಲ್ಲೂ ಜೊಳ್ಳನ್ನು ತೆಗೆದು ಗಟ್ಟಿಯಾದ ಧಾನ್ಯಗಳನ್ನು ಒಂದು ಕಡೆ ರಾಶಿ ಹಾಕುತ್ತಾರೆ. ರಾಶಿಯ ಸುತ್ತಲೂ ಧಾನ್ಯ ಶುದ್ಧೀಕರಣ ಮಾಡಲು ಬಳಸಿದ ಕೋಲು, ಮರಗೋಲು, ಇಬ್ಬಳ, ಮರ ಮುಂತಾದವುಗಳನ್ನು ರಾಶಿಗೆ ಇಟ್ಟು ಮಾವಿನ ಎಲೆ, ಹೂವುಗಳನ್ನು ರಾಶಿಗೆ ಮತ್ತು ರೋಣಕಲ್ಲಿಗೆ ಮುಡಿಸಿ ಪೂಜೆ ಮಾಡುತ್ತಾರೆ. ಪೂಜೆ ಸಂದರ್ಭದಲ್ಲಿ ಕಾಳುಗಳ ಫಲಾರ ಅಥವಾ ಮಂಡಕ್ಕಿ ಮತ್ತು ಬೆಲ್ಲವನ್ನು ಒಟ್ಟಿಗೆ ಸೇರಿಸಿ ರಾಶಿಯ ಮುಂದೆ ಇಟ್ಟು ನೈವೇದ್ಯ ಮಾಡುತ್ತಾರೆ. ನಂತರ ಎಲ್ಲರಿಗೂ ಪ್ರಸಾದ ನೀಡಿ ಧಾನ್ಯಗಳನ್ನು ಚೀಲಗಳಿಗೆ ತುಂಬಿಸಿ ಮರದ ಗಾಡಿಯಲ್ಲಿ ಮನೆಗಳಿಗೆ ಒಯ್ಯುತ್ತಾರೆ. ಹೀಗೆ ಯಲಬುರ್ಗ ಪಟ್ಟಣದ ಪರಿಸರದಲ್ಲಿ ಕೃಷಿಗೆ ಸಂಬಂಧಿಸಿದ ಆಚರಣೆಗಳನ್ನು ಮಾಡುತ್ತಾರೆ. ಈ

ಆಚರಣೆಗಳನ್ನು ಮಾಡುವುದರ ಮೂಲಕ ಕೃಷಿ ಚಟುವಟಿಕೆಗಳು ಸುಗಮವಾಗಿ ನಡೆಯುತ್ತವೆಂಬ ನಂಬಿಕೆ.

**೫.೨. ಜಾತ್ರೆ ಮತ್ತು ಉತ್ಸವಗಳು**

ಜಾತ್ರೆಗಳು ಜಾನಪದ ಜೀವನದ ಅವಿಭಾಜ್ಯ ಅಂಗವಾಗಿರುವಂತೆಯೇ ಜಾನಪದ ಸಂಸ್ಕೃತಿಯ ವಿಕಾಸಕ್ಕೆ ಚೈತನ್ಯ ದಾಯಿಗಳಾಗಿವೆ. ಅವುಗಳ ತಾಯಿ ಬೇರು ಭೂತ ಕಾಲದ ಗರ್ಭದಲ್ಲಿ ಹೂತುಕೊಂಡಿದ್ದರು. ಅವು ಆದಿಮಾನವನ ಕಾಲದಿಂದಲೇ ಧಾರ್ಮಿಕಾಚರಣೆಗಳ ಒಂದು ಪ್ರಮುಖ ಭಾಗವಾಗಿ ರೂಢಿಯಲ್ಲಿದ್ದಿರಬೇಕೆಂದು ತೋರುತ್ತದೆ. ಮೊದಮೊದಲು ಕುಣಿತ, ಹಾಡು, ಬಲಿ, ಮಾಟ-ಮಂತಗಳೇ ಪೂಜಾವಿಧಿಗಳಾಗಿದ್ದರಬೇಕು ಕಾಲ ಕ್ರಮೇಣ ಸಮಾಜದ ರೀತಿ-ನೀತಿಗಳು, ಬದಲಾವಣೆಗೊಂಡಂತೆ ದೇವರ ಕಲ್ಪನೆ ವ್ಯತ್ಯಾಸಗೊಂಡಂತೆ ಮತೀಯ ತತ್ವಗಳು ವಿಕಾಸಗೊಂಡಂತೆ ಧಾರ್ಮಿಕ ಆಚರಣೆಗಳು ಸಂಕೀರ್ಣವಾಗುತ್ತದೆ. ಜನ ಜೀವನ ಮಾರ್ಪಾಡದಂತೆ ಜಾತ್ರೆಗಳು ಪ್ರಾಚೀನರ ಕಲ್ಪನೆಗೂ ನಿಲುಕದ ಹೊಸ ಹೊಸ ಸಂಗತಿಗಳನ್ನು ಅರ್ಥೈಸಿಕೊಂಡು ಅಳತೆಯಿಲ್ಲದೆ ಬೆಳೆಯುತ್ತಿವೆ.[೨] ಒಟ್ಟಾರೆ ಜಾತ್ರೆಗಳೆಂದರೆ ಜಾತಿ-ವರ್ಗ, ಮೇಲು-ಕೀಳು, ಮಡಿ-ಮೈಲಿಗೆಯನ್ನು ಮೀರಿ ಜನ ಸಮುದಾಯ ಮತೀಯ ವಿಧಿಯಾಚರಣೆಯ ನೆಪದಲ್ಲಿ ದೈವವೊಂದರ ಸುತ್ತ ನಿರ್ದಿಷ್ಟ ದಿನಗಳಂದು ನಡೆಯುವ ಕಾರ್ಯಕ್ರಮಕ್ಕೆ ಜಾತ್ರೆ ಎನ್ನುವರು.

**ಯಲಬುರ್ಗಾ ಪಟ್ಟಣಕ್ಕೆ ಸಂಬಂಧಿಸಿದ ಜಾತ್ರೆ ಉತ್ಸವಗಳು**

ಯಲಬುರ್ಗಾ ಪಟ್ಟಣದಲ್ಲಿ ಅನೇಕ ದೇವರುಗಳು ನೆಲೆಯೂರಿದ್ದು, ಪ್ರತಿನಿತ್ಯ ವಿಶೇಷ ಪೂಜೆ ಪುನಸ್ಕಾರಗಳು ನಡೆಯುತ್ತವೆ. ಅಲ್ಲದೆ ವಿಶೇಷ ದಿನಗಳಂದು ವಾರ್ಷಿಕ ಉತ್ಸವ ವಿಶೇಷ ಆಚರಣೆಯ ಮೂಲಕ ದೇವರ ಕೃಪೆಗೆ ಪಾತ್ರರಾಗಲು ಅನೇಕ ವಿಧಿ ವಿಧಾನಗಳನ್ನು ತಪ್ಪದೇ ಹಿರಿಯರು ರೂಢಿಸಿಕೊಂಡು ಬಂದಿರುವ ಆಚರಣೆಯನ್ನು ಇಂದಿಗೂ ಸಹ ಕಾಣಬಹುದು.

**೧. ಯಲಬುರ್ಗಾ ಗ್ರಾಮದೇವತೆ**

ಯಲಬುರ್ಗಾ ಪಟ್ಟಣದ ಜನರ ಒಳಿತಿಗಾಗಿ ನೆಲೆಗೊಂಡಿರುವ ಗ್ರಾಮದೇವತೆಯಾಗಿದ್ದು. ಪ್ರತಿವರ್ಷಗಳಿಗೊಮ್ಮೆ ಜಾತ್ರೆ ನಡೆಯುತ್ತದೆ.

ಜಾತ್ರೆ ಮತ್ತು ಉತ್ಸವದಲ್ಲಿ ನಡೆಯುವ (ಆರಾಧನೆಯ)ಕಾರ್ಯಕ್ರಮದ ಹಂತಗಳು

ಮಾನವ ಬದುಕಿನುದ್ದಕ್ಕೂ ಹಲವಾರು ಸಂಪ್ರದಾಯಗಳಿಗೆ ಬದ್ಧನಾಗಿ ಬದುಕುತ್ತಾನೆ. ಅನೇಕ ಸಂಪ್ರದಾಯದ ಕೊಂಡಿಗಳು ಅವನ ಜೀವಿತಾವಧಿಯಲ್ಲಿ ಆತನನ್ನು ಬೆಳೆಸುತ್ತವೆ. ಹಾಗೂ ಉಳಿಸುತ್ತವೆ. ಇಂತಹ ದೇವರ ಸೇವೆಗಳು ಹರಕೆಗಳು ಹಾಗೂ ನಂಬಿಕೆಯ ಫಲವೇ ಆಚರಣೆ ಅಂತಹವು ಈ ಕೆಳಗಿನಂತಿವೆ.

**೧. ಸಾಟಿ ಇಡುವುದು (ಸಾರುವುದು)**

ಸಾಟಿ ಎಂದರೆ ಊರೆಲ್ಲಾ ಸಾರಿಕೊಂಡು ಬರುವುದು ಎಂದರ್ಥ ಗ್ರಾಮದ ಮುಖ್ಯಸ್ಥರು ಹಾಗೂ ಸದಸ್ಯರ ತೀರ್ಮಾನದಂತೆ ಜಾತ್ರೆ ಪ್ರಾರಂಭವಾಗುವ ೮ ದಿನಗಳ ಮುಂಚೆಯೇ ಒಬ್ಬ ದಲಿತ ಯುವಕನನ್ನು ಕಳುಹಿಸಿ ಜಾತ್ರಯೆ ಬಗ್ಗೆ ಸಾರುತ್ತಾನೆ. ಜಾತ್ರೆಯ ವೇಳೆಯಲ್ಲಿ ಅನುಸರಿಸಬೇಕಾದ ವಿಧಿ-ನಿಷೇಧಗಳು, ಮಡಿ-ಮೈಲಿಗೆ, ಆಚಾರ-ವಿಚಾರಗಳನ್ನು ತಮಟೆ ಹಿಡಿದು ದಲಿತ ಯುವಕ ಗ್ರಾಮದಲ್ಲೆಲ್ಲಾ ಪ್ರಚಾರ ಮಾಡಿ ಬರುತ್ತಾನೆ.

**೨. ಕಂಬ ನಡೆಸುವುದು**

ಹಬ್ಬದ ಪ್ರಾರಂಭ ಸೂಚಕವೇ ಈ ಕಂಬ ನೆಡುವ ಪ್ರಕ್ರಿಯೆಯಾಗಿದ್ದು, ಬೇವಿನ, ಮಾವಿನ, ಅತ್ತಿಯ ಇಲ್ಲವೆ ಆಲದ ಮೂರು ಕವಲುಗಳುಳ್ಳ ಕೊಂಚೆಯನ್ನು ತಂದು ದೇವಸ್ಥಾನದ ಮುಂದೆ ಪೂಜೆ ಮಾಡಿ ನೆಡಲಾಗುತ್ತದೆ. ಈ ಕಂಬ ಗ್ರಾಮದೇವತೆಯ ಪತಿ ಎಂದು ನಂಬಿ ಪೂಜಿಸುತ್ತಾರೆ. ನೆಡುವ ಸ್ಥಳದಲ್ಲಿ ಸಾರಿಸಿ, ಗುಡಿಸಿ, ರಂಗೋಲಿ ಇಟ್ಟು ಅರಿಶಿಣ-ಕುಂಕುಮ, ಹೂಗಳಿಂದ ಪೂಜೆ ಸಲ್ಲಿಸುತ್ತಾರೆ.

**೩. ಹೊಳೆ ಆಡಿ ಬರುವುದು**

ಗ್ರಾಮ ದೇವತೆಯ ಜಾತ್ರೆ ಸಾಮಾನ್ಯವಾಗಿ ಪ್ರಾರಂಭವಾಗುವುದು ಮಂಗಳವಾರ ಅಥವಾ ಶುಕ್ರವಾರ ಅದರಲ್ಲೂ ಹುಣ್ಣಿಮೆ ರಾತ್ರಿಯ ದಿನಗಳು ಹಬ್ಬಕ್ಕೆ ಶ್ರೇಷ್ಠವೆಂಬ ನಂಬಿಕೆ ಜನಪದರಲ್ಲಿದೆ, ರಾತ್ರಿ ೮ ಗಂಟೆ ಸುಮಾರಿಗೆ ಊರಿನ ಪ್ರಮುಖರನ್ನು ಒಳಗೊಂಡಂತೆ ಸ್ತ್ರೀ-ಪುರುಷರು, ಮಕ್ಕಳ ಸಹಿತ, ಉತ್ಸವ ಮೂರ್ತಿ ವಾದ್ಯವೃಂದದೊಡನೆ ನೀರಿರುವ ಕೆರೆಯ ದಂಡೆಗೆ ಬಂದು ದೇವರನ್ನು ಒಂದೆಡೆ ಪ್ರತಿಷ್ಠಾಪಿಸಿ, ಪುರೋಹಿತ ನೀರಿನಲ್ಲಿ ಮಿಂದು ಮಡಿಯುಟ್ಟು ಸ್ನಾನ ಮಾಡಿ ಬರುವಾಗ ಒಂದು ಕೊಡದಲ್ಲಿ ಶುದ್ಧ ಜಲವನ್ನು ತಂದು ಮಂಗಳ ದ್ರವ್ಯಗಳಲ್ಲಿ ಪೂಜಿಸಿ ಕಡ್ಡಿ ಕರ್ಪೂರ ಹಚ್ಚಿಡುತ್ತಾರೆ. ಇದನ್ನು ಪುಣಿಯೋ ಜನ(ಜಲ ಅಭಿಷೇಕ) ಹೊಸ ಮಡಿಕೆ-ಕುಡಿಕೆ, ಕಳಸದೊಂದಿಗೆ ಪೂಜಿಸಿ ನಡೆಮುಡಿ (ಬಿಳಿಬಟ್ಟೆಯನ್ನು ಒದ್ದೆ ಮಾಡಿ ನೆಲಕ್ಕೆ ಹಸಿ ಅದರ ಮೇಲೆ ಪುರೋಹಿತರು ಮತ್ತು ದೇವರ ಕಳಶ ಹೊತ್ತವರು ನಡೆದುಕೊಂಡು ಹೋಗುವರು) ಈ ನಡೆಮುಡಿಯೊಂದಿಗೆ ವಾದ್ಯವೃಂದ ದೇವರ ಪದ ಹೇಳುವವರೊಡನೆ ನಿಧಾನವಾಗಿ ಸಾಗುತ್ತಾರೆ, ದೇವಾಲಯಕ್ಕೆ ತಲುಪುದರೊಳಗೆ ಬೆಳಕಾಗಿರುತ್ತದೆ.

**೪. ಅಗ್ನಿಕೊಂಡ**

ಅಗ್ನಿಕೊಂಡ ಗ್ರಾಮದೇವತೆಯ ಆಚರಣೆಯಲ್ಲಿ ಪ್ರಮುಖವಾದ ಆಚರಣೆ, ಜಾತ್ರೆ ಪ್ರಾರಂಭವಾಗುವ ೮ ಇಲ್ಲವೆ ೧೦ ದಿನಗಳಿಗೂ ಮೊದಲೇ ಅಗ್ನಿಕೊಂಡಕ್ಕೆ ಬೇಕಾದ ವಸ್ತುಗಳ ಸಂಗ್ರಹ ನಡೆಯುತ್ತದೆ.

ಕೊಂಡಹಾಯುವ ಹಿಂದಿನ ದಿನ ಕೊಂಡಕ್ಕೆ ಅರಳಿ ರೆಂಬೆಗಳು, ಗಂಧದ ಚಕ್ಕೆ ಬಿಳಿ ಎಕ್ಕದ ಚಕ್ಕೆ, ಬೇಪಿನ ರೆಂಬೆಗಳು, ಹೀಗೆ ಶೇಖರಿಸಿದ ಸೌದೆಗಳಿಂದ ಹೊಂಡ ಸಿದ್ಧವಾಗುತ್ತದೆ.

ಹಿಂದಿನ ರಾತ್ರಿಯೇ ಕೊಂಡಕ್ಕೆ ಉರಿ ಹಚ್ಚಲಾಗಿದ್ದು, ಸುಮರು ೧೦ ಇಲ್ಲವೆ ೧೨ ಗಂಟೆಗಳ ಕಾಲ ಉರಿದು ಕೊಂಡದಲ್ಲಿ ಕೆಂಡ ರೂಪಗೊಳ್ಳುತ್ತದೆ. ಸುಮರು ೧೨ ಅಡಿ ಉದ್ದ, ೪ಅಡಿ ಅಗಲ, ೨ ಅಡಿ ಆಳವಾಗಿರುತ್ತದೆ. ಸಾಮಾನ್ಯವಾಗಿ ರಾತ್ರಿ ೯ ಗಂಟೆ ಇಲ್ಲವೆ ೧೦ ಗಂಟೆ ಅಥವಾ ಮುಂಜಾನೆ ೪ ರಿಂದ ೫ಗಂಟೆ ಸುಮಾರಿಗೆ ಕೊಂಡ ಹಾಯುವುದು ನೆರವೇರುತ್ತದೆ.

ಕೊಂಡ ಹಾಯುವುದು ಉಪಾಸವಿದ್ದು, ಮಡಿ ಮೈಲಿಗೆಯಿಂದ ಶುಚಿತ್ವದಿಂದಿದ್ದು, ದೇವರಲ್ಲಿ ಹರಕೆ ಇಟ್ಟು ಭಕ್ತಿಯಿಂದ ದೇವರನ್ನು ಜಪಿಸುತ್ತಾ ಕೊಂಡ ಹಾಯುವ ಪದ್ಧತಿ ರೂಢಿಯಲ್ಲಿದೆ.[೨೭]

**೫. ಬಲಿಯಾಚರಣೆ**

ಬಲಿಯಾಚರಣೆಯು ಗ್ರಾಮ ದೇವತೆ ಹಾಗೂ ಶಿಷ್ಟ ದೇವತೆಯ ಆಚರಣೆಗಳನ್ನು ಪ್ರತ್ಯೇಕಿಸುವ ಪ್ರಮುಖ ಅಂಶಗಳಲ್ಲಿ ಒಂದಾಗಿದೆ. ರೋಗ ರುಜಿನಗಳಿಂದ, ಮಳೆಬೆಳೆ ಇಲ್ಲದೆ ನೊಂದ ಜನರ ಕಷ್ಟ ನಿವಾರಣೆಗೆ ದೇವತೆಗೆ ಹರಕೆ ಹೊತ್ತು ಬಲಿ ನೀಡುವುದರಿಂದ ದೇವಿಯನ್ನು ಸಂತೃಪ್ತಳನ್ನಾಗಿ ಮಾಡಲು ಕುರಿ, ಕೋಳಿ, ಮೇಕೆ ಮತ್ತು ಕೋಣವನ್ನು ಬಲಿ ನೀಡುವ ಪದ್ಧತಿ ಹಿಂದಿನಿಂದಲೂ ಬೆಳೆದು ಬಂದಿದೆ ಗ್ರಾಮ ದೇವತೆಗೆ ಕೋಣದ ಬಲಿ ಬಹಳ ಇಷ್ಟವಾದುದಾಗಿದ್ದು. ಬಹುತೇಕ ಕೋಣವನ್ನು ದೇವತೆಗೆ ಅರ್ಪಿಸುತ್ತಾರೆ. ದಷ್ಟ-ಪುಷ್ಟವಾಗಿ ಬೆಳೆದಿರುವ ಕೋಣವನ್ನು ಮೈತೊಳೆದು ಶೃಂಗರಿಸಿ, ಗ್ರಾಮದಲ್ಲೆಲ್ಲ. ಮೆರವಣಿಗೆ ಮಾಡಿ ಚೆನ್ನಾಗಿ ದಂಡಿಸಿ ಉಪವಾಸ ಕೆಡವಿ ಗ್ರಾಮದೇವತೆಯ ಮುಂಬಾಗಿಲಿಗೆ ಮುಖಮಾಡಿ ಬಲಿಯ ಕಂಬಕ್ಕೆ ಕಟ್ಟಿ ನಿಲ್ಲಿಸುತ್ತಾರೆ. ಪೂಜೆ ಎಲ್ಲಾ ಮುಗಿದ ಮೇಲೆ ಕೋಣಕ್ಕೆ ಅರಿಶಿಣ-ಕುಂಕುಮ ಇಟ್ಟು ಪೂಜಿಸಿ ತಲೆಯ ಮೇಲೆ ನೀರನ್ನು ಚುಮುಕಿಸುತ್ತಾರೆ. ಕೋಣವು ತಲೆಯನ್ನು ಆಡಿಸಿ ಸಮ್ಮತಿ ಸೂಚಿಸಿದಾಗ ಹರಿತವಾದ ಮಚ್ಚಿನಿಂದ ಒಂದೇ ಏಟಿಗೆ ಕತ್ತರಿಸಿ ಬಾಯಿಗೆ ನೀರನ್ನು ಬಿಟ್ಟು ಕೋಣದ ಬಲಗಾಲನ್ನು ಕಡಿದು ಬಾಯಿಗಿಟ್ಟು ಅನಂತರ ಅದರ ಜಿಡ್ಡಿನ ಅಂಶದಿಂದ (ಕೊಬ್ಬು) ದೇವತೆಗೆ ದೀಪ ಉರಿಸುತ್ತಾರೆ. ಕೋಣದ ತಲೆಯನ್ನು ಬಲಿಪೀಠದ ಮೇಲೆ ಇಟ್ಟಿರುತ್ತಾರೆ. ಕೋಣದ ದೇಹವನ್ನು ದಲಿತರು (ವಾದ್ಯಗಾರರು) ಮನೆಗೆ ಕೊಂಡೊಯ್ಯುತ್ತಾರೆ.

**೬. ಪಲ್ಲಕ್ಕಿ ಉತ್ಸವ ಅಥವಾ ಪಾಲ್ಕಿ**

ಜಾತ್ರೆಗಳಲ್ಲಿ ದೇವರ ಉತ್ಸವ ಮೂರ್ತಿ ಹೊರಡುವುದು ಪಲ್ಲಕ್ಕಿಗಳಲ್ಲಿಯೇ ಇದನ್ನು ಪಲ್ಲಕ್ಕಿ ಸೇವೆ, ಪಾಲ್ಕಿ ಅಥವಾ ಹೂವಿನ ಪಲ್ಲಕ್ಕಿ ಎಂದು ಜನಪದರು ಕರೆಯುತ್ತಾರೆ. ಹೂವಿನಲ್ಲಿ ಅಲಂಕೃತಗೊಂಡಿದ್ದರೆ. ಹೂವಿನ ಪಲ್ಲಕ್ಕಿ ಹೂಗಳನ್ನು ಹೊರತುಪಡಿಸಿ ಕೇವಲ ಮುತ್ತುಗಳಿಂದಲೇ ಅಲಂಕೃತಗೊಂಡ ಪಲ್ಲಕ್ಕಿಯಾದರೆ ಮುತ್ತಿನ ಪಲ್ಲಕ್ಕಿ ಎಂದು ಜನಪದರು ಗುರುತಿಸುತ್ತಾರೆ. ಮೊದಲು ದೇವಸ್ಥಾನದಲ್ಲಿ ಪೂಜಿಸಿ ಉತ್ಸವ ಮೂರ್ತಿಯನ್ನು ಈ ಪಲ್ಲಕ್ಕಿಗಳಲ್ಲಿ ತಂದು ಪ್ರತಿಷ್ಠಾಪಿಸಿ ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಕರೆದೊಯುತ್ತಾರೆ. ವಾದ್ಯಗೋಷ್ಠಿ, ಕರಡಿ ಮೇಳ, ನಂದಿಕೋಲು, ಹುಲಿವೇಶ, ಡೊಳ್ಳುಕುಣಿತ, ವೀರಗಾಸೆ ತಂಡದೊಡನೆ

ಸಾಗುತ್ತಿದ್ದರೆ ಅದನ್ನು ನೋಡಿ ಆನಂದಿಸುವುದೇ ಅದೃಷ್ಟ. ಈ ರೀತಿ ಪಲ್ಲಕ್ಕಿಗಳಲ್ಲಿ ಮೆರವಣಿಗೆ ಹೊರಟಾಗ ವಿದ್ಯುತ್ ಅಲಂಕಾರ, ಪಟಾಕಿ, ಮದ್ದುಗುಂಡು ಸಿಡಿಸಿದಾಗ ದೇವಲೋಕವೇ ಭೂಮಿಗೆ ಇಳಿದು ಬಂದ ರೀತಿ ಕಾಣುತ್ತದೆ. ಮೆರವಣಿಗೆ ಸಂದರ್ಭದಲ್ಲಿ ಉತ್ಸವ ಮೂರ್ತಿ ಹಣ್ಣುಕಾಯಿ ಕೊಟ್ಟು ಪೂಜೆ ಮಾಡಿಸುತ್ತಾರೆ.[೨೮]

**೭. ಗಾವು ಸಿಗಿಯುವುದು**

ಕೆಲವು ಜನಪದ ವಿದ್ವಾಂಸರು ಈ ಗಾವನ್ನು ಬೇಟೆಯ ಸಂಸ್ಕೃತಿಯ ಅವಶೇಷವಾಗಿ ಆಚರಣೆಯ ರೂಪದಲ್ಲಿ ಉಳಿದುಕೊಂಡು ಬಂದಿದೆ ಎನ್ನುತ್ತಾರೆ. ಇದು ಮನುಷ್ಯನು ಮೃಗ ಸದೃಶ್ಯವಾದ ಅವಸ್ಥೆಯಲ್ಲಿದ್ದಾಗಿನ ಸ್ಥಿತಿಯ ಒಂದು ಪುನರಾವರ್ತನೆ ಅಥವಾ ಪುನರಭಿನಯವಾಗಿದೆ.

ಧೂಳ್ಮರಿ, ಹಲ್ಮರಿ, ಬ್ಯಾಟೆ ಜಗಿಯೋದು ಎಂಬ ಹೆಸರಿನಲ್ಲಿರುವ ಗಾವು ಸಿಗಿಯುವ ಕ್ರಿಯೆಯನ್ನು ಗಂಗಾಮತಸ್ಥರು ಅಥವಾ ನಾಯಕರು ಹೆಚ್ಚಾಗಿ ಕೈಗೊಳ್ಳುತ್ತಾರೆ. ಗಾವು ಸಿಗಿಯುವುದು ಎಂದರೆ ಉಪವಾಸದಿಂದಿರುವ ವ್ಯಕ್ತಿಗೆ ಜಾತ್ರೆಯ ದಿವಸ ಅರೆವಾದ್ಯಗಳ ಶಬ್ದದಿಂದ ಅವನಿಗೆ ರೋಷ ಆವೇಶ ಹೆಚ್ಚಾಗುತ್ತದೆ. ಕಂಬಕ್ಕೆ ಕಪ್ಪು ಬಣ್ಣದ ಗಾವು ಮರಿಗಳನ್ನು ಕಟ್ಟಿರುತ್ತಾರೆ. ಆತನು ರೋಷದಿಂದ ತಪ್ಪಿಸಿಕೊಳ್ಳಲು ಯತ್ನಿಸುವ ಮೇಕೆ ಮರಿ (ಕುರಿ)ಯನ್ನು ಹಿಡಿದು ತಂದು ಅದರ ಕತ್ತನ್ನು ಒಂದು ಕೈಯಲ್ಲಿ ಎರಡು ಕೈಕಾಲುಗಳನ್ನು ಇನ್ನೊಂದು ಕೈಯಲ್ಲಿ ಹಿಡಿದು ಕತ್ತಿಗೆ ಬಾಯಿಗೆ ಹಾಕಿ ಕಚ್ಚಿ ರಕ್ತ ಹೀರುತ್ತಾನೆ. ನಂತರ ಅದರ ಹೊಟ್ಟೆಗೆ ಬಾಯಿ ಹಾಕಿ ದೇಹವನ್ನು ಚಿಂದಿ ಮಾಡಿ ಬಿಸಾಡುತ್ತಾನೆ. ನಂತರ ಆತನಿಗೆ ತಿನ್ನಲು ಮೊಸರು ಅನ್ನದ ಉಂಡೆಗಳನ್ನು ಕೊಡುತ್ತಾರೆ. ಇದೊಂದು ಅಮಾನುಷ ಆಚಣೆಯಾಗಿದೆ.

**೮. ಬ್ರಹ್ಮರಥೋತ್ಸವ**

ಸಾಮಾನ್ಯವಾಗಿ ಧ್ವಜಾರೋಹಣದ ದಿನ ದೇವಾಲಯದ ಮುಂದೆ ರಥವನ್ನು ನಿಲ್ಲಿಸಿ ಶುದ್ಧಗೊಳಿಸಿ ರಥದ ತುತ್ತ ತುದಿಯಲ್ಲಿ ಕಳಶವನ್ನು ಮತ್ತು ನಾಲ್ಕು ಛತ್ರಿಗಳನ್ನು ಸ್ಥಾಪಿಸುವ ಮೂಲಕ ಬ್ರಹ್ಮ ರಥೋತ್ಸವಕ್ಕೆ ಚಾಲನೆ ನೀಡಲಾಗುತ್ತದೆ. ಆ ನಂತರ ರಥದ ಅಲಂಕಾರ ಕಾರ್ಯ ಭರದಿಂದ ನಡೆಯುತ್ತದೆ. ದೊಡ್ಡದಾದ ನಾಲ್ಕು ಮರದ ಗಾಲಿಗಳ ಮೇಲೆ ನಿಂತ ಮರದಿಂದಲೇ ಮಾಡಿದ ನಾಲ್ಕು ದಿಕ್ಕಿಗೂ ನಿಂತ ರಕ್ಕಸ ಸಿಂಹಗಳನ್ನು, ಮಿಥುನ ಶಿಲ್ಪಗಳನ್ನು ಕೆತ್ತಲಾಗಿರುತ್ತದೆ. ರಥದ ಪೀಠದ ಅಂಕಣದಿಂದ ಮೇಲ್ಭಾಗಕ್ಕೆ ರಂಗು ರಂಗಿನ ಏಳು ಅಂಕಣಗಳ ಬಟ್ಟೆಯಿಂದ ಸಿಂಗರಿಸಲಗಿದ್ದು, ಅದಕ್ಕೂ ಮೇಲ್ಭಾಗದಲ್ಲಿ ಬಿದಿರಿನ ಪಟ್ಟಿಗಳನ್ನು ತಯಾರಿಸಿ ದುಂಡಾಕಾರದಲ್ಲಿ ಬಿಗಿದು ಕಟ್ಟಿ, ರಂಗು ಚೆಲ್ಲಿದ ಹಳದಿ ಬಟ್ಟೆಯಿಂದ ಸಿಂಗರಿಸಿರುತ್ತಾರೆ. ಅದರ ಮುಂಭಾಗದಲ್ಲಿ ಆಂಜನೇಯನ ಚಿತ್ರ ಪಠವನ್ನು ಕಟ್ಟಲಾಗಿರುತ್ತದೆ. ರಥದ ಎತ್ತರವು ಸುಮಾರು ೩೦-೪೫ ಅಡಿಗಳ ಎತ್ತರವಾಗಿರುತ್ತದೆ. ಹೀಗೆ ಸಿಂಗರಿಸಿದ ರಥದೊಳಗೆ ಉತ್ಸವ ಮೂರ್ತಿಯನ್ನು ಕರೆತಂದು ಪ್ರತಿಷ್ಠಾಪಿಸಲಾಗುತ್ತದೆ.

ರಥದ ಪುಣ್ಯಾರ್ಚನೆಗೆ ಹಾಲು, ತುಪ್ಪ, ಮೊಸಲು, ಗೋಮೂತ್ರ ಸಗಣಿಯನ್ನು ಸಿಂಪಡಿಸಿ ರಥವನ್ನು ಶುದ್ಧಗೊಳಿಸಿ ಕಳಸಗಳನಿಟ್ಟು ಮಹಾಮಂಗಳಾರತಿಯಾದ ನಂತರ

ಮೊದಲು ಪೂರ್ವಕ್ಕೆ ನಡೆಸಲಾಗಿರುತ್ತದೆ. ಭಕ್ತರು ದೇವರಲ್ಲಿ ಇಷ್ಟಾರ್ಥಗಳನ್ನು ಬೇಡಿಕೊಂಡು ಬಾಳೆಹಣ್ಣು ಮತ್ತು ದವಣೆ ಎಂಬ ಪತ್ರೆಯನು ರಥದ ಮೇಲೆ ಎಸೆಯುತ್ತಾರೆ ಉತ್ಸವವೆಲ್ಲಾ ಮುಗಿದ ನಂತರ ದೇವರ ಉತ್ಸವ ಮೂರ್ತಿಯನ್ನು ಗ್ರಾಮದ ಪ್ರಮುಖ ಬೀದಿಯಲ್ಲಿ ಮೆರವಣಿಗೆ ಮಾಡಿಸಿ ಗುಡಿಗೆ ಮರಳಿಸುತ್ತಾರೆ. ಒಟ್ಟಿನಲ್ಲಿ ಒಂದು ದೇವಾಲಯವಿದ್ದಂತೆ ಇರುವ ರಥವು ಭಾರತೀಯ ಶಿಲ್ಪ ಪರಂಪರೆಯಲ್ಲಿ ವಿಶಿಷ್ಟ ಸ್ಥಾನವಿದೆ.

**೯. ಅನ್ನ ಸಂತರ್ಪಣೆ**

ಜಾತ್ರೆಯಲ್ಲಿ ಸಾಮಾನ್ಯವಾಗಿ ತೇರು ಎಳೆದ ದಿನ ದೇವರ ಹೆಸರಿನಲ್ಲಿ ಅನ್ನಸಂತರ್ಪಣೆಯನ್ನು ನೆರವೇರಿಸಲಾಗುತ್ತದೆ. ಯಾರು ಏನನ್ನು ನೀಡಲು ಸಾಧ್ಯವೋ ಹಾಗೆ ಅವರವರ ಸಾಮರ್ಥ್ಯಕ್ಕೆ ತಕ್ಕಂತೆ ದೇವರ ಸೇವೆಗೆ ಇಚ್ಛೆಯಿಂದ ಹಣ, ಅಕ್ಕಿ, ತರಕಾರಿ, ಎಣ್ಣೆ, ಬೇಳೆ, ಊಟದ ಎಲೆ, ಎರುವಲು, ಪಾತ್ರೆ ಸಾಮಾನು, ಶಾಮಿಯಾನವನ್ನು ಇಚ್ಛಾನುಸಾರದಂತೆ ದೇವರ ಸೇವೆಗೆ ದಾನಿಗಳು ನೀಡುವ ಎಲ್ಲಾ ಪದಾರ್ಥಗಳನ್ನು ಒಟ್ಟಾಗಿಸಿ ಜಾತ್ರೆಯಲ್ಲಿ ಅನ್ನಸಂತರ್ಪಣೆ ನಡೆಸುತ್ತಾರೆ. ಜಾತಿ, ಬೇಧವನ್ನು ತೊರೆದು ಎಲ್ಲರೂ ಭಾಗವಹಿಸುತ್ತಾರೆ.

ಜನತೆಯನ್ನು ಅನ್ನದಿಂದ ಸಂತೃಪ್ತಿಪಡಿಸಿದರೆ ದೇವರು ಸಂತೃಪ್ತನಾಗುತ್ತಾನೆಂಬ ನಂಬಿಕೆ ಇಂದಿಗೂ ಪ್ರಜ್ವಲವಾಗಿದೆ. ಅನ್ನ ಪರಬ್ರಹ್ಮ ಸ್ವರೂಪ ಎಂದು ನಂಬುವ ಭಕ್ತಸ್ತೋಮ ಅನ್ನದಾನವನ್ನು ಶ್ರೇಷ್ಠ ದಾನವೆಂದು ಬಗೆದು ಈ ಆಚರಣೆಯನ್ನು ಜೀವಂತವಾಗಿರಿಸಿದೆ.[೨೯]

**ಪ್ರಮುಖ ಉತ್ಸವಗಳು**

ಯಲಬುರ್ಗ ಪಟ್ಟಣದ ಪ್ರಮುಖ ದೇವಾಲಯಗಳಲ್ಲಿ ಹಾಗೂ ಸಂಘಸಂಸ್ಥೆಗಳಲ್ಲಿ ಕೆಲವು ಉತ್ಸವಗಳನ್ನು ನೆರವೇರಿಸಲಾಗುತ್ತದೆ. ಅವುಗಳೆಂದರೆ

**೧. ಕಲ್ಯಾಣೋತ್ಸವ**

ಪಟ್ಟಣದ ಪ್ರಮುಖ ದೇವಾಲಯಗಳಾದ ಪಾಂಡುರಂಗ, ವೆಂಕಟರಮಣ, ದೇವಾಲಯಗಳಲ್ಲಿ ವಿಶೇಷವಾಗಿ ಕಲ್ಯಾಣೋತ್ಸವ ಮಾಡಲಾಗುತ್ತದೆ. ಸಪ್ತ ಋಷಿಗಳು ವಿಷ್ಣುವಿನ ದಶಾವತಾರದ ಗುಣಗಳನ್ನು ಹೇಳಿ ಜಗತ್ತಿನ ಪಾಲನೆಗಾಗಿ ಲಕ್ಷ್ಮೀಯನ್ನು ಧಾರೆ ಎರೆದು ಕೊಟ್ಟ ಕಥೆಯನ್ನು ಹೇಳಿ ವಿಷ್ಣು, ಲಕ್ಷ್ಮಿಯ ಕಲ್ಯಾಣ ನೆರವೇರಿಸುತ್ತಾರೆ. ದೇವರನ್ನು ಹಾಡಿ, ಹೊಗಳಿ, ಉಯ್ಯಾಲೆಯಲ್ಲಿ ತೂಗಿಸಿ ಸೇವೆಗೈಯುತ್ತಾರೆ. ಮದುವೆಯಂತೆ ಶಾಸ್ತ್ರೋಕ್ತವಾಗಿ ಸೇವೆ ನೆರವೇರುತ್ತದೆ. ಉದಾ: ಗಿರಿಜಾ ಕಲ್ಯಾಣ, ಶ್ರೀನಿವಾಸ ಕಲ್ಯಾಣ.

**೨. ಹನುಮ ವಾಹನೋತ್ಸವ**

ವಿಷ್ಣು ನಾನಾ ಅವತಾರಗಳಲ್ಲಿ ಅನೇಕ ಅಸುರರನ್ನು ಸಂಹರಿಸಿದ ಕಾರಣಕ್ಕಾಗಿ ಹನುಮ, ಆದಿಶೇಷ, ಗರುಡ, ಕುರುಗೆ, ದೇವರನ್ನು ತಮ್ಮ ಹೆಗಲ ಮೇಲೆ ಹೊತ್ತು ಮೆರೆಸಿ ದೇವರ ದಣಿವನ್ನು ಆರಿಸುವ ಸಲುವಾಗಿ ವರವನ್ನು ಕೇಳಿದರು. ಆಗ ಮಹಾವಿಷ್ಣು ಒಪ್ಪಿಗೆಯನ್ನು ಸೂಚಿಸಿದ ಕಾರಣಕ್ಕಾಗಿ ಈ ಉತ್ಸವಗಳು ನಡೆಯುತ್ತವೆ. ಹರಕೆ ಹೊತ್ತ ಭಕ್ತರು ಇಲ್ಲವೇ

ಸೇವೆಗೆಂದೇ ನೇಮಕವಾದ ಧರ್ಮದರ್ಶಿಗಳು ಸಂಕಲ್ಪವನ್ನು ಹೊತ್ತು ಈ ಆಚರಣೆಯನ್ನು ನೆರವೇರಿಸಿ ಕೊಡುತ್ತಾರೆ.

ಹನುಮವಾಹನೋತ್ಸವದಲ್ಲಿ ರಾಮನ ಭಕ್ತ ಹನುಮಂತನ ವಿಗ್ರಹದ ಮೇಲೆ ದೇವರ ಉತ್ಸವಮೂತಿಯನ್ನು ಕೂರಿಸಿ ಊರಲ್ಲೆಲ್ಲಾ ಉತ್ಸವ ಮೂರ್ತಿಯನ್ನು ಮೆರವಣಿಗೆ ಮಾಡುತ್ತಾರೆ.

**೩. ಗರುಡವಾಹನೋತ್ಸವ**

ಗರುಡ ವಾಹನದ ಮೇಲೆ ಇಷ್ಟ ದೇವರ ಉತ್ಸವಮೂರ್ತಿಯನ್ನು ಕುರಿಸಿ ಮೆರವಣಿಗೆ ಮಾಡುವುದನ್ನು ಗರುಡೋತ್ಸವ ಎಂದು ಕರೆಯುತ್ತಾರೆ. ಇದರ ಹಿನ್ನೆಲೆಯಲ್ಲಿ ಒಂದು ಐತಿಹ್ಯವಿದೆ. ಈ ಹಿಂದೆ ದೇವರ ಮೇಲೆ ಸೇವಾರ್ಥವಾಗಿ ಹಾಕಲಾಗಿದ್ದ ಒಡವೆಯನ್ನು ಕೊಳ್ಳೆ ಹೊಡೆದು ಹೋದ ಕಳ್ಳರನ್ನು ಬೇಟೆಯಾಡಲು ದೇವರು ಗರುಡ ವಾಹನವನ್ನು ಏರಿ ಹೊರಟನೆಂಬ ನಂಬಿಕೆ ಭಕ್ತಾದಿಗಳಲ್ಲಿದೆ.

ದೇವರು ದುಷ್ಟ ಶಿಕ್ಷಕ ಶಿಷ್ಟ ರಕ್ಷಣದ ಹೊಣೆ ಹೊತ್ತ ಕಾರಣಕ್ಕಾಗಿ ದೇವರಿಗೆ ಈ ಸೇವೆ ಸಲ್ಲಿಸುತ್ತಾರೆ. ಅದೇ ರೀತಿ ಶೈವ ದೇವಾಲಯದ ಉತ್ಸವ ಮೂರ್ತಿಗಳನ್ನು ನಂದಿ ಮತ್ತು ಕುದುರೆ ವಾಹನ ಮಡಿ ಮೆರವಣಿಗೆ ಮಾಡುತ್ತಾರೆ.[೩೦]

**೪. ದೀಪೋತ್ಸವ**

ವಿಶೇಷವಾಗಿ ಕಾರ್ತಿಕ ಮಾಸದ (ದೀಪಾವಳಿ) ಪಟ್ಟಣದ ಎಲ್ಲಾ ದೇವಾಲಯದಲ್ಲಿ ಮಣ್ಣಿನ ದೀಪಗಳನ್ನು ಜೋಡಿಸಿ ಸಗಣಿ ಇಟ್ಟು, ದೀಪಕ್ಕೆ ಎಣ್ಣೆ ಬಿಟ್ಟು ದೀಪ ಹಚ್ಚಲಾಗುತ್ತದೆ. ಭಕ್ತರ ಇಚ್ಛೆಗೆ ಬಿಟ್ಟಂತೆ ೧೦೧, ೫೦೧, ೧೦೦೧, ೧ ಲಕ್ಷ ದೀಪವನ್ನು ಹಚ್ಚುವುದು ವಿಶೇಷ ವಿಜಯದುರ್ಗ ದೇವಾಲಯದಲ್ಲಿ ಪ್ರತಿ ವರ್ಷ ಕಾರ್ತಿಕ ಮಾಸದಲ್ಲಿ ಲಕ್ಷದೀಪೋತ್ಸವ ಆಚರಣೆ ಮಾಡಲಾಗುತ್ತದೆ.

ದೀಪೋತ್ಸವದಲ್ಲಿ ಭಕ್ತರ ಆಪೇಕ್ಷಣೆ ಅನುಸಾರವಾಗಿ ತುಪ್ಪದ ದೀಪ, ಹೊಂದೆ ಎಣ್ಣೆ ಹಾಗೂ ಸಾಧಾರಣ ಎಣ್ಣೆ ಬಳಸಿ ದೀಪವನ್ನು ನಂದಿಸುತ್ತಾರೆ.

ಅದೇ ರೀತಿ ಪಟ್ಟಣದಲ್ಲಿ ಸ್ವಾತಂತ್ರೋತ್ಸವ, ಗಣರಾಜ್ಯೋತ್ಸವ, ಕನ್ನಡ ರಾಜ್ಯೋತ್ಸವ, ಗಾಂಧಿಜಯಂತಿ, ಬಸವ ಜಯಂತಿ, ಕನಕ ಜಯಂತಿ, ಆಚರಣೆಗಳನ್ನು ಶಾಲಾ ಕಾಲೇಜುಗಳು, ಸರ್ಕಾರಿ ಕಛೇರಿಗಳಲ್ಲಿ ಮತ್ತು ಸಂಘ ಸಂಸ್ಥೆಗಳಲ್ಲಿ ಸಡಗರ ಸಂಭ್ರಮದಿಂದ ಆಚರಿಸುವುದನ್ನು ಕಾಣಬಹುದಾಗಿದೆ.

**೫.೩. ಹಬ್ಬ-ಹರಿದಿನಗಳು**

ನಾವು ವಾಸಿಸುವ ಈ ಪ್ರಪಂಚ ಧರ್ಮ ಕ್ಷೇತ್ರವೂ ಹೌದು, ಕರ್ಮಕ್ಷೇತ್ರವೂ ಹೌದು ಇಲ್ಲಿ ವಾಸಿಸುವ ನಾವು ನಮ್ಮ ಒಳಿತಿಗಾಗಿ ಸುಖ ಸಂತೋಷಕ್ಕಾಗಿ ಬಾಳಿನಲ್ಲಿ ಹೊಂದಾಣಿಕೆಗಾಗಿ, ಸಾಧನೆಯಿಂದ ಸಿದ್ಧಿಯೆತ್ತ ಸಾಗುವುದಕ್ಕಾಗಿ, ಸಮಾಜ ಸಂಘಟನೆಗಾಗಿ, ಆತ್ಮೀಯರೊಂದಿಗೆ ಬೆರೆಯಲಿಕ್ಕಾಗಿ ಹಲವು ಹಬ್ಬ-ಹರಿದಿನಗಳನ್ನು ಆಚರಿಸುತ್ತಾ ಬಂದಿದ್ದೇವೆ. ವ್ರತ ನಿಯಮಗಳನ್ನು

ಎಲ್ಲಾ ದಿನಗಳಂದು ಆಚರಿಸಲು ಸಾಧ್ಯವಿಲ್ಲ. ಕೊನೇಪಕ್ಷ ಇಂಥ ದಿನಗಳಲ್ಲಾದರೂ ಸ್ವಲ್ಪ ದೇಹದಂಡನೆ, ಆತ್ಮ ಚಿಂತನೆ ಮಾಡಿದಾಗ ಅಲ್ಲೂ ಇಲ್ಲೂ ಸಲ್ಲುವವರಾಗಿ ಮಾನವ ಮಾಧವನಾದಾನು.[೩೧] ಎಲ್ಲಾ ಹಬ್ಬಗಳಲ್ಲಿ ಕಂಡುಬರುವ ಸಮಾನ ಅಂಶವೆಂದರೆ ಪ್ರಾತಃಕಾಲದ ತೈಲಾಭ್ಯಂಜನ ಸ್ನಾನ, ಹೊಸ ವಸ್ತ್ರಧಾರಣೆ, ಶುಚಿ-ರುಚಿ, ಭೋಜನ, ಬಂಧು-ಬಾಂಧವರ ಸುಮಧುರ ಮಿಲನ, ಜಪ-ತಪ, ಪೂಜೆ ಪುನಸ್ಕಾರ, ದಾನ-ಧರ್ಮ, ನೃತ್ಯ-ಸಂಗೀತ, ಭಜನೆ ಮುಂತಾದ ಮನರಂಜನೆಗಳು ಇವೆಲ್ಲಾ ಮನಸ್ಸಿಗೆ ಸಂತೋಷವನ್ನುಂಟು ಮಾಡುತ್ತವೆ ಎಂಬ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ನಮ್ಮ ಪೂರ್ವಿಕರು ಹಬ್ಬ-ಹರಿದಿನಗಳ ವಿಶೇಷ ಆಚರಣೆಯನ್ನು ಅನುಸರಿಸುತ್ತಾ ಬಂದಿದ್ದಾರೆ.[೩೨] ಯಲಬುರ್ಗಾ ಪಟ್ಟಣದಲ್ಲಿ ಈ ಕೆಳಕಂಡಂತೆ ಹಬ್ಬ-ಹರಿದಿನಗಳನ್ನು ಆಚರಿಸುತ್ತಾರೆ.

**೧. ಯುಗಾದಿ**

"ಯುಗ ಯುಗಾದಿ ಕಳೆದರೂ ಯುಗಾದಿ ಮರಳಿ ಬರುತಿದೆ. ಹೊಸ ವರುಷಕ್ಕೆ ಹೊಸ ಹರುಷವ ಹೊಸತು ಹೊಸತು ತರುತಿದೆ" ಎಂಬ ಕವಿ ಬೇಂದ್ರೆಯವರ ವಾಣಿಯಂತೆ ಹೊಸ ವರ್ಷ ಹರ್ಷದಾಯಕವಾಗಲೆಂಬ ಒಳ್ಳೆ ಇಚ್ಛೆಯಿಂದ ಆಚರಿಸುವ ಹಬ್ಬವೇ ಯುಗಾದಿ ಯುಗ ಎಂದರೆ "ನೂತನ ವರ್ಷ, ಆದಿ ಎಂದರೆ ಆರಂಭ ಎಂದರ್ಥ ಹಿಂದೂ ಪಂಚಾಂಗದ ಪ್ರಕಾರ ಯುಗಾದಿಯು ವರ್ಷದ ಆರಂಭದ ದಿನವಾಗಿದ್ದು, ಹೊಸ ವರ್ಷ ಎಂಬುದಾಗಿ ಆಚರಣೆ ಮಾಡುತ್ತಾರೆ. ಆಸುರೀ ಶಕ್ತಿಯ ವಿರುದ್ಧ ಸಾತ್ವಿಕ ಶಕ್ತಿಯ ವಿಜಯವೇ ಯುಗಾದಿಯ ವೈಶಿಷ್ಟ್ಯ, ಈ ದಿನ ಶ್ರೀರಾಮ ರಾವಣನನ್ನುಕೊಂದು ಅಯೋಧ್ಯೆಗೆ ಬಂದು ರಾಮ ರಾಜ್ಯವಾಳಲು ಪ್ರಾರಂಭಿಸಿದ ಪ್ರಯುಕ್ತ ಯುಗಾದಿ ಆಚರಿಸುತ್ತಾರೆ. ಬೇವು-ಬೆಲ್ಲವನ್ನು ತಿನ್ನುವ ಉದ್ದೇಶ ಸುಖ-ದುಃಖ, ಹಗಲು-ರಾತ್ರಿ, ನೋವು-ನಲಿವು, ಪ್ರೀತಿ-ದ್ವೇಷಗಳ ಸಂಕೇತವಾಗಿದ್ದು, ಜೀವನದಲ್ಲಿ ಕಹಿ ಮತ್ತು ಸಿಹಿಯನ್ನು ಸಮಾನವಾಗಿ ತೆಗೆದುಕೊಳ್ಳಬೇಕೆಂಬ ಸಂಕೇತವಾಗಿದೆ.[೩೩]

**೨. ಮಕರ ಸಂಕ್ರಾಂತಿ**

ಬಂದಿತು ಬಂದಿತು ಸಂಕ್ರಾಂತಿ ತಂದಿತು ತಂದಿತು ಸುಖಶಾಂತಿ ಎಂಬ ಕವಿವಾಣಿಯಂತೆ ಸಂಕ್ರಾಂತಿ ಜನರಲ್ಲಿ ಉತ್ಸಾಹ ಚಿಮ್ಮುತ್ತದೆ. ಅಂದರೆ ಈವರೆಗೆ ದಕ್ಷಿಣದತ್ತ ವಾಲಿ ಚಲಿಸುವ ಸೂರ್ಯ, ಮಕರ ಸಂಕ್ರಮಣದಿಂದ ತನ್ನ ಮಾರ್ಗವನ್ನು ಬದಲಾಯಿಸಿ (ಪಥ) ಉತ್ತರದ ಕಡೆ ವಾಲುತ್ತಾನೆ. ಆದ್ದರಿಂದ ಸಂಕ್ರಾಂತಿಯನ್ನು ಉತ್ತರಾಯಣ ಪುಣ್ಯಕಾಲ ಎಂದು ಕರೆಯುತ್ತಾರೆ.

ಗ್ರಾಮೀಣ ಪ್ರದೇಶದಲ್ಲಿ ಸಂಕ್ರಾಂತಿಯು ಸುಗ್ಗಿಯ ಕಾಲವಾಗಿದ್ದು, ತಮ್ಮ ಹೊಲದಲ್ಲಿ ಬೆಳೆದ ಧಾನ್ಯಗಳಿಗೆ ರಾಶಿಪೂಜೆ ಮಾಡಿ ಮನೆಗೆ ಒಯ್ದು ಸುಗ್ಗಿಯನ್ನು ಆಚರಿಸುತ್ತಾರೆ. ಕೃಷಿಯಲ್ಲಿ ಸಹಕರಿಸಿದ ಜಾನುವಾರುಗಳನ್ನು ಮೈತೊಳೆದು ಶುಚಿಗೊಳಿಸಿ, ಬಣ್ಣಹಚ್ಚಿ ಅಲಂಕರಿಸಿ

ಸಾಯಂಕಾಲ ಬೆಂಕಿಯ ಕಿಚ್ಚನ್ನು ಹಾರಿಸುತ್ತಾರೆ. ರೈತರು ಮತ್ತು ಜಾನುವಾರುಗಳಿಗೆ ವಿಶೇಷ ಆಚರಣೆಯಾಗಿರುತ್ತದೆ.

ಜಾನುವಾರುಗಳನ್ನು ಪೂಜೆ ಮಾಡುತ್ತಾರೆ. ಅದೇ ರೀತಿ-ಮನೆಗಳಲ್ಲಿ ಎಲ್ಲಾ ಸದಸ್ಯರು ಎಳ್ಳೆಣ್ಣೆ ಸ್ನಾನ ಮಾಡಿ, ಹೊಸ ಬಟ್ಟೆ ಧರಿಸಿ ಮನೆಯಲ್ಲಿ ಸಿಹಿ ಮಾಡುತ್ತಾರೆ. ವಿಶೇಷವಾಗಿ ಹೆಣ್ಣುಮಕ್ಕಳು ದೇವರ ದರ್ಶನ ಮಾಡಿಕೊಂಡು ಎಳ್ಳು, ಸಕ್ಕರೆ, ಕೊಬ್ಬರಿ, ನೆಲಗಡಲೆ, ಕಬ್ಬು, ಬಾಳೆಹಣ್ಣು, ಸಕ್ಕರೆ ಅಚ್ಚು, ಇತ್ಯಾದಿಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುತ್ತಾರೆ. ಎಳ್ಳು, ಬೆಲ್ಲ ಸವಿಯೋಣ ಒಳ್ಳೇ ಮಾತಾಡೋಣ ಎಂದು ಶುಭಾಶಯ ಕೋರುತ್ತಾರೆ. ಪೊಂಗಲ್ ಮತ್ತು ಸಾವಿಗೆ ವಿಶೇಷವಾದ ಖಾದ್ಯವಾಗಿರುತ್ತವೆ.

**೩. ಮಹಾಶಿವರಾತ್ರಿ**

ಪ್ರಪಂಚಕ್ಕೆ ತಂದೆಯೆನಿಸಿದ ಶಿವನ ಆರಾಧನೆಗೆ ಪ್ರಶಸ್ತ ಮುಹೂರ್ತ ಈ ಮಹಾಶಿವರಾತ್ರಿ, ಅರುಣೋದಯಕ್ಕೆ ಎದ್ದು ಸ್ನಾನ ಮಾಡಿ ಶುಭವಸ್ತ್ರವನ್ನುಟ್ಟು ಸಮಸ್ತ ಪಾಪ ನಿವಾರಣೆಗಾಗಿಯೂ ಜ್ಞಾನ ಮೋಕ್ಷ ಪ್ರಾಪ್ತಿಗಾಗಿಯೂ ಭಕ್ತಿಯಿಂದ ಧ್ಯಾನಿಸಿ ಜಾಗರಣೆ, ಉಪವಾಸ ಅರ್ಚನೆ, ಅಭಿಷೇಕ ಶಿವಸಂಕೀರ್ತನ ಭಜನೆ ಮತ್ತು ಶಿವರಾತ್ರಿಯ ಕಥೆ ಹೇಳುವ ಮೂಲಕ ಶಿವರಾತ್ರಿಯನ್ನು ಕಳೆಯಬೇಕು ಎಂಬುದು ವಾಡಿಕೆ.

ಶಿವಪೂಜೆಗೆ ಬಿಲ್ವಪತ್ರಿ ವಿಶೇಷವಾಗಿದ್ದು, ಜಾತಿ-ಮತ, ಸ್ತ್ರೀ-ಪುರುಷ ಬೇಧವಿಲ್ಲದೆ, ಮಹಾಶಿವರಾತ್ರಿಯಂದು ದೇಶದ ನಾನಾ ಮೂಲೆಯಲ್ಲಿರುವ ಶಿವಾಲಯಗಳಲ್ಲಿ ವಿಶೇಷ ಪೂಜೆ ನಡೆಯುತ್ತದೆ.

**೪. ದೀಪಾವಳಿ**

ಬೆಳಕಿನ ಹಬ್ಬ ದೀಪಾವಳಿ ನಮ್ಮನ್ನು ಕತ್ತಲೆಯಿಂದ ಬೆಳಕಿನಡೆ, ಮೃತ್ಯುವಿನಿಂದ ಅಮೃತದೆಡೆ ಒಯ್ಯುವ ಬೆಳಕಿನ ಹಬ್ಬ ದೀಪಾವಳಿ, ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಪ್ರಾಂತ ಭೇದವಿಲ್ಲದೆ. ಎಲ್ಲಾ ಹಿಂದೂಗಳು, ಬಂಧು-ಬಾಂದವರೊಂದಿಗೆ ಉತ್ಸಾಹದಿಂದ ಆಚರಿಸುವ ದೊಡ್ಡ ಹಬ್ಬ ದೀಪಾವಳಿ.

ಶರದೃತುವಿನ ಮಧ್ಯಭಾಗದಲ್ಲಿ ಬರುವ ಈ ಹಬ್ಬದ ಸುಸಮಯ ಅನ್ನದೇವರ ಅವತಾರ ಕಾಲ. ಈ ಹಬ್ಬದ ವೇಳೆಗೆ ಮುಂಗಾರು ಬೆಳೆ ಧಾನ್ಯಲಕ್ಷ್ಮಿಯ ರೂಪದಲ್ಲಿ ರೈತನ ಕೈ ಸೇರುತ್ತದೆ. ಮನೆ-ಮನೆಯ ಮನ-ಮನದ ಕತ್ತಲೆಯನ್ನು ಹೋಗಲಾಡಿಸುವ ಈ ಹಬ್ಬದಲ್ಲಿ ಬಂದು-ಬಾಂದವರ ಸುಮಧುರ ಮಿಲನ ನವ ವಸ್ತ್ರಧಾರಣ, ಸುಗ್ರಾಸ ಬೋಜನ ಮಾಡಿ, ಮನೆಯಲ್ಲಿ ದೀಪ ಹಚ್ಚಿ ಪಟಾಕಿ ಸಿಡಿಸುವ ಸಡಗರದ ಹಬ್ಬವಾಗಿರುತ್ತದೆ.

ಒಟ್ಟಾರೆ ಪ್ರಾಚೀನ ಕಾಲದ ಭಾಗ್ಯದ ಸ್ಮಾರಕವಾಗಿ ಭವಿಷ್ಯತ್ ಕಾಲದ ಸುಖದ ಸಂಕೇತವಾಗಿ, ವರ್ತಮಾನ ಕಾಲದ ಸಂಪತ್ತಿನ ಸ್ಮರಣೆಯಾಗಿ ಆತ್ಮೋನ್ನತಿಯ ಮಾರ್ಗವಾಗಿ

ಅಜ್ಞಾನವನ್ನು ಹೊಡೆದೋಡಿಸಿ ಸುಜ್ಞಾನವನ್ನು ಪಡೆಯುವ ಕುರುಹಾಗಿ, ಬಲೀಂದ್ರನಂಥ ತ್ಯಾಗ ಜೀವಿಯ ಸವಿನೆನಪಿಗಾಗಿ ಆಚರಿಸುವ ಬೆಳಕಿನ ಹಬ್ಬವೇ ದೀಪಾವಳಿಯಾಗಿದೆ.

**೫. ಗಣೇಶ ಚತುರ್ಥಿ**

ಭಾದ್ರಪದ ಶುದ್ಧ ಚತುರ್ಥಿ ಹಿಂದುಗಳಿಗೆ ಗಣಪತಿಯ ಹಬ್ಬದ ದಿನ, ಅಂದು ಈ ದೇವರಿಗೆ ವರ್ಷದಲ್ಲೇ ವಿಶೇಷವಾದ ವಾರ್ಷಿಕ ಪೂಜೆ ಈ ದಿನ ಗ್ರಾಮದೇವರೆಲ್ಲಾ ಒಟ್ಟಿಗೆ ಸೇರಿಕೊಂಡು ಗಣಪತಿಯ ಮಣ್ಣಿನ ಮೂರ್ತಿಯನ್ನಿಟ್ಟು ಪೂಜಿಸುತ್ತಾರೆ. ಮಣ್ಣಿನ ಮೂರ್ತಿ ಮಾಡಿ ಬಣ್ಣ ಬಣ್ಣಗಳಿಂದ ಅಲಂಕರಿಸಿ ಸುಂದರವಾದ ಮಂಟಪಕಟ್ಟಿ ಪೂಜೆ ಸಲ್ಲಿಸಿ ಫಲಪುಷ್ಪಗಳು ಕಡುಬು ಪಂಚ ಕಜ್ಜಾಯ ನೈವೇದ್ಯ ಮಾಡಿ ವಿನಿಯೋಗಿಸುವುದು ಭಾರತೀಯ ಕುಟುಂಬಗಳಲ್ಲೆಲ್ಲಾ ನಡೆದುಬಂದ ಪದ್ಧತಿ ನಮ್ಮ ದೇಶದಲ್ಲಿ ಬಹುಶಃ ಗಣಪತಿಯ ಗುಡಿ ಇಲ್ಲದ ಗ್ರಾಮವಿಲ್ಲ. ಗಣೇಶನ ವಿಗ್ರಹವಿಲ್ಲದ ಗೃಹವಿಲ್ಲ. ಯಾವುದೇ ಶುಭಕಾರ್ಯ ಕೈಗೊಂಡರು ಗಣಪತಿಗೆ ಪ್ರಥಮ ಪೂಜೆ ಸಲ್ಲುತ್ತದೆ. ಅಲ್ಲದೆ ವಿಘ್ನನಿವಾರಕ ಆಗಿದ್ದಾನೆ.

**೬. ಪಿತೃಪಕ್ಷ**

ಹಿರಿಯರ ಹಬ್ಬವಾದ ಪಿತೃಪಕ್ಷವು ಕರ್ನಾಟಕದಾದ್ಯಂತ ಆಚರಣೆಗೊಳ್ಳುತ್ತದೆ. ಕಡು ಬಡತನವಿದ್ದರೂ ಈ ಹಬ್ಬವನ್ನು ಅದ್ದೂರಿಯಗಿ ಮಾಡಬೇಕು. "ಮನೆಯ ಮಗನನ್ನಾದರೂ ಮಾರಿ ಹಬ್ಬ ಮಾಡು" ಎನ್ನುವ ನಾಣ್ಣುಡಿ ಇದೆ. ಭಯಭಕ್ತಿಯಿಂದ ಸಾಂಪ್ರದಾಯಿಕವಾಗಿ ಆಚರಿಸುತ್ತಾರೆ. ಮಹಾಲಯ ಅಮವಾಸ್ಯೆಯನ್ನು ಆಯ್ಕೆಮಾಡಿ ಹಬ್ಬವನ್ನು ನಿಶ್ಚಯ ಮಾಡಲಾಗುತ್ತದೆ. ಇಹ ಲೋಕವನ್ನು ತ್ಯಜಿಸಿರುವ ಹಿರಿಯರಿಗೆ ಗೌರವ ಸಲ್ಲಿಸುವುದೇ ಪಿತೃಪಕ್ಷ ಹಬ್ಬದ ಉದ್ದೇಶ, ಹಬ್ಬದ ದಿನ ಸಮಾಧಿಯ ಹತ್ತಿರ ಪೂಜೆ ಸಲ್ಲಿಸಿ, ಆ ದಿನ ರಾತ್ರಿ ಕೋಣೆಯೊಂದರಲ್ಲಿ ಕಳಶ, ಹೊಸ ಬಟ್ಟೆ, ಹಿರಿಯರು ಇಷ್ಟಪಡುತ್ತಿದ್ದ ಬಗೆ ಬಗೆಯ ಭಕ್ಷ್ಯ, ಬೋಜನಗಳು, ಫಲಪುಷ್ಪಗಳು, ತಿಂಡಿತಿನುಸುಗಳು ಬಳಸುತ್ತಿದ್ದ ವಸ್ತುಗಳು, ಬೀಡಿ, ಸಿಗರೇಟು ಮದ್ಯವನ್ನು ಇಟ್ಟು ಸಾಮ್ರಾಣಿ, ಗಂಧದ ಚೆಕ್ಕೆಯ ದೂಪಹಾಕಿ ಪೂಜೆ ಮಾಡಿ ೫ ನಿಮಿಷಗಳ ಕಾಲ ಹೊರಗೆ ಹೋಗುತ್ತಾರೆ. ನಂತರ ಆ ಎಡೆಯನ್ನು ಸ್ವಲ್ಪ ಬಿಟ್ಟು ಉಳಿದಿದ್ದನ್ನು ಎಲ್ಲರೂ ಊಟ ಮಾಡುತ್ತಾರೆ.[೩೪]

**೭. ನಾಗರ ಪಂಚಮಿ**

ನಮ್ಮ ಪ್ರಾಚೀನ ಸಂಸ್ಕೃತಿಯಲ್ಲಿ ಅನೇಕ ವೃಕ್ಷ ವಿಶೇಷಗಳು, ಪ್ರಾಣಿ ವಿಶೇಷಗಳು ಪಕ್ಷಿ ವಿಶೇಷಗಳು, ಸರ್ಪ ವಿಶೇಷಗಳು, ದಿವ್ಯ ಶಕ್ತಿಗಳ ಸಂಕೇತವಾಗಿ ಪೂಜಾರ್ಹವೆನಿಸಿವೆ. ಗಣಪತಿಯ ಹೊಟ್ಟೆಯ ಪಟ್ಟಿಯಾಗಿ, ಶಿವನ ಆಭರಣವಾಗಿ, ವಿಷ್ಣುವಿನ ಹಾಸಿಗೆಯಾಗಿ, ತ್ರಿಪುರ ಸಂಹಾರ ಕಾಲದಲ್ಲಿ ಮೇರುವೆಂಬ ಬಿಲ್ಲಿನ ಹೆದೆಯಾಗಿ ಸಮುದ್ರ ಮಂಥನ ಕಾಲದಲ್ಲಿ ಮಂಥಾರ ಪರ್ವತವೆಂಬ ಕಡಗೋಲಿಗೆ ಹಗ್ಗವಾಗಿ ದುರ್ಯೋಧನನ ಧ್ವಜ ಚಿಹ್ನೆಯಾಗಿ, ಭೂಮಿಯನ್ನು ಹೊತ್ತ ಆದಿಶೇಷನಾಗಿ, ಪಾರ್ಶ್ವನಾಥ ತೀರ್ಥಂಕರರ ಶಿರೋಲಾಂಛನವಾಗಿ ಪೂಜಾರ್ಹವಾಗಿದೆ. ನಾಗಪಂಚಮಿ ಹೆಚ್ಚಾಗಿ ಹೆಣ್ಣುಮಕ್ಕಳ ಹಬ್ಬ ಅವರಿಗೆ ಮಾಂಗಲ್ಯ ಪ್ರದ

ಸಂತಾನ ಪ್ರದ ಎಂಬುದು ಸಂಜಿಕೆ ಇದ್ದು ಹುತ್ತಗಳಿಗೆ ನಾಗರ ಕಲ್ಲುಗಳಿಗೆ ತುಪ್ಪ ಮತ್ತು ಹಾಲೆರೆದು ಪೂಜಿಸುತ್ತಾರೆ. ಅದೇ ರೀತಿ ಯಲಬುರ್ಗಾ ಪಟ್ಟಣದಲ್ಲಿ ವಿಜಯದಶಮಿ, ನವರಾತ್ರಿ, ಶ್ರೀರಾಮನವಮಿ, ವರಮಹಾಲಕ್ಷ್ಮಿ, ಹನುಮಜಯಂತಿ, ಹೋಳಿ ಹಬ್ಬಗಳನ್ನು ಸಡಗರ ಮತ್ತು ಸಂಭ್ರಮದಿಂದ ಆಚರಿಸುತ್ತಾರೆ.

**೮. ಕ್ರಿಸ್ ಮಸ್**

ಕ್ರಿಸ್ ಮಸ್ ಹಬ್ಬವನ್ನು ಕ್ರೈಸ್ತಬಾಂಧವರು ವಿಶ್ವದಾದ್ಯಂತ ಆಚರಿಸುತ್ತಾರೆ. ಭಾರತ ದೇಶದ ವಿವಿಧ ಕಡೆಗಳಲ್ಲಿ ಕ್ರಿಸ್‌ಮಸ್ ಆಚರಣೆ ವಿವಿಧ ರೀತಿಯಲ್ಲಿ ಇದ್ದರೂ ಹಲವಾರು ಆಚರಣೆಗಳು ವಿಧಿ ವಿಧಾನಗಳು ಒಂದೇ ಪ್ರಕಾರದಲ್ಲಿರುತ್ತವೆ. ಯೇಸು ಜನಿಸಿದ ಕೊಟ್ಟಿಗೆಯ ಪ್ರತಿಕೃತಿ, ಕ್ರಿಸ್‌ಮಸ್ ವೃಕ್ಷ, ನಕ್ಷತ್ರ, ರುಚಿಕರವಾದ ತಿಂಡಿ-ತಿನುಸುಗಳು ಈ ಹಬ್ಬಕ್ಕೆ ಮೆರಗು ನೀಡುತ್ತದೆ. ಚರ್ಚಿನಲ್ಲಿ ಧರ್ಮಗುರುಗಳು ವಿಶೇಷ ಶಾಂತಿ ಸಂದೇಶ ಸಾರುತ್ತಾರೆ. ಕ್ರಿಶ್ಚಿಯನ್ನರು ಪ್ರಾರ್ಥನೆ ಸಲ್ಲಿಸಿ ಮನೆಯಲ್ಲಿ ಬಂದು ಬಾಂದವರನ್ನು ಹಬ್ಬಕ್ಕೆ ಆಹ್ವಾನಿಸಿ ಬಾಂಧವ್ಯವನ್ನು ಬೆಸೆಯುತ್ತಾರೆ. ದಯೆ, ಪ್ರೀತಿ, ಕರುಣೆ, ಕ್ಷಮೆ, ಪೂಜೆ-ಪ್ರಾರ್ಥನೆಗಳು ಯೇಸು ಕ್ರಿಸ್ತನ ಸಂದೇಶಗಳು, ಕ್ರಿಶ್ಚಿಯನ್ನರು ಕ್ರಿಸ್‌ಮಸ್ ಅಲ್ಲದೆ ಗುಡ್‌ಪ್ರೈಡೆ ಮತ್ತು ಈಸ್ಟರ್ ಹಬ್ಬವನ್ನು ಆಚರಿಸುತ್ತಾರೆ.[೩೫]

**೯. ಮುಸಲ್ಮಾನರ ಹಬ್ಬಗಳು**

ರಂಜಾನ್ ಎಂಬುದು ಮುಸಲ್ಮಾನರ ಧಾರ್ಮಿಕ ಹಬ್ಬವಾಗಿದ್ದು ಉಪವಾಸ ವಿಶೇಷವಾಗಿದೆ. ಜುಲೈ ತಿಂಗಳಲ್ಲಿ ಆಚರಿಸುತ್ತಾರೆ. ಸ್ತ್ರೀ-ಪುರುಷರು, ಮಕ್ಕಳು, ಸೂರ್ಯೋದಯದಿಂದ ಸೂರ್ಯಾಸ್ತದವರೆಗೆ ಉಪವಾಸಮಾಡಿ, ಆಹಾರ, ನೀರು ಮದ್ಯವ್ಯಸನ ತ್ಯಜಿಸುತ್ತಾರೆ. ಸುಳ್ಳು ನಿಂದನೆ, ಮೋಸ, ವಂಚನೆ, ನಿಷಿದ್ಧ, ಮಸೀದಿಯಲ್ಲಿ ಕುರಾನ್ ಪಠನೆ ದಿನಕ್ಕೆ ೫ ಬಾರಿ ಪ್ರಾರ್ಥನೆ ಮಾಡುತ್ತಾರೆ. ರಾತ್ರಿ ಸಾದಾ ಊಟಮಾಡುತ್ತಾರೆ. ೩೦ನೇ ದಿನದ ಅಂತ್ಯದಲ್ಲಿ ಚಂದ್ರ ಕಾಣಿಸಿದಾಗ ಈದ್ ಹಬ್ಬ ಆಚರಿಸಿ ಪರಸ್ಪರ ಹೊಸ ಬಟ್ಟೆ ಧರಿಸಿ ಶುಭಾಷಯ ಕೋರುತ್ತಾರೆ. ಮಹಮ್ಮದೀಯರು ಮೆಕ್ಕಾಯಾತ್ರೆ ಕೈಗೊಳ್ಳುತ್ತಾರೆ. ದರ್ಗಾಗಳಲ್ಲಿ ಉರುಸ್ ಆಚರಿಸುತ್ತಾರೆ. ಮೊಹರಂ ಕೊನೆಯದಿನದಲ್ಲಿ ಹಿಂದೂ ಮುಸಲ್ಮಾನರು ಸೇರಿ ಧಾರ್ಮಿಕ ಬಾಂಧವ್ಯದಿಂದ ಅನೇಕ ಆಚರಣೆ ಕೈಗೊಳ್ಳುತ್ತಾರೆ.

ಹೀಗೆ ಮಹಮ್ಮದೀಯರ ಹಬ್ಬಗಳು ತ್ಯಾಗ, ಸೇವೆ, ಸಹಾಯ, ಭಾವೈಕ್ಯತೆ, ಪ್ರೀತಿ, ಪ್ರೇಮ, ಸಹಕಾರ ಮುಂತಾದ ಮಾನವೀಯ ಮೌಲ್ಯಗಳನ್ನು ಬಿತ್ತರಿಸುವುದನ್ನು ಕಾಣಬಹುದು.[೩೬]

**ಯಲಬುರ್ಗಾ ಪಟ್ಟಣದ ಬೆಳವಣಿಗೆ**

ಮೌರ್ಯರು, ಶಾತವಾಹನರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು ಹಾಗೂ ಕಲ್ಯಾಣ ಚಾಲುಕ್ಯ ವಂಶಗಳು ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿವೆ.

ಈಗಿನ ಯಲಬುರ್ಗಾವನ್ನು ಹಿಂದೆ 'ಯರಂಬರಗೆ', 'ಎರಂಬರವಿ', ಹೆಸರುಗಳಿಂದ ಕರೆಯುತ್ತಿದ್ದರು. ಅದು ಬಹು ವಿಸ್ತಾರಗೊಂಡ ರಾಜ್ಯದ ರಾಜಧಾನಿಯಾಗಿದ್ದಿತು. ಸಿಂದರೆಂಬ

ದಕ್ಷಿಣ ಭಾರತದ ಮಹಾಮಂಡಲೇಶ್ವರರಲ್ಲಿಯೇ ಪ್ರಮುಖರಾದವರು ಯಲಬುರ್ಗಿಯ ಸಿಂದರು ಇವರು ಕರ್ನಾಟಕವನ್ನು ಬೇರೆ ಬೇರೆ ಕಾಲಗಳಲ್ಲಿ ಆಳಿದ ಚಾಲುಕ್ಯ, ಕಲಚೂರಿ, ಯಾದವ ಮನೆತನಗಳಲ್ಲಿ ಗೌರವ ಹೊಂದಿ ಅವರ ಪರವಾಗಿ ಇತರ ಅರಸರೊಂದಿಗೆ ಹೋರಾಡಿ ಅರಸು ಮನೆತನದ ಬೆನ್ನೆಲುಬಾಗಿ ನಿಂತವರು ಚಾಲುಕ್ಯ ಅರಸು ಮನೆತನಕ್ಕಂತೂ ಈ ವಂಶದವರಿಂದ ಸಂದ ಸೇವೆ. ಅಮೂಲ್ಯವಾದದ್ದು.

ಸಿಂದವಂಶದ ಎರಡನೆ ಆಚುಗಿಯ ನಂತರ ಆತನ ಹಿರಿಯ ಮಗ ಒಂದನೆಯ ಪೆರ್ಮಾಡಿಯು ಪಟ್ಟಕ್ಕೆ ಬಂದನು (೧೧೨೫-೧೧೪೪) ಈತನು ಕುಕ್ಕನೂರ ೩೦ರ ಆಡಳಿವನ್ನು ನಡೆಸುತ್ತಿದ್ದನೆಂಬ ಸಂಗತಿಯು ಕಲ್ಲೂರಿನ ಒಂದು ಶಾಸನದಿಂದ ತಿಳಿದುಬರುತ್ತದೆ. ಈತನ ಕಾಲದಲ್ಲಿ ರಾಜಧಾನಿಯನ್ನು ಪಟ್ಟದ ಕಲ್ಲಿನಿಂದ ಯಲಬುರ್ಗಿಗೆ ಸ್ಥಳಾಂತರಿಸಲಾಯಿತು. ತಂದೆಯಂತೆ ಶೌರ್ಯ, ಸಾಹಸಗಳಿಗೆ ಹೆಸರಾಗಿದ್ದು ಆಳ್ವಿಕೆಯ ಕಾಲಾವಧಿಯಲ್ಲಿ ಕೃಷಿ ಮತ್ತು ವ್ಯಾಪಾರ ಅಭಿವೃದ್ಧಿ ಪಡಿಸಿದನು.[೩೭]

ಮುಂದೆ ಈ ಪ್ರದೇಶವು ವಿಜಯನಗರ, ಬಿಜಾಪುರ, ಮರಾಠರು, ಹಾಗೂ ಮೋಘಲ್ ಆಡಳಿತಕ್ಕೆ ಒಳಗಾಗಿ ನಿಜಾಮರ ವಶಕ್ಕೆ ಬಂತು. ಇಂಥ ಭವ್ಯ ಪರಂಪರೆಯ ಇತಿಹಾಸ ಹೊಂದಿದ ಯಲಬುರ್ಗ ಕ್ರಿ.ಶ.೧೮೬೧ರಲ್ಲಿ ಹೈದರಾಬಾದ ನಿಜಾಮರು ತಮ್ಮ ರಕ್ತ ಸಂಬಂಧಿ ಸಾಲರ್ ಜಂಗ್ ನವಾಬರಿಗೆ ಯಲಬುರ್ಗ ಹಾಗೂ ಕೊಪ್ಪಳ ತಾಲೂಕ ಒಳಗೊಂಡಂತೆ ಜಹಗೀರ ಜಿಲ್ಲೆಯನ್ನಾಗಿ ನೀಡಿದ ಪರಿಣಾಮ ಅಂದಿನಿಂದ ಇದು ಶಿಕ್ಷಣ, ಆರೋಗ್ಯ, ರಸ್ತಿ, ನೀರಾವರಿ, ಸಾರಿಗೆ ಸಂಪರ್ಕ ದಂತಹ ಸೌಕರ್ಯಗಳಿಂದ ವಂಚಿತವಾಗಿ ಹಿಂದುಳಿದ ಪ್ರದೇಶವಾಗಿ ಉಳಿಯಿತು. ಸ್ವತಂತ್ರ ನಂತರ ಯಲಬುರ್ಗ ಪಟ್ಟಣವು ಪಟ್ಟಣಪಂಚಾಯ್ತಿಯ ವ್ಯಾಪ್ತಿಗೆ ಒಳಪಟ್ಟು ೧೯೭೩ರಲ್ಲಿ ಪುರಸಭೆಯು ಸ್ಥಾಪನೆಗೊಳ್ಳುತ್ತದೆ.

ಪ್ರಾರಂಭದ ಕಾಲಘಟ್ಟದಲ್ಲಿ ಕೇಲವೆ ಸಾವಿರ ಜನಸಂಖ್ಯೆ ಸಂಖ್ಯೆಯನ್ನು ಒಳಗೊಂಡು ಪುರಸಭೆಯು ಕಾರ್ಯನಿರ್ವಹಿಸುತ್ತಿತ್ತು. ಈ ರೀತಿ ಹಂತಹಂತವಾಗಿ ಬೆಳೆದುಕೊಂಡು ಬಂದ ಯಲಬುರ್ಗ ಪಟ್ಟಣವು ಇಂದು ಬೃಹತ್ ಪಟ್ಟಣವಾಗಿ ಬೆಳೆದು ಆಧುನಿಕತೆಗೆ ಒಳಪಟ್ಟಿದೆ. ಪ್ರಸ್ತುತ ಯಲಬುರ್ಗ ಪಟ್ಟಣವು ೪ ಚ.ಕಿ.ಮೀ ವ್ಯಾಪ್ತಿ ಹೊಂದಿದ್ದು. ೧೫ ಸಾವಿರ ಜನಸಂಖ್ಯೆ ಹೊಂದಿದೆ. ೧೧ ವಾರ್ಡ್‌ಗಳನ್ನು ಒಳಗೊಂಡಿದೆ.

ಪ್ರತಿ ವರ್ಷವು ಯಲಬುರ್ಗ ಪಟ್ಟಣದ ವ್ಯಾಪ್ತಿಯು ವಿಸ್ತಾರಗೊಳ್ಳುತ್ತಿದ್ದು, ಪೂರ್ವಕ್ಕೆ ಕುದರಿ ಕೊಟಗಿ ಕ್ರಾಸ್ ಪಶ್ಚಿಮಕ್ಕೆ ಮುಧೋಳ, ಉತ್ತರಕ್ಕೆ ಹೊಸಳ್ಳಿ ಮತ್ತು ದಕ್ಷಿಣಕ್ಕೆ ಸಂಗನಾಳವರೆಗೂ ವಿಸ್ತಾರಗೊಳ್ಳುತ್ತ ಬೆಳೆಯುತ್ತಿದೆ. ಶಿಕ್ಷಣ ಸಂಸ್ಥೆಗಳು, ಬ್ಯಾಂಕಿಂಗ್ ಸೇವೆ, ಬಸ್ಸು ನಿಲ್ದಾಣ, ಉದ್ಯಾನವನ, ಸಮುದಾಯಭವನ, ನ್ಯಾಯಾಲಯ, ತಾಲೂಕ ಪಂಚಾಯ್ತಿ ಕಚೇರಿ, ಅರಕ್ಷಕ ಠಾಣೆ, ಕುಡಿಯುವ ನೀರು, ರಸ್ತೆ ಸೌಕರ್ಯ, ಅಂಚೆ ಮತ್ತು ತಂತಿ ವ್ಯವಸ್ಥೆ, ಮಾರುಕಟ್ಟೆ, ಕೈಗಾರಿಕೆಗಳು, ಅಂಗಡಿ ಮುಂಗಟ್ಟು ಸಾರಿಗೆ ಸೌಲಭ್ಯ ಮತ್ತು ಆರೋಗ್ಯ ಸೌಲಭ್ಯ

ಇನ್ನೂ ಹಲವಾರು ಕಾರ್ಯಚಟುವಟಿಕೆಗಳಿಂದ ಯಲಬುರ್ಗ ಪಟ್ಟಣವು ಅಭಿವೃದ್ಧಿ ಹೊಂದಲು ಸಹಕಾರಿಯಾಗಿದೆ.

**ಯಲಬುರ್ಗ ಪಟ್ಟಣದ ಪ್ರಮುಖ ವ್ಯಕ್ತಿಗಳು**

ಯಲಬುರ್ಗ ಪಟ್ಟಣವು ಐತಿಹಾಸಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಪ್ರಸಿದ್ಧಿ ಹೊಂದಿದ್ದು ವಿವಿಧ ಕ್ಷೇತ್ರಗಳಲ್ಲಿ ಇಲ್ಲಿನ ವ್ಯಕ್ತಿಗಳು ಗುರುತಿಸಿಕೊಂಡಿದ್ದಾರೆ.

ಯಲಬುರ್ಗ ಪಟ್ಟಣದಲ್ಲಿ ಸ್ವಾತಂತ್ರ್ಯ ಹೋರಾಟಗಾರರಾಗಿ ದಿ.ಶಿರೂರ ವೀರಭದ್ರಪ್ಪನವರು, ದಿ.ಶಂಕ್ರಪ್ಪ ಯರಾಶಿಯವರು, ದಿ.ರಾಘವೇಂದ್ರರಾವ್, ಬಿ.ದೇಸಾಯಿಯವರು ಮತ್ತು ಕರಮುಡಿ ಮಲ್ಲಪ್ಪ ಲಿಂಗೋ ಜಿ.ಶಂಕ್ರಪ್ಪ ಲಿಂಗೋಜಿ, ವೀರಪ್ಪಮಾನಶೆಟ್ಟಿ, ಭೀಮಜ್ಜ ಮುರಡಿ, ಪ್ರಭುರಾಜ ಪಾಟೀಲ, ಬಸವರೆಡ್ಡಿ ಅಬ್ಬಿಗೇರಿಯವರು ಗುರುತಿಸಿಕೊಂಡಿದ್ದು, ನಿಜಾಮ ಆಡಳಿತದ ವಿರುದ್ಧ ಯಲಬುರ್ಗಪಟ್ಟಣದಲ್ಲಿನ ಸಾಹಿತಿಗಳು, ರೈತಾಪಿವರ್ಗ, ವಿದ್ಯಾರ್ಥಿ ಸಮುದಾಯ ಹಾಗೂ ಮಹಿಳೆಯರಲ್ಲಿ ಸ್ವಾತಂತ್ರ್ಯದ ಬಗ್ಗೆ ಜಾಗೃತಿ ಮೂಡಿಸಿ ಹಲವಾರು ಸತ್ಯಾಗ್ರಹ, ರಸ್ತೆ ತಡೆ ಮಾಡಿ ಹಲವಾರು ಬಾರಿ ಜೈಲು ಸೇರಿದ್ದಾರೆ. ಇನ್ನು ಕೆಲವರು ತಮ್ಮ ಆಸ್ತಿ–ಪಾಸ್ತಿ ಕಳೆದುಕೊಂಡು ನಿಜಾಮರ ದೌರ್ಜನ್ಯದ ಮತ್ತು ದಾಸ್ಯತ್ವದ ವಿರುದ್ಧ ಹೋರಾಟ ಮಾಡಿ ದೇಶಕ್ಕೆ ಸ್ವತಂತ್ರ್ಯ ತಂದುಕೊಡುವಲ್ಲಿ ಯಶಸ್ವಿಯಾಗಿದ್ದಾರೆ.

ಸಜ್ಜನ ತಿಲಕ, ಗೋಮಕವಿ, ಆದಿತ್ಯ ದೇವ, ಧೂಪದ ರಾಜೇಶ, ದ್ಯಾಂಪುರದ ಚನ್ನಕವಿ, ಡಾ.ಸಿದ್ಧಯ್ಯ ಪುರಾಣಿಕ, ಡಾ.ಎನ್.ಆರ್.ಹಿರೇಮಠ, ಪಂ॥ ಮಹಾಲಿಂಗಯ್ಯನವರು, ಪಂ॥ ಕಲ್ಲಿನಾಥಶಾಸ್ತ್ರಿ, ಡಾ.ಬಿ.ವಿ.ಶಿರೂರ, ಸಿದ್ಧರಾಮಸ್ವಾಮಿ ಹಿರೇಮಠ, ಶ್ರೀಗುರು ವಿದ್ಯಾಸಾಗರ, ಷ.ಬ್ರ.ಸಿದ್ಧರಾಮಶಿವಾಚಾರ್ಯರು, ಚ.ಭೀ.ಮಾಸ್ತರ, ಈರಪ್ಪ ಕಂಬಳಿ ಮತ್ತೆ, ಶ್ರೀಮತಿ ಕೆ.ಶಾಂತಾ, ಅಲ್ಲಾವುದ್ದೀನ ಎಮ್ಮಿ, ಮುನಿಯಪ್ಪ ಹುಬ್ಬಳ್ಳಿ ಸಾಹಿತ್ಯ ಕ್ಷೇತ್ರದಲ್ಲಿ ಕೃಷಿ ಮಾಡಿದ್ದು, ಕನ್ನಡ ಸಾಹಿತ್ಯ ಜನಪದ ಕಂದಪದ್ಯ, ತ್ರಿಪದಿ, ಕೀರ್ತನೆ, ಪುರಾಣ ಕಾವ್ಯಗಳು, ನಾಟಕ, ಪತ್ತೇದಾರಿ ಕಾದಂಬರಿಗಳನ್ನು ಬರೆದು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಗುರುತಿಸಿಕೊಂಡಿದ್ದಾರೆ.

ರಾಜಕೀಯ ಕ್ಷೇತ್ರದಲ್ಲಿ ಶ್ರೀ ಶಿರೂರ ವೀರಭದ್ರಪ್ಪನವರು, ಲಿಂಗರಾಜ ದೇಸಾಯಿಯವರು, ರುದ್ರಗೌಡ ಕೆಂಚಮ್ಮನವರು, ಅಯ್ಯನಗೌಡ ಪಾಟೀಲರು, ಪ್ರಭುರಾಜ ಪಾಟೀಲರು, ಅಳವಂಡಿಶಂಕರ ಗೌಡರು, ಸುಭಾಸಪಾಟೀಲರು, ಚನ್ನಬಸವಗೌಡ ಪಾಟೀಲರು, ಶಿವಶರಣಪ್ಪಗೌಡ ಪಾಟೀಲರು, ಶ್ರೀ ಅಯ್ಯನ ಗೌಡ ಲಿಂಗನಗೌಡ ಪಾಟೀಲ, ಬಸವರಾಜ ರಾಯರಡ್ಡಿ, ಗುರುತಿಸಿಕೊಂಡು ನೀರಾವರಿ ಮತ್ತು ರೈತ ಹೋರಾಟಗಳಲ್ಲಿ ಭಾಗವಹಿಸಿ ಹಲವಾರು ಜನಪ್ರಿಯ ಕಾರ್ಯಗಳನ್ನು ಕೈಗೊಂಡು ಯಲಬುರ್ಗ ಪಟ್ಟಣವನ್ನು ಅಭಿವೃದ್ಧಿ ಪಡಿಸಿರುತ್ತಾರೆ.

ಅದೇ ರೀತಿ ಸಿನಿಮಾ ಮತ್ತು ನಾಟಕ ರಂಗದಲ್ಲಿ ತಳಕಲ್ಲ ವೆಂಕಟರೆಡ್ಡಿ, ಯರಾಸಿ ಬರಮಪ್ಪನವರು, ಅಂದಾನಪ್ಪ ಕುಕನೂರು, ಮಂಗಳೂರಿನ ಈರಣ್ಣ, ನೀಲಕಂಠಪ್ಪ ಹಮ್ಮಿಗಿ,

ಬಸವರಾಜ ತಾಳಕೇರಿ, ರಪಮಾನ್‌ಬಿ, ಈ ಕ್ಷೇತ್ರದಲ್ಲಿ ಗುರುತಿಸಿಕೊಂಡು ೨೫ ವೃತ್ತಿ ನಾಟಕ ಕಂಪನಿಗಳನ್ನು ಕಟ್ಟಿದ ಕೀರ್ತಿ ಈ ಪಟ್ಟಣಕ್ಕೆ ಸಲ್ಲುತ್ತದೆ.

ಲಲಿತ ಕಲೆಯಲ್ಲಿ ರಾಜ್ಯೋತ್ಸವ ಪುರಸ್ಕೃತರಾದ ಕಾಳಪ್ಪನವರು, ಶಂಕರ, ಶಿವಕುಮಾರ ಭಜಂತ್ರಿ, ಖಾನಗೌಡರು, ಬಿಸರಳ್ಳಿ, ಲಿಂಗಾರಜ, ಹನುಮಂತಪ್ಪ ಮುಧೋಳ, ಶಂಕರಬಿನ್ನಾಳ ದೇವೇಂದ್ರ ಕುಮಾರ ಪತ್ತಾರ, ಶ್ರೀಮತಿ ಶಶಿಕಲಾ, ಇವರ ಕೊಡುಗೆ ಅಪಾರ.

ಪತ್ರಿಕೋದ್ಯಮ ಕ್ಷೇತ್ರದಲ್ಲಿ ಹಲವಾರು ಜನ ಸಂಪಾದಕರಾಗಿ ಮತ್ತು ವರದಿಗಾರರಾಗಿ ಗುರುತಿಸಿಕೊಂಡಿದ್ದಾರೆ. ತಾಲೂಕಿನ ನ್ಯಾಯಾಧೀಶರಾಗಿ ರಾಜ್ಯಕ್ಕೆ ಅನುಪಮ ಸೇವೆಯನ್ನು ಸಲ್ಲಿಸುತ್ತಿರುವ ಪಟ್ಟಣದ ಮಾನ್ಯ ಶ್ರೀ ಎಸ್.ಎಮ್.ಶಿವನಗೌಡರ್, ಮಾನ್ಯ ಶ್ರೀ. ಬಾಳಪ್ಪ ಕೆ.ಭೂತೆ.

**ಯಲಬುರ್ಗ ಪಟ್ಟಣದ ವಿಶೇಷತೆ**

ಯಲಬುರ್ಗ ಪಟ್ಟಣವು ಚಾರಿತ್ರಿಕವಾಗಿಯು ಮತ್ತು ಸಾಂಸ್ಕೃತಿಕವಾಗಿಯು ಪ್ರಸಿದ್ಧಿ ಪಡೆದು ಹಲವಾರು ವೈಶಿಷ್ಟ್ಯಗಳಿಂದ ಕೂಡಿದ್ದು, ಜನಮನ್ನಣೆ ಪಡೆದುಕೊಂಡಿದೆ.

ಯಲಬುರ್ಗ ಪಟ್ಟಣದಲ್ಲಿ ಪ್ರತಿ ಶನಿವಾರದಂದು ಸಂತೆ ನಡೆಯುತ್ತದೆ. ಕೃಷಿ ಉತ್ಪನ್ನದ ಮಾರಾಟದ ಜೊತೆಗೆ ಅಕ್ಕಡಿಕಾಳುಗಳ ಮಾರಾಟಕ್ಕೆ ಪ್ರಸಿದ್ಧಿ ಪಡೆದಿದೆ.

ಯಲಬುರ್ಗ ಪಟ್ಟಣದ ವ್ಯಾಪ್ತಿಯಲ್ಲಿ ಕೆಂಪುಕೆರೆ, ಕರಿಕೆರೆ, ದೇವಾಲಯಗಳು, ಹಿರೇಮಠ, ಶ್ರೀಧರ ಮುರುಡಿ ಮಠ, ಉದ್ಯಾನವನಗಳು ಮತ್ತು ಆಟದ ಮೈದಾನಗಳು ಕಂಡುಬರುತ್ತವೆ.

**ಅಡಿಟಿಪ್ಪಣಿಗಳು**

೧. ಮುನಿರಾಜಪ್ಪ, ಮಾಗಡಿ ಸೀಮೆ ಇತಿಹಸ ಮತ್ತು ಸಂಸ್ಕೃತಿ, ೨೦೦೫, ಪುಟ-೯೫
೨. ಚಿದಾನಂದ ಮೂರ್ತಿ ಎಂ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೧೯೬೬, ಪುಟ-೪೨೦, ೪೩೧
೩. ವೃಷಬೇಂದ್ರಸ್ವಾಮಿ ಎಸ್.ಎಂ (ಸಂ), ಗವಿದೀಪ್ತಿ ಶ್ರೀ ಗವಿಸಿದ್ದೇಶ್ವರ ಕೃಪಾಪೋಷಿತ ವಿದ್ಯಾರ್ಥಿ ಬಳಗ ಶ್ರೀ ಗವಿಮಠ, ಕೊಪ್ಪಳ, ಪುಟ-೧೪೯
೪. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ, ಯಲಬುರ್ಗ-೩೮, ಪುಟ-೧೯೯
೫. ಅದೇ, ಯಲಬುರ್ಗ-೩೮, ಪುಟ-೧೯೯
೬. ಅದೇ, ಯಲಬುರ್ಗ-೬, ಪುಟ-೧೬೩
೭. ಅದೇ, ಯಲಬುರ್ಗ-೧, ಪುಟ-೧೬೦
೮. ಅಣ್ಣಿಗೇರಿ ಎ.ಎಂ, ಪಟ್ಟದಕಲ್ಲು ಗುಡಿಗಳು, ಪುಟ-೯೪
೯. South Indian Inscription, 9.9, xv, 47
೧೦. ಶಿರೂರ ಜಿ.ಪ್ಪ, ಯಲಬುರ್ಗ ಸಿಂದರು, ಪುಟ-೩೭
೧೧. ಅದೇ, ಪುಟ-೩೮

೧೨. ಶಿರೂರ ಬಿ.ವ್ಹಿ, ಸಿದ್ಧರಾಮ ಸಂಪದ, ಸಿದ್ಧರಾಮೇಶ್ವರ ಪ್ರಕಾಶನ, ಯಲಬುರ್ಗಾ, ೧೯೯೫, ಪುಟ-೨

೧೩. ಅದೇ, ಪುಟ-೨

೧೪. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ, ಕೊಪ್ಪಳ ಜಿಲ್ಲೆ-೨, ಯಲಬುರ್ಗಾ-೪೮

೧೫. ಅದೇ, ಯಲಬುರ್ಗಾ-೬೯

೧೬. ಅದೇ, ಯಲಬುರ್ಗಾ-೨೯

೧೭. ಅದೇ, ಯಲಬುರ್ಗಾ-೬೭

೧೮. ಅದೇ, ಯಲಬುರ್ಗಾ-೩೬

೧೯. ಅದೇ, ಯಲಬುರ್ಗಾ-೧

೨೦. ಅದೇ, ಯಲಬುರ್ಗಾ-೪

೨೧. ಅದೇ, ಯಲಬುರ್ಗಾ-೬

೨೨. ಶಿರೂರ ಬಿ.ವ್ಹಿ, ಸಿದ್ಧರಾಮ ಸಂಪದ, ಪೂರ್ವೋಕ್ತ, ಪುಟ-೧೪

೨೩. ಅದೇ, ಪುಟ-೨

೨೪. ಚಿದಾನಂದ ಮೂರ್ತಿ ಎಂ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೪೩೯

೨೫. ಸಿದ್ಧಲಿಂಗಪ್ಪ, ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ, ಪುಟ-೧೨೪

೨೬. ಲಕ್ಷ್ಮೀದೇವಿ, ಗ್ರಾಮ ಮತ್ತು ಶಿಷ್ಟ ದೇವತೆಗಳು, ಪುಟ-೨೧೭, ೨೧೮

೨೭. ಅದೇ, ಪುಟ-೧೨೭, ೧೨೮

೨೮. ಅದೇ, ಪುಟ-೧೪೭

೨೯. ಅದೇ, ಪುಟ-೧೭೨

೩೦. ಅದೇ, ಪುಟ-೧೯೫

೩೧. ಭಟ್ ವಿ.ಎನ್, ಭಾರತೀಯ ಹಬ್ಬಗಳ ವೈಶಿಷ್ಟ್ಯ, ಪುಟ-೧

೩೨. ಅದೇ, ಪುಟ-೨

೩೩. ಅದೇ, ಪುಟ-೩, ೬

೩೪. ರಮೇಶ ಸ.ಚಿ, ಕರ್ನಾಟಕ ಜಾನಪದ ಆಚರಣೆಗಳು, ಪುಟ-೧೩೦

೩೫. ಭಟ್ ವಿ.ಎನ್, ಪೂರ್ವೋಕ್ತ, ಪುಟ-೧೬೬, ೧೬೭

೩೬. ಅದೇ, ಪುಟ-೧೬೮, ೧೬೯

೩೭. ಶಾಮಾಚಾರ್ಯ ಜಿ, ಯಲಬುರ್ಗಿ ತಾಲೂಕ ದರ್ಶನ, ಪುಟ-೯

## ಅಧ್ಯಾಯ – ಆರು

# ಸಮಾರೋಪ

ಪುರಾತತ್ವ ಆಕರಗಳಲ್ಲಿ ಶಾಸನಗಳು ದೇವಾಲಯಗಳು, ಮತ್ತು ಕೆರೆ–ಕಟ್ಟೆಗಳು, ಸಮಕಾಲೀನ ರಾಜಕೀಯ, ಧಾರ್ಮಿಕ, ಆರ್ಥಿಕ, ಸಾಮಾಜಿಕ, ಸಾಹಿತ್ಯಿಕ ಮುಂತಾದ ವಿಷಯಗಳನ್ನು ಸಮಗ್ರವಾಗಿ ಅಧ್ಯಯನ ಮಾಡಲು ತುಂಬಾ ಸಹಾಯಕವಾಗುತ್ತದೆ. ಈ ಹಿನ್ನೆಲೆಯಲ್ಲಿ ಯಲಬುರ್ಗಾ ಪಟ್ಟಣದಲ್ಲಿ ಕ್ಷೇತ್ರಕಾರ್ಯ ಕೈಗೊಂಡಿದ್ದು, ಶಾಸನಗಳು, ದೇವಾಲಯಗಳು, ಮೂರ್ತಿಶಿಲ್ಪಗಳು ಕೆರೆ–ಕಟ್ಟೆಗಳು ಹಾಗೂ ಸಮಾಜ ಮತ್ತು ಸಂಸ್ಕೃತಿಯನ್ನು ಅವಲೋಕಿಸಿ ಸಾಂಸ್ಕೃತಿಕ ಇತಿಹಾಸವನ್ನು ವಸ್ತುನಿಷ್ಠವಾಗಿ ಪುನಾ ರಚಿಸುವ ಉದ್ದೇಶದೊಂದಿಗೆ ಪ್ರಾರಂಭವಾದ ಈ ಅಧ್ಯಯನದಲ್ಲಿ ಅನೇಕ ಮಹತ್ವದ ವಿಚಾರಗಳು ವ್ಯಕ್ತವಾಗಿವೆ.

ಯಲಬುರ್ಗ ಪಟ್ಟಣವು ಭೌಗೋಳಿಕವಾಗಿ ಸಮೃದ್ಧಿಯಿಂದ ಕೂಡಿದ್ದು. ಇತಿಹಾಸ ಪೂರ್ವಕಾಲದ (ಕ್ರಿ.ಪೂ.೩೦೦೦) ಜನವಸತಿ ಪ್ರದೇಶಗಳಾದ ಕಾತರಾಳ, ಕೆರೀಹಳ್ಳಿ, ಜದವಾಲ್, ಜರಗುಂಟೆ, ತಿಪ್ಪನಾಳ, ಕುಕನೂರು, ಲಿಂಗನ ಬಂಡಿ, ಸ್ಥಳಗಳ ಕಂಡುಬಂದಿದ್ದು ಈ ಪ್ರದೇಶದ ಪ್ರಾಚೀನತೆಗೆ ನಿದರ್ಶನವಾಗಿವೆ. ಈ ಪ್ರದೇಶದ ರಾಜಕೀಯ ಇತಿಹಸ ಗಮನಿಸಿದಾಗ ಮೌರ್ಯರು, ಶಾತವಾಹನರು, ಬಾದಾಮಿ ಚಾಲುಕ್ಯರು, ಗಂಗರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಲಚುರಿಗಳು, ದೇವಗಿರಿಯ ಯಾದವರು, ಹೊಯ್ಸಳರು, ವಿಜಯನಗರದ ಅರಸರು, ವಿಜಾಪುರದ ಆದಿಲ್‌ಷಾಹಿ, ಹೈದರಲಿ, ಮರಾಠರು, ಬ್ರಿಟಿಷರು, ನವಾಬರು, ಆಳ್ವಿಕೆ ಮಾಡಿರುವುದು ಸ್ಪಷ್ಟವಾಗುತ್ತದೆ.

ಭೌಗೋಳಿಕವಾಗಿ ವಿಸ್ತಾರವಾಗಿದ್ದ ಯಲಬುರ್ಗ ಪ್ರದೇಶವನ್ನು ವ್ಯವಸ್ಥಿತ ಆಡಳಿತ ದೃಷ್ಟಿಯಿಂದ ಅನೇಕ ವಿಭಾಗಗಳಾಗಿ ವಿಂಗಡಿಸಿದ್ದರಿಂದ ಯಲಬುರ್ಗ ಪ್ರದೇಶವು ಪ್ರಾಚೀನ ಕಾಲದಿಂದಲೂ ಆಡಳಿತದ ಪ್ರದೇಶವಾಗಿತ್ತೆಂದು ತಿಳಿಯುತ್ತದೆ. ಅಂದರೆ ಚಾಲುಕ್ಯರ ಕಾಲಾವಧಿಯಲ್ಲಿ ಈ ಭಾಗದ ಮಹಾಮಂಡಳೇಶ್ವರರಾದ ಸಿಂದರು ಯಲಬುರ್ಗವನ್ನು ರಾಜಧಾನಿಯನ್ನಾಗಿ

ಮಾಡಿಕೊಂಡು ಈ ಪ್ರದೇಶವನ್ನು ಪ್ರಸಿದ್ಧಿಗೆ ತಂದಿತು ಇಡೀ ಮನೆತನ ಯಲಬುರ್ಗಾ ಸಿಂದ ವಂಶ ಎಂದು ಪ್ರಸಿದ್ಧಿ ಪಡೆಯಿತು.

ಅದೇ ರೀತಿ ಯಲಬುರ್ಗದಲ್ಲಿ ಅನೇಕ ದೇವಾಲಯಗಳು ನಿರ್ಮಾಣಗೊಂಡಿದ್ದು, ಧಾರ್ಮಿಕ ಸಹಿಷ್ಣುತೆಗೆ ಕಾರಣವಾಗಿದೆ. ಶೈವದೇವಾಲಯಗಳು, ವೈಷ್ಣವ ದೇವಾಲಯಗಳು, ಶಾಕ್ತ ದೇವಾಲಯಗಳು, ಜೈನ ಬಸದಿಗಳು, ನಿರ್ಮಾಣಗೊಂಡು, ಧಾರ್ಮಿಕ ಕೇಂದ್ರವಾಗಿ ಹೊರಹೊಮ್ಮಿದ್ದು, ಹಲವು ರಾಜಮನೆತನಗಳು ದೇವಾಲಯಗಳಿಗೆ ಹಲವಾರು ದಾನದತ್ತಿಗಳನ್ನು ನೀಡಿರುವುದು ಇಲ್ಲಿನ ಶಾಸನಗಳಿಂದ ತಿಳಿದುಬಂದಿದೆ.

ಯಲಬುರ್ಗ ಪಟ್ಟಣದಲ್ಲಿ ಶೈವ ಮತ್ತು ವೈಷ್ಣವ ಧರ್ಮದ ಪ್ರಾಬಲ್ಯವಿದ್ದು ಜೈನ ಬಸದಿಗಳು ಇದ್ದರು ನಶಿಸಿ ಹೋಗುತ್ತಿವೆ. ಇಲ್ಲಿನ ಕೆಲವು ದೇವಾಲಯುಗಳು ಜೀರ್ಣೋದ್ಧಾರಗೊಂಡಿದ್ದು ಉತ್ತಮ ಸ್ಥಿತಿಯಲ್ಲಿವೆ. ಇನ್ನೂ ಕೆಲವು ದೇವಾಲಯಗಳಾದ ಸಿದ್ಧೇಶ್ವರ ದೇವಾಲಯ, ಚೌಕಿಮಠ, ಸಂಗಮೇಶ್ವರ ದೇವಾಲಯ, ಪಾಂಡುರಂಗ ದೇವಾಲಯಗಳು ತೋಪಿನ ಆಂಜನೇಯ ದೇವಾಲಯ ನಶಿಸುತ್ತಿದ್ದು ರಕ್ಷಣೆ ಮಾಡಬೇಕಾಗಿದೆ.

ಯಲಬುರ್ಗ ಪಟ್ಟಣದಲ್ಲಿ ಈವರೆಗೂ ೬ ಶಾಸನಗಳು ಕಂಡುಬಂದಿದ್ದು, ಕೊಪ್ಪಳ ಜಿಲ್ಲಾ ಶಾಸನ ಸಂಪುಟ-೩ರಲ್ಲಿ ಪ್ರಕಟವಾಗಿವೆ. ಇನ್ನೂ ಕೆಲವು ಶಾಸನಗಳು ಹೊಸದಾಗಿ ಸಿಗುವ ಸಾಧ್ಯತೆ ಇದೆ.

ಯಲಬುರ್ಗ ಪಟ್ಟಣದ ಸುತ್ತಮುತ್ತ ಕೆರೆ ಮತ್ತು ಬಾವಿಗಳು ನಿರ್ಮಾಣಗೊಂಡಿದ್ದು. ಪಟ್ಟಣದ ಬೆಳವಣಿಗೆಗೆ ಕಾರಣವಾಗಿದೆ. ಕೆರೆಗಳ ನಿರ್ಮಾಣದಲ್ಲಿ ಉನ್ನತ ತಂತ್ರಜ್ಞಾನ ಬಳಸಿ ಸ್ಥಳೀಯವಾಗಿ ದೊರೆಯುತ್ತಿದ್ದ ಕಲ್ಲುಗಳನ್ನು ಬಳಸಿಕೊಂಡು ವ್ಯವಸ್ಥಿತವಾಗಿ ಕೆರೆ ಮತ್ತು ಬಾವಿಗಳನ್ನು ನಿರ್ಮಿಸಿದ್ದಾರೆ. ಕೆರೆ ನೀರಾವರಿ ಆಧಾರಿತ ಬೆಳೆಗಳನ್ನು ಬೆಳೆದು ಜೀವನ ನಿರ್ವಹಣೆಗೆ ಸಹಕಾರಿಯಾಗಿವೆ. ಅಲ್ಲದೇ ಪಶುಸಂಗೋಪನೆಗಾಗಿ ಕುಡಿಯುವ ನೀರಿಗಾಗಿ, ಇಟ್ಟಿಗೆ ಉದ್ಯಮಕ್ಕಾಗಿ ಮತ್ತು ಮೀನುಗಾರಿಕೆಗೆ ಕೆರೆಗಳಲ್ಲಿನ ನೀರು ಉಪಯೋಗವಾಗುತ್ತಿದ್ದು ಹಲವು ನಂಬಿಕೆ, ಆಚರಣೆಗಳಿಗೆ ಒಳಪಟ್ಟಿರುತ್ತವೆ. ಇಷ್ಟೆಲ್ಲಾ ಅನುಕೂಲವಿರುವ ಕೆರೆಗಳು ಪ್ರಸ್ತುತ ಸಂದರ್ಭದಲ್ಲಿ ನಗರೀಕರಣದಿಂದ ಅವಸಾನದತ್ತ ಸಾಗಿವೆ. ಪ್ರಾಚೀನತೆಯಿಂದ ಕೂಡಿರುವ ಕೆರೆ ಮತ್ತು ಬಾವಿಗಳನ್ನು ಸಂರಕ್ಷಿಸಿ ಮುಂದಿನ ಪೀಳಿಗೆಗೆ ಬಳಕೆಗೆ ಬರುವಂತೆ ಮಾಡಬೇಕಾಗಿದೆ.

ಯಲಬುರ್ಗ ಪಟ್ಟಣದಲ್ಲಿನ ಸಮಾಜ ಮತ್ತು ಸಂಸ್ಕೃತಿಯ ಬಗ್ಗೆ ಹೇಳುವುದಾದರೆ, ಹಲವು ಧರ್ಮಗಳು, ಜಾತಿ ಜನಾಂಗಗಳು, ಆಚಾರ-ವಿಚಾರಗಳು, ನಂಬಿಕೆ-ಆಚರಣೆಗಳು, ಜಾತ್ರೆ-ಉತ್ಸವಗಳು, ರೂಢಿ-ಸಂಪ್ರದಾಯಗಳು ಮತ್ತು ಹಬ್ಬ-ಹರಿದಿನಗಳು ಆಚರಣೆಯಲ್ಲಿವೆ.

ಯಲಬುರ್ಗ ಪಟ್ಟಣದಲ್ಲಿ ಹಿಂದೂ, ಮುಸಲ್ಮಾನರು, ಜೈನರು ಹಾಗೂ ಕ್ರಿಶ್ಚಿಯನ್ ಸಮುದಾಯದವರು ಯಾವುದೇ ಧಾರ್ಮಿಕ ಕೆಡುಕು ಬಯಸದೇ ಅನ್ಯೋನ್ಯರಾಗಿದ್ದಾರೆ. ಇಲ್ಲಿನ ಜಾತಿ-ಜನಾಂಗದವರು ಬೇರ್ಪಡದೇ ಸಹಬಾಳ್ವೆ ಜೀವನ ನಡೆಸುತ್ತಿದ್ದಾರೆ. ವೃತ್ತಿಯಾಧಾರಿತ ಜಾತಿಗಳು ಕಣ್ಮರೆಯಾಗುತ್ತಿದ್ದು, ತಮ್ಮ ಆಯ್ಕೆ ಮತ್ತು ಅಭಿರುಚಿಗೆ ತಕ್ಕಂತೆ ವೃತ್ತಿಗಳನ್ನು ಆಯ್ಕೆ ಮಾಡಿಕೊಂಡು ಜೀವನ ಮಟ್ಟವನ್ನು ಸುಧಾರಿಸಿಕೊಂಡಿದ್ದಾರೆ.

ಹೀಗೆ ಯಲಬುರ್ಗಾ ಪಟ್ಟಣವು ಪ್ರಾಚೀನತೆಯನ್ನು ಹೊಂದಿ ಧಾರ್ಮಿಕ, ರಾಜಕೀಯ, ಸಾಮಾಜಿಕ, ಮತ್ತು ಆರ್ಥಿಕ ಅಂಶಗಳನ್ನು ಒಳಗೊಂಡು, ಸಾಂಸ್ಕೃತಿಕ ಕೇಂದ್ರವಾಗಿ ರೂಪಗೊಂಡಿದೆ ಎಂದು ಹೇಳಬಹುದು.

## ೧. ಗ್ರಂಥಋಣ


೧. ಅಪರ್ಣ ಕೂ.ಸೆ, **ದೇವಾಲಯ ವಾಸ್ತು ಶಿಲ್ಪ ಪರಿಚಯ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೨. ಅಲ್ಲಮಪ್ರಭು ಬೆಟ್ಟದೂರು (ಸಂ), **ಕೊಪ್ಪಳ ಜಿಲ್ಲಾ ದರ್ಶನ,** ಪ್ರಸಾರಾಂಗ, ಗುಲಬರ್ಗ ವಿಶ್ವವಿದ್ಯಾಲಯ, ಗುಲಬರ್ಗ, ೨೦೦೫

೩. ಇತಿಹಾಸ ದರ್ಶನ, **ಕರ್ನಾಟಕ ಇತಿಹಾಸ ಅಕಾಡೆಮಿ** (ರಿ), ಬೆಂಗಳೂರು, ಸಂಪುಟ-೧೩, ೧೯೯೮

೪. ಕಲಬುರ್ಗಿ ಎಂ.ಎಂ, **ಪ್ರಾಚೀನ ಕರ್ನಾಟಕ ಆಡಳಿತ ವಿಭಾಗಗಳು, ಭಾಗ-೧,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೫. ಕನ್ನಡ ವಿಷಯ ವಿಶ್ವಕೋಶ, **ಇತಿಹಾಸ ಮತ್ತು ಪುರಾತತ್ವ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೨೦೦೯

೬. ಕನ್ನಡ ನಿಘಂಟು, **ಕನ್ನಡ ಸಾಹಿತ್ಯ ಪರಿಷತ್ತು,** ಬೆಂಗಳೂರು, ೧೯೯೦

೭. ಗೋಪಾಲ್ ಆರ್ (ಸಂ), **ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೨೦೧೦

೮. ಚನ್ನಬಸಪ್ಪ ಎಸ್.ಪಾಟೀಲ್, **ಕರ್ನಾಟಕದ ಕೋಟೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೯. ಶರಣಬಸಪ್ಪ ಕೋಲ್ಕರ್, ಶಿಲಾಯುಗದ ಗವಿಚಿತ್ರಗಳು, ಬಸವ ಪ್ರಕಾಶನ, ಗುಲಬರ್ಗ, ೨೦೧೦

೧೦. ಚಿದಾನಂದ ಮೂರ್ತಿ ಎಂ, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೬೬

೧೧. ದೇವರ ಕೊಂಡಾರೆಡ್ಡಿ (ಸಂ), **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೧೨. ದೀಕ್ಷಿತ್ ಜಿ.ಎಸ್, ಕುಪ್ಪೆಸ್ವಾಮಿ ಜಿ.ಆರ್ ಮತ್ತು ಮೋಹನ್ ಎಸ್.ಕೆ (ಮೂಲ), ನೀಲತ್ತಹಳ್ಳಿ ಕಸ್ತೂರಿ (ಕನ್ನಡ ಅನುವಾದ), **ಕರ್ನಾಟಕದಲ್ಲಿ ಕೆರೆ ನೀರಾವರಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೧೩. ದೇಸಾಯಿ ಪಾಂಡುರಂಗರಾಯರು ಎಂ.ಎ, **ಶಾಸನ ಪರಿಚಯ,** ಕರ್ನಾಟಕ ಇತಿಹಾಸ ಸಂಶೋಧಕ ಮಂಡಲ, ಧಾರವಾಡ, ೧೯೫೬

೧೪. ಪಾಟೀಲ ಬಿ.ಸಿ, **ಇಟಗಿ ಮಹಾದೇವಾಲಯ,** ಹರಿಹರ ಪ್ರಕಾಶನ, ಕೊಪ್ಪಳ, ೨೦೦೧

೧೫. ಪಾಟೀಲ ಬಿ.ಸಿ, **ಕೊಪ್ಪಳ ಸಾಂಸ್ಕೃತಿಕ ಅಧ್ಯಯನ,** ಹರಿಹರ ಪ್ರಕಾಶನ, ಕೊಪ್ಪಳ, ೨೦೦೧

೧೬. ಪಾಟೀಲ ಬಿ.ಸಿ, **ಮಾದೆನೂರು ನೆನಹು,** ವಿಶಾಲ ಪ್ರಕಾಶನ, ಕೊಪ್ಪಳ, ೧೯೯೮

೧೭. ಭಟ್ ವಿ.ಎನ್, **ಭಾರತೀಯ ಹಬ್ಬಗಳ ವೈಶಿಷ್ಟ್ಯ,** ಪ್ರಾಚೀ ಪ್ರಿಂಟರ್ಸ್ ಪ್ರವೇಟ್ ಲಿಮಿಟೆಡ್, ಬೆಂಗಳೂರು, ೨೦೦೨

೧೮. ಮೇಲಕಾರ ಎಸ್.ಕೆ, **ಕೊಪ್ಪಳ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೧

೧೯. ಮುನಿಯಪ್ಪ, ಹುಬ್ಬಳ್ಳಿ, **ಯಲಬುರ್ಗ ತಾಲೂಕ ೯ನೇ ಕನ್ನಡ ಸಾಹಿತ್ಯ ಸಮ್ಮೇಳನ,** ತರಲಕಟ್ಟಿ, ೨೦೧೪

೨೦. ರಾಜಾರಾಮ ಹೆಗಡೆ (ಸಂ), **ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೨೧. ರಹಮತ್ ತರೀಕೆರೆ, **ಸಾಂಸ್ಕೃತಿಕ ಅಧ್ಯಯನ,** ಕರ್ನಾಟಕ ಸಾಹಿತ್ಯಿಕ ಅಕಾಡೆಮಿ, ಬೆಂಗಳೂರು, ೨೦೦೪

೨೨. ವೃಷಬೇಂದ್ರಸ್ವಾಮಿ ಎಸ್.ಎಂ (ಸಂ), **ಗವಿದೀಪ್ತಿ,** ಗವಿಸಿದ್ದೇಶ್ವರ ಕೃಪಾಪೋಷಿತ ವಿದ್ಯಾರ್ಥಿ ಬಳಗ ಶ್ರೀಮಠ, ಕೊಪ್ಪಳ, ೧೯೭೬

೨೩. ವಾಸುದೇವನ್ ಸಿ.ಎಸ್, **ಹಂಪಿ ಪರಿಸರದ ಕೆರೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೨೪. ಶಾಮಾಚಾರ್ಯ ಜಿ, **ಯಲಬುರ್ಗಿ ತಾಲೂಕ ದರ್ಶನ,** ಐ.ಬಿ.ಹೆಚ್ ಪ್ರಕಾಶನ, ಬೆಂಗಳೂರು, ೧೯೮೬

೨೫. ಶಿರೂರ ಬಿ.ವ್ಹಿ, **ಸಿದ್ಧಶ್ರೀ,** ಶ್ರೀ ಸಿದ್ಧರಾಮೇಶ್ವರ ಪ್ರಕಾಶನ, ಯಲಬುರ್ಗಿ, ೨೦೦೦

೨೬. ಶಾಂತಕುಮಾರಿ ಎಸ್.ಎಲ್, **ಕುಕನೂರು ಒಂದು ಸಾಂಸ್ಕೃತಿಕ ಸಮೀಕ್ಷೆ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೫

೨೭. ಶಿರೂರ ಬಿ.ವ್ಹಿ, **ಸಿದ್ಧರಾಮ ಸಂಪದ,** ಶ್ರೀ ಸಿದ್ಧರಾಮೇಶ್ವರ ಪ್ರಕಾಶನ, ಯಲಬುರ್ಗಿ, ೧೯೯೫

೨೮. ಶಿರೂರ ಬಿ.ವ್ಹಿ, **ಯಲಬುರ್ಗಿ ಸಿಂದರು,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೭

೨೯. ಸಿದ್ಧಲಿಂಗಪ್ಪ ಕೊಟ್ನೆಕಲ್, **ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಅಧ್ಯಯನ,** ಮೇಘನಾ ಪ್ರಕಾಶನ, ಕೊಪ್ಪಳ, ೨೦೧೦

೩೦. ಸುರೇಶ್ ಕೆ.ಎಂ (ಸಂ), **ಕರ್ನಾಟಕ ದೇವಾಲಯ ಕೋಶ,** ಕೊಪ್ಪಳ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೩೧. ಹಂಪ ನಾಗರಾಜಯ್ಯ, **ಕೊಪ್ಪಳ ಶಾಸನಗಳು,** ರತ್ನತ್ರಯ ಪ್ರಕಾಶನ, ಮೈಸೂರು, ೧೯೯೮

## ಇಂಗ್ಲೀಷ್ ಗ್ರಂಥಗಳು

೧. Allchin F.R, **Neolithic Cattle Keepers of South India,** Cambrige, 1963
೨. **A.R.Hydrabad Arch Dept Apendix-36,** 1935
೩. Desai P.B, Shrinivas H.Riffi and Gopal, **A History of Karnataka,** 1981, p-184
೪. Gopal B.R, **Minor Dynasties of South India,** Karnataka, 1982
೫. **Indian Hrachologycal Revew-1,** 1970

## ಅಪ್ರಕಟಿತ ಸಂಶೋಧನಾ ಪ್ರಬಂಧಗಳು

೧. ಅಶ್ವಥ್ ಡಿ.ಎಸ್, **ಕೊಪ್ಪಳ : ಒಂದು ಅಧ್ಯಯನ** ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧
೨. ಇಬ್ರಾಹಿಂಸಾಬ್, **ಕೊಪ್ಪಳ ಜಿಲ್ಲೆಯ ಐತಿಹಾಸಿಕ ಸ್ಥಳಗಳ ಸಾಂಸ್ಕೃತಿಕ ಅಧ್ಯಯನ,** ಎಂ.ಫಿಲ್ ಸಂಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧
೩. ದೀಪಕ ಆಲೂರು, **ಸಿಂದ ಮನೆತನದ ರಾಜಕೀಯ ಮತ್ತು ಸಾಂಸ್ಕೃತಿಕ ಅಧ್ಯಯ,** ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨
೪. ನಿಂಗಮ್ಮ, **ಕೊಪ್ಪಳ ಜಿಲ್ಲೆಯ ದೈವಗಳು; ಜಾನಪದೀಯ ಅಧ್ಯಯನ,** ಎಂ.ಫಿಲ್ ಸಂಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೫. ಚವ್ಹಾಣ ರವಿ ನಾನಾ, **ಕುಷ್ಟಗಿ ತಾಲ್ಲೂಕಿನ ಶಾಸನಗಳು ಮತ್ತು ಸ್ಮಾರಕಗಳು,** ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೬. ರೇವಣ ಸಿದ್ಧಯ್ಯ ಕೆ, **ಕುಣಿಗಲ್ ಪಟ್ಟಣದ ಸಾಂಸ್ಕೃತಿಕ ಅಧ್ಯಯನ,** ಎಂ.ಫಿಲ್ ಸಂಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪
೭. ರವಿ, ವಾಸುರಾಮ ನಾಯಕ, **ಕಿನ್ನಾಳ ಕಲೆ : ಒಂದು ಅಧ್ಯಯನ,** ಎಂ.ಫಿಲ್, ಸಂಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬
೮. ಶರಣಪ್ಪ ವೈ. ತಳವಾರ, **ಯಲಬುರ್ಗ ಪ್ರದೇಶದ ಚನ್ನದಾಸರ ಸಮುದಾಯದ ಚಾರಿತ್ರಿಕ ಅಧ್ಯಯನ,** ಎಂ.ಫಿಲ್ ಸಂಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯
೯. ಶಿವಯ್ಯ ಮಡಿವಾಳಯ್ಯ ಮಠ, **ಕಲ್ಯಾಣ ಚಾಲುಕ್ಯರ ದನ-ದತ್ತಿಗಳು : ಒಂದು ಅಧ್ಯಯನ,** ಪಿಎಚ್.ಡಿ, ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨
೧೦. ಸುಜಾತ ಮಲ್ಲನಗೌಡ, **ರಾಯಚೂರು ಮತ್ತು ಕೊಪ್ಪಳ ಜಿಲ್ಲೆಯ ಕೋಟೆಗಳು : ಒಂದು ಅಧ್ಯಯನ** ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

## ಪತ್ರಿಕಾ ಲೇಖನಗಳು

೧. ಉಮಾಶಂಕರ ಬಿ. ಹಿರೇಮಠ, **ತೋಪಿನ ಹನುಮಪ್ಪನ ದೇಗುಲ,** ಕರ್ಮವೀರ ಪತ್ರಿಕೆ ೨೨.೮.೧೯೯೯
೨. ಉಮಾಶಂಕರ ಬಿ. ಹಿರೇಮಠ, **ಅವನತಿಯತ್ತ ಸಿದ್ಧೇಶ್ವರ ದೇಗುಲದ ಶಿಲಾಮಂಟಪ,** ಸಂಯುಕ್ತ ಕರ್ನಾಟಕ ದಿನ ಪತ್ರಿಕೆ ೩.೧೦.೧೯೯೯
೩. ಉಮಾಶಂಕರ ಬಿ. ಹಿರೇಮಠ, **ಕಳಬೇಡ ಬಂದ ದಾರಿ ಬಿಡಿ...!,** ಜನಪದ ಮಾಸ ಪತ್ರಿಕೆ, ೨೦೦೨, ಪುಟ-೧೭, ೧೮ ಮಾರ್ಚ್

# ಛಾಯಾ ಚಿತ್ರಗಳು



ಹಿರೇಮಠದಲ್ಲಿರುವ ಶಿವಲಿಂಗ



ವೇಂಕಟ ರಮಣ ಮೂರ್ತಿಶಿಲ್ಪ



ಬೂದೇವಿಶಿಲ್ಪ



ಶೈವ ಶಿಲಾ ಶಾಸನ



ಮೂಗ್ಗಿ ಬಸವೇಶ್ವರ ದೇವಾಲಯ



ದರ್ಗಾ



ರುದ್ರಭೂಮಿ ಆಂಜನೇಯ



ಸಿದ್ದೇಶ್ವರ ಶಿಲಾಮಂಟಪ



ಸಿದ್ದೇಶ್ವರ ಶಿಲಾಮಂಟಪದ ಭುವನೇಶ್ವರಿ



ಸಿದ್ದೇಶ್ವರ ಶಿಲಾಮಂಟಪದ ನವರಂಗ




ಸಂಗಮೇಶ್ವರ ಮಠ



ವೀರಭದ್ರೇಶ್ವರ ದೇವಾಲಯ

